


# ತುರ್ತು ಗರ್ಭನಿರೋಧಕ ಗುಳಿಗೆಗಳು




ತುರ್ತು ಗರ್ಭನಿರೋಧಕ ಗುಳಿಗೆಗಳೆಂದರೆ ಹೆಸರೇ ಹೇಳುವಂತೆ ಗರ್ಭಧಾರಣೆಯನ್ನು ತುರ್ತು ಸಂದರ್ಭದಲ್ಲಿ ತಡೆಗಟ್ಟುವುದಕ್ಕೆ ಮಹಿಳೆಯರು ಉಪಯೋಗಿಸುವ ಗುಳಿಗೆಗಳು. ಇದನ್ನು ತುರ್ತು ಸಮಯದಲ್ಲಿ ಮಾತ್ರ ಉಪಯೋಗಿಸಬೇಕು. ನಿರಂತರವಾಗಿ ಉಪಯೋಗಿಸಬಾರದು.

## ತುರ್ತು ಗರ್ಭನಿರೋಧಕ ಗುಳಿಗೆಗಳನ್ನು ಯಾವಾಗ ಉಪಯೋಗಿಸಬೇಕು

ಅ) 2-3 ದಿವಸಗಳು ಸತತವಾಗಿ ನುಂಗುವ ಗುಳಿಗೆಗಳನ್ನು ತೆಗೆದುಕೊಳ್ಳದೆ ಇದ್ದಾಗ

ಆ) ಬಲಾತ್ಕಾರವಾಗಿ ಅತ್ಯಾಚಾರವೆಸಗಿದ ಸಂದರ್ಭದಲ್ಲಿ

ಇ) ಲೈಂಗಿಕ ಕ್ರಿಯೆಯಲ್ಲಿ ಯೋನಿಯಿಂದ ಶಿಶ್ನವನ್ನು ಹೊರ ತೆಗೆಯುವುದಕ್ಕೆ ಮುಂಚೆ ವೀರ್ಯಸ್ರಾವವಾದಾಗ

ಈ) ಸುರಕ್ಷಿತ ಅವಧಿಯ ವಿಧಾನದಲ್ಲಿ ಲೆಕ್ಕಾಚಾರ ತಪ್ಪಿದಾಗ

ಉ) ಸಂಭೋಗ ಸಮಯದಲ್ಲಿ ನಿರೋಧ್ ಹರಿದುಹೋದಾಗ ಮತ್ತು ಜಾರಿ ಹೋಗಿದ್ದ ಸಂದರ್ಭದಲ್ಲಿ

- ತುರ್ತು ಗರ್ಭನಿರೋಧಕ ಗುಳಿಗೆಗಳನ್ನು ಅಸುರಕ್ಷಿತ ಲೈಂಗಿಕ ಕ್ರಿಯೆ ನಡೆದ 72 ಗಂಟೆಯೊಳಗೆ ಸೇವಿಸಬೇಕು.
- ಅಸುರಕ್ಷಿತ ಲೈಂಗಿಕ ಕ್ರಿಯೆ ನಡೆದ 12-24 ಗಂಟೆಯ ಒಳಗಡೆ ತುರ್ತು ಗರ್ಭನಿರೋಧಕ ಗುಳಿಗೆಗಳನ್ನು ಸೇವಿಸಿದರೆ ತುಂಬಾ ಪರಿಣಾಮಕಾರಿಯಾಗುತ್ತದೆ.

**ನೆನಪಿಡಿ**

**ಈ ಗುಳಿಗೆಗಳು ಸಂತಾನ ನಿಯಂತ್ರಣ ವಿಧಾನವಲ್ಲ**
**ಈ ಗುಳಿಗೆಗಳನ್ನು ಸೇವಿಸುವುದರಿಂದ ಗರ್ಭಪಾತವಾಗುವುದಿಲ್ಲ**

**ಹೆಚ್ಚಿನ ಮಾಹಿತಿಗೆ ಮಹಿಳಾ ಆರೋಗ್ಯ ಸಹಾಯಕಿಯರನ್ನು ಸಂಪರ್ಕಿಸುವುದು**

ಪ್ರಕಟಣೆ : ಮಾಹಿತಿ ಶಿಕ್ಷಣ ಮತ್ತು ಸಂಪರ್ಕ ವಿಭಾಗ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಆನಂದರಾವ್ ವೃತ್ತ, ಬೆಂಗಳೂರು - 560 009

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...




ಚಿತ್ರಗಳು : ವೆಂಕಟ್, ಆಚಾರ್ಯ, ಶ್ರೀಹರಿ, ಜಿ. ಎಂ. ಬೊಮ್ಮಳ್ಳಿ, ಕಮಲಂ ಅರಸು

ಮುಖಚಿತ್ರ : ಕೆ. ಪಿ. ಸ್ವಾಮಿ. ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ಇದೇ ಫೆಬ್ರವರಿ ೧೯ರಂದು 'ದಿ ಹಿಂದು' ಪತ್ರಿಕೆಯಲ್ಲಿ ಪ್ರಸಿದ್ಧ ಇತಿಹಾಸಕಾರ ಎರಿಕ್ ಹಾಬ್ಸ್‌ಬಾಮ್ ಬರೆದ ಲೇಖನ ವೊಂದನ್ನು ಪ್ರಕಟ ಮಾಡಿರದಿದ್ದರೆ ಇನ್ನೊಬ್ಬ ಖ್ಯಾತ ಇತಿಹಾಸತಜ್ಞ ವಿಕ್ಟರ್ ಗಾರ್ಡನ್ ಕೀರ್ನನ್ ತನ್ನ ೯೫ನೆಯ ವಯಸ್ಸಿನಲ್ಲಿ ತೀರಿಕೊಂಡಿದ್ದು ತಿಳಿಯುತ್ತಿರಲಿಲ್ಲವೇನೋ. ಅವನು ಮೈಕೇಲ್ ಜಾನ್ಸನ್ ಮತ್ತು ಜೇಡ್ ಗೂಡಿಯಷ್ಟು ಪ್ರಸಿದ್ಧನಲ್ಲವಲ್ಲ, ಅದಕ್ಕೆ. ಆದರೆ ವಿದ್ವತ್ಪ್ರಪಂಚದಲ್ಲಿ ಮತ್ತು ವಿಶ್ವದ ಕಮ್ಯುನಿಸ್ಟ್ ಚಳುವಳಿಯ ಇತಿಹಾಸದಲ್ಲಿ ಅವನು ಅಸಾಧಾರಣನಾದ ಅತಿಸಾಮಾನ್ಯ ವ್ಯಕ್ತಿ. ಕೇಂಬ್ರಿಜ್‌ನ ಟ್ರಿನಿಟಿ ಕಾಲೇಜಿನಿಂದ ಪದವಿ ಪಡೆದ ಕೀರ್ನನ್ ಹಲವು ವರ್ಷಗಳ ಕಾಲ ಭಾರತದಲ್ಲಿ ಕಾಲೇಜು ಉಪನ್ಯಾಸಕನಾಗಿದ್ದ, ಹಲವು ಪುಸ್ತಕಗಳನ್ನು ಬರೆದ, ಕಮ್ಯುನಿಸ್ಟ್ ನೇತಾರ ಪಿ. ಸಿ. ಜೋಶಿಯವರಂತಹವರ ಸಂಗಾತಿಯಾಗಿದ್ದ ಮತ್ತು ಮುಂಬೈನಲ್ಲಿ ಕಮ್ಯುನಿಸ್ಟ್ ಪಕ್ಷ ನಡೆಸುತ್ತಿದ್ದ 'ಕಮ್ಯೂನ್'ನಲ್ಲಿ ವಾಸವಾಗಿದ್ದ. ನಂತರ ಬ್ರಿಟನ್ನಿನಲ್ಲಿ ಎಡಿನ್‌ಬರೋ ವಿಶ್ವವಿದ್ಯಾ ನಿಲಯದ ಇತಿಹಾಸ ಪ್ರಾಧ್ಯಾಪಕನಾಗಿ ಸುಮಾರು ಮೂರು ದಶಕಗಳ ಕಾಲ ಕೆಲಸಮಾಡಿ ವಿಶಿಷ್ಟ ಸಂಶೋಧನೆಗಳನ್ನು ಕೈಗೊಂಡ. ೧೯೮೫ರ ಮೇ ತಿಂಗಳಲ್ಲಿ ಆತ ಬೆಂಗಳೂರಿನಲ್ಲಿದ್ದುಕೊಂಡು ಕೆಲವು ಉಪನ್ಯಾಸಗಳನ್ನು ನೀಡಿದ್ದ. ಪ್ರಸ್ತುತ ಲೇಖಕನಿಗೆ ಕೀರ್ನನ್ ಬಹಳ ಆತ್ಮೀಯ ಮಿತ್ರನಾಗಿದ್ದ. ಮೈಸೂರು - ಶ್ರೀರಂಗಪಟ್ಟಣ ನೋಡಲು ಅವನ ಜೊತೆ ಹೋಗಿದ್ದುದು ಅವಿಸ್ಮರಣೀಯ. ''ನನಗೆ ಪುಸ್ತಕಗಳ ಮೂಲಕ ಚಿರಪರಿಚಿತವಾದ ಈ ಸ್ಥಳಗಳನ್ನೆಲ್ಲಾ ನೋಡುತ್ತಿರುವುದು ಒಂದು ಸಂಭ್ರಮ. ಟಿಪ್ಪು ಬಗ್ಗೆ ನನಗೆ ಬಹಳ ಆದರವಿದೆ. ಆ ಕಾಲಕ್ಕೆ ಅವನು ತನ್ನ ಸಮಕಾಲೀನರನ್ನು ಮೀರಿ ಬೆಳೆದಿದ್ದ ಮತ್ತು ದೂರದೃಷ್ಟಿ ಉಳ್ಳವನಾಗಿದ್ದ'' ಎಂದು ಹೇಳುತ್ತಾ ಹೈದರ್ - ಟಿಪ್ಪು ಕಾಲದ ಜೀವನ, ಸಂಘರ್ಷ, ಬ್ರಿಟಿಷರ ವಿರುದ್ಧ ಹೋರಾಟ, ಟಿಪ್ಪುವಿನ ಸಾವು, ಇತ್ಯಾದಿಗಳ ಬಗ್ಗೆ ದೀರ್ಘ ವಿವರಣೆಗಳನ್ನು ನೀಡಿದ. ಬೆಂಗಳೂರಿನಿಂದ ಬಸ್ಸಿನಲ್ಲಿ ಹೋಗಿ ಮೈಸೂರಿನಲ್ಲಿ ಒಂದು ಬಾಡಿಗೆ ಕಾರನ್ನು ಪಡೆದು ಮೈಸೂರು - ಶ್ರೀರಂಗಪಟ್ಟಣಗಳಲ್ಲಿ ಬೇಕಾದಷ್ಟು ಸುತ್ತಾಡಿದ್ದೆವು. ಊರಿಗೆ ಹೋದನಂತರ ಅವನೇ ಬರೆದ ''ಫ್ರಂ ಕಾಂಕ್ವೆಸ್ಟ್ ಟು ಕೊಲ್ಯಾಪ್ಸ್'' (೧೮೧೫ರಿಂದ ೧೯೬೦ರವರೆಗಿನ ಯೂರೋಪಿನ ಸಾಮ್ರಾಜ್ಯಗಳ ಕತೆ) ಎಂಬ ಅಮೂಲ್ಯ ಪುಸ್ತಕವನ್ನು ಕಳಿಸಿದ್ದ. ಅದು ಈಗಲೂ ನನ್ನ ಬಳಿ ಇದೆ. ಅಂತೆಯೇ ''ಮಾರ್ಕ್ಸಿಸಂ ಅನ್ ಲಿಟರೇಚರ್'' ಎಂಬ ಪುಸ್ತಕವನ್ನು ಕೊಟ್ಟಿದ್ದ. ಅದರಲ್ಲಿ ಅವನ ''ವರ್ಡ್ಸ್‌ವರ್ತ್ ಮತ್ತು ಜನತೆ'' ಎಂಬ ಅಪೂರ್ವವಾದ ಲೇಖನವಿದೆ. ''ದ ಲಾರ್ಡ್ಸ್ ಆಫ್ ಹ್ಯೂಮನ್ ಕೈಂಡ್'' ಮತ್ತು ''ಮಾರ್ಕ್ಸಿಸಂ ಅಂಡ್ ಇಂಪೀರಿಯಲಿಸಂ'' ಎಂಬುವ ಆತನ ಇನ್ನೆರಡು ಕೃತಿಗಳು. ಭಾರತದ ಹಾಗೂ ಬ್ರಿಟನ್ನಿನ ಕಮ್ಯುನಿಸ್ಟ್ ಚಳುವಳಿಗಳಲ್ಲಿ ಅವನ ಪಾತ್ರ ಗಮನಾರ್ಹವಾದ್ದು. ''ಅಕ್ರಾಸ್ ಟೈಂ ಅಂಡ್ ಕಾಂಟಿನೆಂಟ್ಸ್'' ಎಂಬ ಕೀರ್ನನ್ ಬರಹಗಳ ಸಂಗ್ರಹವನ್ನು ಪ್ರಕಾಶ್ ಕಾರಟ್ ಅವರು ಕೀರ್ನನ್ ೯೦ನೆಯ ಹುಟ್ಟುಹಬ್ಬದಂದು ಹೊರತಂದಿದ್ದರು. ಸಾಹಿತ್ಯ ಮತ್ತು ಇತಿಹಾಸ ವನ್ನು ಕುರಿತ ಬೇರೆ ಹತ್ತಾರು ಪುಸ್ತಕಗಳನ್ನು ಆತ ಪ್ರಕಟಿಸಿದ್ದಾನೆ. ಅವು ಮಾರ್ಗದರ್ಶಿ ಪುಸ್ತಕ ಗಳೆಂಬುದರಲ್ಲಿ ಸಂಶಯವಿಲ್ಲ. ೧೯೯೬ರಲ್ಲಿ ಅವನು ಪ್ರಕಟಿಸಿದ್ದ ''ಶೇಕ್ಸ್‌ಪಿಯರ್ – ಪೊಯೆಟ್ ಅಂಡ್ ಸಿಟಿಜನ್'' ಎಂಬ ಪುಸ್ತಕವು ಅನನ್ಯವಾದ್ದು. ಅವನ ಸಾವಿನಿಂದ ಒಬ್ಬ ಪ್ರಭಾವಶಾಲಿ ಚಿಂತಕ ಮತ್ತು ಕಾರ್ಯಕರ್ತನನ್ನು ವಿಶ್ವದ ಕಮ್ಯುನಿಸ್ಟ್ ಚಳುವಳಿಯು ಕಳೆದುಕೊಂಡಿದೆ.

* * *

ವಿದೇಶದ ಇನ್ನೊಂದು ಸುದ್ದಿ ನಿಜಕ್ಕೂ ಮೈನವಿರೇಳಿಸುವಂಥದು. ವಿಶ್ವದ ಕಾರ್ಮಿಕ ವರ್ಗದ ಐಕ್ಯತೆಗೆ ಮತ್ತು ಜಂಟಿ ಹೋರಾಟಕ್ಕೆ ಇದೊಂದು ಮಾದರಿ ಎನ್ನಬಹುದು. ಅಂತಹ ಘಟನೆಗಳಲ್ಲಿ ಇದೇನೂ ಮೊದಲಿನದಲ್ಲ. ಆದರೂ ಈಚಿನ ದಿನಗಳಲ್ಲಿ ಅಂತಹ ಕಾರ್ಯಾಚರಣೆಯನ್ನು ನೋಡುವುದು ದುರ್ಲಭವೆನಿಸಿತ್ತು. ಪ್ಯಾಲಿಸ್ಟೈನಿನ ಮೇಲೆ ಇತ್ತೀಚೆಗೆ ಮತ್ತೊಂದು ದುರಾಕ್ರಮಣ ನಡೆಸಿದಾಗ ಇಸ್ರೇಲ್ ಸೈನ್ಯವು ಸಾವಿರಾರು ಪ್ಯಾಲಿಸ್ಟೈನ್ ಜನರನ್ನು ಕೊಂದಿತು ಮತ್ತು ಕೋಟಿ ಗಟ್ಟಲೆ ಬೆಲೆಬಾಳುವ ಮನೆ - ಆಸ್ಪತ್ರೆ - ಶಾಲೆ ಮುಂತಾದವನ್ನು ನೆಲಸಮ ಮಾಡಿತು. ಭಾರತವು ಯಾವ ರೀತಿಯಲ್ಲೂ ಈ ದುರಾಕ್ರಮಣವನ್ನು ಖಂಡಿಸದಿದ್ದುದು ನಮ್ಮ ಕೇಂದ್ರ ಸರ್ಕಾರದ ದಿವಾಳಿತನದ ಸೂಚನೆ ಮತ್ತು ಇಸ್ರೇಲ್ ಒಡನೆ ಕೋಟಿಗಟ್ಟಲೆ ರೂಪಾಯಿಗಳ ಸೇನಾ ಸಾಮಗ್ರಿ ಯನ್ನು ಕೊಳ್ಳಲಿರುವ ದುರಂತದ ಮೊದಲ ಅಧ್ಯಾಯ. ದಕ್ಷಿಣ ಆಫ್ರಿಕಾದ ವರ್ಣವಿದ್ವೇಷ ಹೀನ ನೀತಿಯನ್ನು ಖಂಡಿಸಿ ಭಾರತವೂ ಸೇರಿದಂತೆ ಅನೇಕ ರಾಷ್ಟ್ರಗಳು ದಕ್ಷಿಣ ಆಫ್ರಿಕ ಸರ್ಕಾರಕ್ಕೆ ಬಹಿಷ್ಕಾರ ಹಾಕಿದ್ದುವು ಮತ್ತು ಆ ರಾಷ್ಟ್ರದೊಡನೆ ಕ್ರೀಡೆ ಮತ್ತು ವ್ಯಾಪಾರ ಸಂಬಂಧಗಳನ್ನು ಕಡಿದುಕೊಂಡಿದ್ದುವು. ಅಂತಹ ಶ್ರೇಯಸ್ಕರ ಮತ್ತು ಆದರ್ಶ ನೀತಿಗಳನ್ನು ಮನಮೋಹನ ಸಿಂಗ್ ಮತ್ತು ಪ್ರಣವ ಮುಖರ್ಜಿ ತಿಪ್ಪೆಗೆಸಿದಿದ್ದಾರೆ. ಹಲವು ಹತ್ಯಾಕಾಂಡಗಳಿಗೆ ಕಾರಣವಾದ ಇಸ್ರೇಲ್‌ಗೆ ಮಾನ್ಯತೆ ನೀಡಿದ್ದು, ವ್ಯಾಪಾರ ಸಂಬಂಧಗಳನ್ನು ಕುದುರಿಸಿಕೊಂಡಿದ್ದು ಮತ್ತು ಈಗ ದುರಾಕ್ರಮಣವನ್ನು ಖಂಡಿಸದಿದ್ದುದು ನಮ್ಮ ದೇಶದ ಅಪಕೀರ್ತಿಗೆ ಒಂದು ಕಾರಣ ವಾಗಿದೆ. ಅದಂತಿರಲಿ, ದಕ್ಷಿಣ ಆಫ್ರಿಕದ ಬಂದರುಗಳಲ್ಲಿ ಕೆಲಸ ಮಾಡುವ, ದುಡಿಯುವ ಜನ ಒಂದು ಶ್ಲಾಘನೀಯ ದಿಟ್ಟ ಕ್ರಮವನ್ನು ಇತ್ತೀಚೆಗೆ ಜಾರಿಗೆ ತಂದರು. ಸೌಹಾರ್ದವೆಂದರೆ ಅದು.

(೬ನೇ ಪುಟಕ್ಕೆ)




ಸಂಪುಟ-೧೦ ಸಂಚಿಕೆ - ೯ ಏಪ್ರಿಲ್ ೨೦೦೯



**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೮೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@dataone.in**
**website : www.navakarnataka.com**
**http://navakarnataka.blogspot.com**

# ದೇಶದ ಭವಿಷ್ಯ ತೂಗುಯ್ಯಾಲೆಯಲ್ಲಿ



ಮನಮೋಹನ ಸಿಂಗ್ ಸರ್ಕಾರವು, ಇತರ ಕೆಲವು ಪಕ್ಷಗಳ ಹಂಗಿನಲ್ಲಿದ್ದುಕೊಂಡೇ, ತನ್ನ ಕಾಲಾವಧಿಯನ್ನು ಮೊಟಕುಗೊಳಿಸಿಕೊಳ್ಳದೆ, ಪೂರ್ತಿಯಾಗಿ ಅಧಿಕಾರ ಚಲಾಯಿಸಿದೆ. ಬಹುಮತವಿಲ್ಲದ ಸರ್ಕಾರವೆಂದು ತೋರ್ಪಡಿಸಿಕೊಳ್ಳದೆ ಕಾಲ ವ್ಯಯಮಾಡಿದ್ದು ಸಿಂಗ್-ಸೋನಿಯಾ ವಿಕ್ರಮವೆಂದು ಹೇಳಲಡ್ಡಿಯಿಲ್ಲ. ಐಕ್ಯತೆಯ ಪ್ರಗತಿಪರ ಮೈತ್ರಿಕೂಟವೆಂಬ ಹೆಸರು ಸಾರ್ಥಕವಾಗಲಿಲ್ಲ; ಏಕೆಂದರೆ, ಹೊಂದಾಣಿಕೆ – ಪ್ರಗತಿಯ ದೃಷ್ಟಿಕೋಣ – ಬಿಚ್ಚುಮನಸ್ಸಿನ ಸ್ನೇಹ, ಇವು ಯಾವುವೂ ಗಮನಾರ್ಹವಾಗಿ ಕಾಣಬರಲಿಲ್ಲ. ಯಾರದೇ ಸರ್ಕಾರವಿರಲಿ, ಎಂಥದೇ ಧೋರಣೆಯಾಗಲಿ, ತಮಿಳುನಾಡಿನ ಎರಡು ದೊಡ್ಡ ಪಕ್ಷಗಳಿಗೆ ಪ್ರಾಮುಖ್ಯವು ಖಚಿತ ಮತ್ತು ಆ ರಾಜ್ಯದ ಆರೇಳು ಮಂತ್ರಿಗಳು ಯಾವ ದಾಕ್ಷಿಣ್ಯವೂ ಇಲ್ಲದೆ ತಮಗೆ ಬೇಕಾದ್ದನ್ನು ಹಿರಿದುಕೊಳ್ಳುತ್ತಾರೆಂಬುದಕ್ಕೆ ಮತ್ತೆ ಪುರಾವೆ ದೊರೆಯಿತು. ವಾಜಪೇಯಿ ಇದ್ದಾಗ ಅವರ ಸಖ್ಯ ಮತ್ತು ಸಿಂಗ್ ಬಂದಾಗ ಸಖ್ಯದ ಪರಿಷ್ಕೃತ ರೂಪ. ಇದು ಅವರ ಪದ್ಧತಿ. ''ದ್ರಾವಿಡ ಕಳಗಂ''ಎಂಬುದು ಎಂದೋ ಮಾಸಿಹೋಯಿತು; ಈಗ ದ್ರಾವಿಡತ್ವವು ಕೇಂದ್ರದ ಹಣವನ್ನು ಹರಿಸಿಕೊಳ್ಳುವುದಕ್ಕೆ ಸೀಮಿತಗೊಂಡಿದೆ. ಕರುಣಾನಿಧಿ ಮಾಡಿದ್ದನ್ನು ಈ ಬಾರಿ ಮತ್ತೆ ಜಯಲಲಿತಾ ಮಾಡ ಹೊರಟಿದ್ದಾರೆ. ಧರ್ಮನಿರಪೇಕ್ಷತೆಯ ಲಾಂಛನವನ್ನು ಬೇಕಾದಾಗ ಧರಿಸಿಕೊಳ್ಳಲು ಯಾವ ನಿರ್ಬಂಧವೂ ಇಲ್ಲ; ಅಂತೆಯೇ, ಮತೀಯ ಕಳಂಕವನ್ನು ಅಂಟಿಸಿಕೊಳ್ಳಲು ಸಹ ಯಾರೂ ಹೇಸಬೇಕಾಗಿಲ್ಲ. ಹೀಗಿದೆ ನಮ್ಮ ರಾಜಕೀಯ. ಈಗ ಒರಿಸ್ಸಾದ ಮುಖ್ಯಮಂತ್ರಿ ತಮ್ಮ ಮುಖದ ಮೇಲಿನ ಮತೀಯ ಪಟ್ಟೆಗಳನ್ನು ಅಳಿಸಿಕೊಂಡು ಶುಭ್ರವಾದ ವಸ್ತ್ರ ಧರಿಸಿಬಿಟ್ಟಿದ್ದಾರೆ. ಐದು ವರ್ಷಗಳ ಕಾಲ ಭಾರತೀಯ ಜನತಾ ಪಕ್ಷದ ಭುಜಕ್ಕೆ ಭುಜ ಕೊಟ್ಟವರು ಈಗ ಒಮ್ಮೆಗೇ ಆ ಪಕ್ಷವನ್ನು ದೂಷಿಸಲು ಮುಂದಾಗಿದ್ದಾರೆ. ಇದನ್ನೊಂದು ಸಂಚೆಂದು ಪರಿಗಣಿಸದೆ ಅವರನ್ನು ಬುಟ್ಟಿಗೆ ತುಂಬಿಕೊಳ್ಳಲು ಮೂರನೆಯ ರಂಗವು ತುದಿಗಾಲಲ್ಲಿ ನಿಂತಿದೆ. ಒಂದರ್ಥದಲ್ಲಿ ಭಾರತೀಯ ಜನತಾ ಪಕ್ಷವು ನಮ್ಮ ಇಡೀ ರಾಜಕೀಯದ ಹಾದಿ-ಹೂರಣಗಳನ್ನು ನಿರ್ಧರಿಸುತ್ತದೆ; ಆ ಪಕ್ಷವನ್ನು ಅಪ್ಪಿಕೊಳ್ಳುವುದು ಇಲ್ಲವೆ ದೂರವಿರಿಸುವುದು ಸೈದ್ಧಾಂತಿಕ ಕಾರಣಗಳಿಂದಲ್ಲವೆಂಬುದು ಬಹು ಹಿಂದೆಯೇ ಸ್ಪಷ್ಟವಾಗಿತ್ತು; ಈಗ ಅದಕ್ಕೆ ಇನ್ನೊಂದಷ್ಟು ನಿದರ್ಶನಗಳು ದೊರೆತಿವೆ. ಕಾಂಗ್ರೆಸ್ ಪಕ್ಷವು ಭಾಜಪದಂತೆಯೇ, ಅವರ ದಾಳಗಳನ್ನೇ ಉರುಳಿಸಿ, ಆಟವಾಡುವ ಕುತಂತ್ರವನ್ನು ಸಿದ್ಧಿಸಿಕೊಂಡಿದೆ. ರಾಮನಿಗಾಗಿ ಇಟ್ಟಿಗೆ, ರಾಮನಿಗಾಗಿ ಕಟ್ಟಲಾಗಿದ್ದಿತೆಂಬ ಸೇತುವೆ, ಇಂತಹ ಕೆಲವು ನಿರರ್ಥಕ ಮತ್ತು ಅಪ್ರಸ್ತುತ ವಿಷಯಗಳನ್ನು ಬಿಟ್ಟರೆ ಸೈದ್ಧಾಂತಿಕವಾಗಿ ಕಾಂಗ್ರೆಸ್ ಮತ್ತು ಭಾಜಪ ವಿಲೀನಗೊಳ್ಳಲು ಅಂಜಬೇಕಾಗಿಲ್ಲ. ಈಗ ನಡೆಯಲಿರುವ ಮಹಾಚುನಾವಣೆಯು ಅದನ್ನು ಪೂರೈಸಿಕೊಟ್ಟರೆ ಆ ಎರಡೂ ಪಕ್ಷಗಳು ಆದರ್ಶವೆಂದು ಎತ್ತಿಹಿಡಿಯುವ 'ಎರಡು ಪಕ್ಷಗಳ ವ್ಯವಸ್ಥೆ' ಅಸ್ತಿತ್ವಕ್ಕೆ ಬರಲು ಕಾಲ ಸನ್ನಿಹಿತವಾಗುತ್ತದೆ. ಏಕೆಂದರೆ, ಈ ಎರಡೂ ಪಕ್ಷಗಳನ್ನು ಸಮಾನವಾಗಿ ಎದುರಿಸಲು ಬದ್ಧವಾಗಿರುವ 'ಮೂರನೆಯ ರಂಗವು' ಆಗ ಎರಡನೆಯ ಪಕ್ಷವಾಗಿ ಸಂಘಟಿತಗೊಂಡು, ಚುನಾವಣೆಯಲ್ಲಿ ಮೊದಲನೆಯ ಪಕ್ಷವಾಗಿ ಪರಿವರ್ತನೆ ಹೊಂದಿ, ಕೇಂದ್ರದಲ್ಲಿ ಸರ್ಕಾರ ರಚಿಸಲು ಸಮರ್ಥವಾಗುತ್ತದೆ. ಇಂತಹ ಪರ್ಯಾಯವನ್ನು ಅನಗತ್ಯವೆಂದೋ ಅಸಾಧ್ಯವೆಂದೋ ಭಾವಿಸುವ ಪ್ರವೃತ್ತಿಯನ್ನು ಹೊರಹಾಕಿ, ನೈಜವಾದ ಐಕ್ಯತೆಯ – ಪುರೋಗಾಮಿತ್ವದ ಸರ್ಕಾರವನ್ನು ರಚಿಸಲು ಮುನ್ನುಗ್ಗಬೇಕಾದ್ದು ಇಂದಿನ ಅನಿವಾರ್ಯವಾಗಿದೆ.

ಹಿಂದೊಮ್ಮೆ ಭಾಜಪ, ಇತ್ತೀಚೆಗೆ ಕಾಂಗ್ರೆಸ್, 'ಖಿಚಡಿ' ಸರ್ಕಾರಗಳನ್ನು ರಚಿಸಿ ಆಡಳಿತ ನಡೆಸಿರುವುದು ಸುಳ್ಳಲ್ಲ. 'ಖಿಚಡಿ' ಯಲ್ಲಿ ಬೆರೆತುಕೊಳ್ಳಲು ಒಬ್ಬೊಬ್ಬರಿಗೂ ಒಂದೊಂದು ಕಾರಣವಿರಬಹುದು, ಆದರೆ ಅದು ಗಟ್ಟಿಯಾದ ಕಾರಣವಾಗಿದ್ದರೆ ಸಾಕು. ಭಾಜಪವನ್ನು ಕೆಳಗಿಳಿಸಿ, ಕೇಂದ್ರ ಸರ್ಕಾರವನ್ನು ಆ ಪಕ್ಷದ ಹತೋಟಿಗೆ ಬಿಡಕೂಡದೆಂಬುದು ಕಳೆದ ಐದು ವರ್ಷಗಳಲ್ಲಿ 'ಗಟ್ಟಿ ಕಾರಣ'ವಾಗಿ ಕೆಲಸ ಮಾಡಿದೆ. ಕರುಣಾನಿಧಿಗೆ ಭಾಜಪವನ್ನು ದೂರವಿರಿಸುವುದು ಮುಖ್ಯವಲ್ಲ, ತಮಿಳುನಾಡಿನಲ್ಲಿ ಅಧಿಕಾರವನ್ನು ಸ್ಥಿರಗೊಳಿಸಿಕೊಳ್ಳುವುದು ಮುಖ್ಯ. ಆದ್ದರಿಂದ ಸಿಂಗ್ ಸರ್ಕಾರಕ್ಕೆ ಡಿಎಂಕೆ ಅಚಲವಾದ ನಿಷ್ಠೆಯನ್ನು ಪ್ರದರ್ಶಿಸಿತು. ಯುಪಿಎ ಸರ್ಕಾರವು ತಾನು ಅಂಗೀಕರಿಸಿದ್ದ ಕಾರ್ಯಸೂಚಿಗೆ ವಿರೋಧವಾಗಿ ನಡೆದುಕೊಳ್ಳುವುದನ್ನು ಒಂದು ದುಷ್ಟಸ್ವಭಾವ ಮಾಡಿಕೊಂಡಿದ್ದರಿಂದ ಎಡಪಕ್ಷಗಳು ಸಿಂಗ್ (ಅಥವಾ ಸಿಂಹಿಣಿಯ) ಗವಿಯಿಂದ ಹೊರಬಂದುವು. ಉತ್ತರ ಪ್ರದೇಶದ ಕೋಟಿಗಳ ಖೋಟಾ ಸರದಾರ ಮುಲಾಯಂ ಸಿಂಗ್, ತನ್ನ ಆಪ್ತಸೂತ್ರಧಾರ ಅಮರ ಸಿಂಗ್‌ರ ನೇತೃತ್ವದಲ್ಲಿ ಮನಮೋಹನ ಸಿಂಗರಿಗೆ ಬೆಂಡಿನ ತುಂಡನ್ನು ನೀಡಿ ಮುಳುಗದಂತೆ ತೇಲಿಸಿ ದಡ ಮುಟ್ಟಿಸಿದರು. ಸಿಂಗ್ ಸರ್ಕಾರದ ಐದು ವರ್ಷಗಳ ಅಧಿಕಾರದ 'ಸಾಧನೆ'ಗಳನ್ನು ಗುರುತಿಸಲು ಒಂದು ಆಯೋಗವನ್ನೇನಾದರೂ ರಚಿಸಿದರೆ ಅದರ ಕೆಲಸ ಶೀಘ್ರವಾಗಿ ಮುಗಿಯುತ್ತದೆ. ಅಷ್ಟು ಅದ್ಭುತವಿದೆ ಸಿಂಗ್‌ರ ಪರಾಕ್ರಮ ! ಬೆಲೆ ಏರಿಕೆ ಮತ್ತು ನಿರುದ್ಯೋಗದ ಹೆಚ್ಚಳ, ಕೃಷಿಯ ಭೂಮಿಯನ್ನು ವಿದೇಶಿ ಕಂಪನಿಗಳಿಗೆ ಕೊಟ್ಟಿದ್ದು, ಒರಿಸ್ಸಾದಲ್ಲಿ ಕಬ್ಬಿಣದ ಅದಿರನ್ನು ದಕ್ಷಿಣ ಕೊರಿಯಾಕ್ಕೆ ಅಗ್ಗದ ಬೆಲೆಯಲ್ಲಿ ವಹಿಸಿಕೊಟ್ಟಿದ್ದು, ಸಾರ್ವಜನಿಕರಿಗೆ ವೈದ್ಯಕೀಯ ಸೌಲಭ್ಯ ದೊರೆಯದಂತೆ ಹಳ್ಳಿಗಾಡುಗಳ ಚಿಕ್ಕ ಆಸ್ಪತ್ರೆಗಳನ್ನು ಮುಚ್ಚಿದ್ದು, ಶಿವರಾಜ ಪಾಟೀಲರ ನೇತೃತ್ವದಲ್ಲಿ ಕೇಂದ್ರ ಗೃಹಖಾತೆಯು ನಿಷ್ಕ್ರಿಯವಾದದ್ದು, ಅಲ್ಪಸಂಖ್ಯಾತರ ಮೇಲೆ ಹಲ್ಲೆಗಳನ್ನು ಹೆಚ್ಚಿಸಿದ ಸಂಘಪರಿವಾರದ ಮೇಲೆ ಯಾವ ಕ್ರಮವನ್ನೂ ತೆಗೆದುಕೊಳ್ಳದಿದ್ದುದು, ರಾಜಸ್ಥಾನ ಬಿಟ್ಟು ಉಳಿದ ಕಡೆಗಳಲ್ಲಿ ಚುನಾವಣೆಯಲ್ಲಿ ಸೋತಿದ್ದು, ಷೇರು ಮಾರುಕಟ್ಟೆಯು ದೇಶದ ಆರ್ಥಿಕ ವ್ಯವಸ್ಥೆಯನ್ನು ಜಗ್ಗಿಸಲು ಅವಕಾಶ ಮಾಡಿಕೊಟ್ಟಿದ್ದು, ಚಿರಕಾಲ ಸ್ಮೃತಿಯಲ್ಲಿ ಉಳಿಯುವಂತಹ ಯಾವ ಹೊಸ ಉದ್ದಿಮೆಯನ್ನೂ ಸ್ಥಾಪಿಸದಿದ್ದುದು, ಸಾರ್ವಜನಿಕ ಸಂಪತ್ತನ್ನು ಖಾಸಗಿಯವರಿಗೆ ವರ್ಗಾಯಿಸಿದ್ದು, ಮುಂತಾದ ಅನೇಕ ಮಾರಕ ಜನವಿರೋಧಿ ನೀತಿಗಳಿಗೆ ಸಿಂಗ್ ಸರ್ಕಾರವು ತಲೆತಗ್ಗಿಸಬೇಕಾದ ಪರಿಸ್ಥಿತಿ ಬಂದಿದೆ. ಅದೊಂದು ಅಪೂರ್ವ ಸಾಹಸವೆಂಬಂತೆ ನಮ್ಮ ದೇಶವನ್ನು ಅಮೆರಿಕಾದ ಪದತಲದಲ್ಲಿರಿಸಿರುವ ಮನಮೋಹನ ಸಿಂಗ್ ಸರ್ಕಾರಕ್ಕೆ ಎಷ್ಟು ಛೀಮಾರಿ ಹಾಕಿದರೂ ಕಡಿಮೆಯೇ ಎನ್ನುವಂತಾಗಿದೆ. ಗ್ರಾಮಾಂತರ ಪ್ರದೇಶಗಳಲ್ಲಿ ಕನಿಷ್ಠ ಉದ್ಯೋಗವನ್ನು ಖಾತ್ರಿಪಡಿಸುವ ಯೋಜನೆಯನ್ನು ಕಾಟಾಚಾರಕ್ಕೆ ಒಪ್ಪಿಕೊಂಡ ಸರ್ಕಾರವು ಅದನ್ನು ಒಂದು ದೊಡ್ಡ ಲಂಚದ ಕೂಪವನ್ನಾಗಿ ಮಾಡಿರುವುದು ಅಕ್ಷಮ್ಯ. ಅತ್ತ ಉದ್ಯೋಗ ಮತ್ತು ಸಂಬಳವೂ ಇಲ್ಲ, ಇತ್ತ ಬೇರೊಂದು ಆಸರೆಯೂ ಇಲ್ಲ ಎಂಬಂತಾಯಿತು ಗ್ರಾಮಾಂತರಗಳಲ್ಲಿ ದುಡಿಯುವವರ ಬವಣೆ.

ಆದರೂ ಅವರ ಹೆಸರಿನಲ್ಲಿ ಹಣ ನುಂಗಿದ್ದಕ್ಕೇನೂ ಲೆಕ್ಕವಿಲ್ಲ. ಅರ್ಜುನ ಸೇನ್‌ಗುಪ್ತ ವರದಿಯು ಈವರೆಗೆ ಕೇಂದ್ರದಲ್ಲಿ ಸರ್ಕಾರ ರಚಿಸಿದ ಕಾಂಗ್ರೆಸ್ ಮತ್ತು ಭಾರತೀಯ ಜನತಾ ಪಕ್ಷಗಳಿಗೆ ನಾಚಿಕೆಯನ್ನುಂಟುಮಾಡಿರದಿದ್ದರೆ ಅದು ಅವುಗಳ ಚರ್ಮ ಎಷ್ಟು ದಪ್ಪವೆಂಬುದಕ್ಕೆ ಸಾಕ್ಷಿಯಾಗಿ ನಿಲ್ಲುತ್ತದೆ, ಅಷ್ಟೆ. ಆಂತರಿಕ ಮತ್ತು ವಿದೇಶಾಂಗ ವ್ಯವಹಾರಗಳಲ್ಲಿ ನಮ್ಮ ದೇಶವನ್ನು ದೈನೇಸಿ ಸ್ಥಿತಿಗೆ ನೂಕಿರುವ ಕಾಂಗ್ರೆಸ್ ನಾಯಕತ್ವದ ಸರ್ಕಾರವು ಮತ್ತೆ ಅಧಿಕಾರಕ್ಕೆ ಬಾರದಿರುವಂತೆ ಜವಾಬ್ದಾರಿಯುತವಾಗಿ ನಮ್ಮ ಜನತೆ ನಡೆಯಬೇಕಾಗಿದೆ ಮತ್ತು ಹಾಗೆ ನಡೆಯುತ್ತಾರೆಂಬ ನಿರೀಕ್ಷೆ ಇದೆ. ನಮ್ಮ ಪರಂಪರಾಗತವಾದ ವಿದೇಶಾಂಗ ನೀತಿಯನ್ನು ಅಲಿಪ್ತತೆಯಿಂದ ಹಿಂದೆ ಸರಿದು, ಅಮೆರಿಕಾವನ್ನು ಅಪ್ಪಿಕೊಳ್ಳುವ ಶೋಚನೀಯ ಸ್ಥಿತಿಗೆ ತಂದಿರುವ ಮನಮೋಹನ್ ಸಿಂಗ್ ಸರ್ಕಾರವು ಅಧಿಕಾರಕ್ಕೆ ಅನರ್ಹವಾಗಿದೆ.

ಭಾರತೀಯ ಜನತಾ ಪಕ್ಷವು ಮಾನ್ಯ ಲಾಲಕೃಷ್ಣ ಅಧ್ವಾನಿಯವರು ಈಗಾಗಲೇ ಪ್ರಧಾನಿಯಾಗಿಬಿಟ್ಟಿದ್ದಾರೆಂಬಂತೆ ನಡೆದುಕೊಳ್ಳುತ್ತಿದೆ. 'ಲಾಲ' ಅಂದರೆ 'ಬಾಲಕ'; ಬಾಲಕತನವು ಕಳೆದರೂ ಕೆಲವರಿಗೆ ಬಾಲಿಶತನವು ಉಳಿದುಬಿಡುತ್ತದೆ. ಆ ಅರ್ಥದಲ್ಲಿ ಅಧ್ವಾನಿಯವರು ಇನ್ನೂ ''ಲಾಲಾ''ನೇ ಆಗಿದ್ದಾರೆ. ಅವರು ಕೇಂದ್ರ ಸಂಪುಟದ ಸದಸ್ಯರಾಗಿದ್ದ ಅವಧಿಯಲ್ಲಿ ಪಾರ್ಲಿಮೆಂಟಿನ ಮೇಲೆ ಉಗ್ರರ ದಾಳಿ ನಡೆಯಿತೆಂಬ ಅಳುಕೇ ಇಲ್ಲದೆ ಭಯೋತ್ಪಾದನೆಗೆ ಕಾಂಗ್ರೆಸ್ ಮಾತ್ರವೇ ಕಾರಣವೆಂಬ ಮಾತು ಅಧ್ವಾನಿಯವರು ಚಲಾವಣೆಗೆ ಬಿಟ್ಟಿರುವ ಸವಕಲು ನಾಣ್ಯ. ಅರುಣ ಶೌರಿಯೆಂಬ ಘಾತುಕ ಮಂತ್ರಿಯು ದೇಶದ ಸಾರ್ವಜನಿಕ ಔದ್ಯಮಿಕ ಸಂಪತ್ತನ್ನು ಬೇಕಾಬಿಟ್ಟಿ ಖಾಸಗಿಯವರಿಗೆ ವರ್ಗಾಯಿಸಿದ್ದು ವಾಜಪೇಯಿ ಸರ್ಕಾರವಿದ್ದಾಗ. ಭಾವೋದ್ರೇಕವೊಂದನ್ನೇ ಬಂಡವಾಳವನ್ನಾಗಿ ಮಾಡಿಕೊಂಡು ಅಧಿಕಾರಕ್ಕೆ ಬರುವುದು, ಬಂದನಂತರ ಭಾರತದ ಸಂಸ್ಕೃತಿಯನ್ನು ಅವನತಿಯ ಕೂಪಕ್ಕೆ ಒಯ್ಯುವುದು, ಸಂಘಪರಿವಾರವು ಅವಾಂತರವೆಸಗಲು ಸನ್ನಿವೇಶ ರಚಿಸಿಕೊಡುವುದು, ಇಂಥವೇ ಭಾಜಪದ ಚುನಾವಣಾ ಪ್ರಣಾಲಿಕೆ ಮತ್ತು ಸರ್ಕಾರ ನಡೆಸುವ ಶೈಲಿ. 'ಗುಜರಾತ್ ಮಾದರಿ'ಯನ್ನು ಎಲ್ಲ ಕಡೆ ಅನುಷ್ಠಾನಕ್ಕೆ ತರುವುದು ಅದ್ವಾನಿ ಪಕ್ಷದ ಏಕೈಕ ಕಾರ್ಯನೀತಿ. ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ಶ್ರೀರಾಮಸೇನೆ, ವಿಶ್ವ ಹಿಂದು ಪರಿಷತ್, ಬಜರಂಗ ದಳ, ಮುಂತಾದ ಭಾಜಪ-ಪೋಷಿತ ''ಸಾಂಸ್ಕೃತಿಕ ಸೇವಾ ಸಂಸ್ಥೆಗಳು'' ಹಬ್ಬಿಸುತ್ತಿರುವ ವಿಚ್ಛಿದ್ರತೆ, ಕೋಮುದ್ವೇಷ ಮತ್ತು ಅನಾಗರಿಕ ನಡತೆ ಕರ್ನಾಟಕಕ್ಕಾಗಲಿ, ಭಾರತಕ್ಕಾಗಲಿ ಅಸಹ್ಯ ಹುಟ್ಟಿಸುವಂಥವು. ಶೈಕ್ಷಣಿಕ ಗುರಿಯನ್ನು ಕುಬ್ಜವಾಗಿಸಿ ಮೌಢ್ಯದ ಕಣಜಗಳನ್ನು ತುಂಬಿಸುವುದು ಭಾಜಪದ ''ನೀತಿ'' ಎಂಬುದಕ್ಕೆ ಕರಾಳ ನಿದರ್ಶನಗಳು ಬೇಕಾದಷ್ಟಿವೆ. ಮಾನ್ಯ ಮುರಳಿ ಮನೋಹರ ಜೋಶಿ ಮತ್ತು ಪ್ರಮೋದ ಮುತಾಲಿಕ್ ಎಂಬಿಬ್ಬರು ಸಾಕು, ನಮ್ಮ ದೇಶದ ಶಿಕ್ಷಣ ಮತ್ತು ಸಂಸ್ಕೃತಿಗಳನ್ನು ಹರಾಜಿಗಿಟ್ಟು ಧನ್ಯರಾಗುವುದಕ್ಕೆ! ಎಲ್ಲ ಕ್ಷೇತ್ರಗಳಲ್ಲೂ ಅವೈಜ್ಞಾನಿಕತೆಯ ಪಾರಮ್ಯವನ್ನು ಸಾಧಿಸುವ ದೃಷ್ಟಿಯುಳ್ಳ ಭಾಜಪದಂತಹ ಪಕ್ಷವು ಭಾರತದ ಇತಿಹಾಸ, ಜೀವನ ಶೈಲಿ, ದಾರ್ಶನಿಕ ದೃಷ್ಟಿ ಮತ್ತು ಸಾಂಸ್ಕೃತಿಕ ವೈಶಾಲ್ಯಗಳನ್ನೆಲ್ಲಾ ಮಣ್ಣುಮಾಡಿ ದೇಶದ ಜೀವನವನ್ನು ಬರಡುಮಾಡುತ್ತದೆ, ಬೆಂಕಿಗೆ ಬಿಸುಡುತ್ತದೆ. ಕಾಂಗ್ರೆಸ್‌ನ ಎಲ್ಲ ಅವಗುಣಗಳೂ ಸೇರಿದಂತೆ ಇದೊಂದು ಅಧಿಕ ನ್ಯೂನತೆಯು ಭಾಜಪವನ್ನು ಬೇರೆಲ್ಲ ರಾಜಕೀಯ ಪಕ್ಷಗಳಿಂದ ಬೇರ್ಪಡಿಸುತ್ತದೆ. ಅನೇಕ ಕಾಂಗ್ರೆಸ್ ಧುರೀಣರು ಭ್ರಷ್ಟರಾಗಿ ಸಾರ್ವಜನಿಕ ಸಂಪತ್ತನ್ನು ದೋಚುತ್ತಿರುವುದು ಸಮಕಾಲೀನ ಅನುಭವದ ಒಂದು ಭಾಗ. ಆ ಧುರೀಣರು ಇಪ್ಪತ್ತು ವರ್ಷಗಳಲ್ಲಿ ದೋಚುವಷ್ಟನ್ನು ನಮ್ಮ ಭಾಜಪ ವೀರರು ಎರಡು ವರ್ಷಗಳಲ್ಲಿ ದೋಚಬಲ್ಲರೆಂಬುದು ಕರ್ನಾಟಕದ ದುರಂತಮಯ ಅನುಭವವಾಗಿದೆ. ಭಾರತದ ಔನ್ನತ್ಯದ, ಬಹುಜನರ ಹಿತದ, ಬಯಕೆಯುಳ್ಳವರು ಭಾಜಪದ ಚಾಣಾಕ್ಷತನಕ್ಕೆ ಬಲಿಯಾಗಕೂಡದು. ಆ ಪಕ್ಷದ ಆರ್ಥಿಕ-ಸಾಂಸ್ಕೃತಿಕ-ಸಾಮಾಜಿಕ-ರಾಜಕೀಯ ನೀತಿಗಳೆಲ್ಲಾ ಶೋಷಕ ವರ್ಗದ ಮೌಲ್ಯಗಳ ಪ್ರತಿಫಲನವಾಗಿರುತ್ತವೆ. ದುಡಿಯುವ ವರ್ಗದ ಆಕಾಂಕ್ಷೆಗಳು ಶೋಷಕ ವರ್ಗದ ಕಾರ್ಯವೈಖರಿಯಲ್ಲಿ ನಿರ್ನಾಮವಾಗಿಹೋಗುತ್ತವೆ. ನಮ್ಮ ದೇಶದ ಮತದಾರರು ಇದನ್ನು ಅರಿತಿದ್ದಾರೆ ಮತ್ತು ಅರಿತಿಲ್ಲದಿದ್ದರೆ ಆ ಅರಿವನ್ನು ಅವರಿಗೆ ಮುಟ್ಟಿಸುವ ಕರ್ತವ್ಯವು ನಮ್ಮದಾಗಬೇಕು.

ಇನ್ನುಳಿದದ್ದು ''ತೃತೀಯ ರಂಗ'' ಮಾತ್ರ. ಅಲ್ಲಿ ಯಾವೆಲ್ಲಾ ಪಕ್ಷಗಳು ಸಮ್ಮಿಳಿತವಾಗಿವೆಯೋ ತಿಳಿಯುವಂತಿಲ್ಲ. ಇಬ್ಬರ ಜಗಳವು ಮೂರನೆಯವರಿಗೆ ಲಾಭ ಎನ್ನುವ ನ್ಯಾಯವೇನಾದರೂ ಸ್ಥಿರವೆ? ರಾಜಕೀಯ ಅಧಿಕಾರವು ಕಜ್ಜಾಯವಲ್ಲವಾದ್ದರಿಂದ ಯಾವುದೇ ಜಗಳವು ಸಹಜವಾಗಿ ಮೂರನೆಯವರ ಲಾಭದಲ್ಲಿ ಪರ್ಯವಸಾನವಾಗುತ್ತದೆಂದು ಹೇಳಲಾಗದು. ಮಾಜಿ ಪ್ರಧಾನಿ ಶ್ರೀ ದೇವೇಗೌಡರು ಇರುವ ರಂಗವು ಎಂದಾದರೂ ಸುಸೂತ್ರವಾಗಿ ನಡೆದದ್ದುಂಟೆ? ಎ. ಬಿ. ಬರ್ಧನ್ ಮತ್ತು ಪ್ರಕಾಶ್ ಕಾರಟ್ ಅವರು ಮಾನ್ಯ ದೇವೇಗೌಡರ ಪ್ರಲಾಪ ಮತ್ತು ಪ್ರತಾಪಗಳನ್ನು ಹಿಡಿದಿಡಲು ಸಮರ್ಥರಾದರೆ ಮೂರನೆಯ ರಂಗವು ಯಶಸ್ವಿಯಾಗಬಲ್ಲುದು. ಬೆಹೆನ್ ಮಾಯಾವತಿ ಮತ್ತು ಅಂಕಲ್ ಚಂದ್ರಬಾಬು ನಾಯ್ಡು ಯಾವಾಗ ಎಂತಹ ಸ್ಫೋಟವನ್ನು ಸಿಡಿಸುತ್ತಾರೆ ಎಂಬುದು ಅನೂಹ್ಯ. ಪ್ರಾದೇಶಿಕ ಪಕ್ಷಗಳ ವರ್ಚಸ್ಸು ಹೆಚ್ಚಬೇಕಾದರೆ ತೃತೀಯ ರಂಗ ಗೆದ್ದು ಗದ್ದುಗೆ ಏರಬೇಕು. ಭಾರತವು ಸಂಯುಕ್ತ ಗಣರಾಜ್ಯವಾಗಿ ಉಳಿಯಬೇಕಾದರೆ ಉತ್ತರ ಭಾರತ ಮತ್ತು ಹಿಂದಿಯ ಪರಮಾಧಿಕ್ಯ ಕೊನೆಗೊಂಡು ಎಲ್ಲ ರಾಜ್ಯಗಳೂ ದೇಶದ ಬಗ್ಗೆ ಅಭಿಮಾನವಿರಿಸಿಕೊಳ್ಳಲು ಸಾಧ್ಯವಾಗಬೇಕು. ಫಿನ್ಲೆಂಡಿನಲ್ಲಿರುವ ಭಾರತದ ರಾಯಭಾರ ಕಚೇರಿಯಲ್ಲಿ ಹಿಂದಿಯನ್ನು ಎಷ್ಟು ಬಳಸಲಾಗುತ್ತದೆಯೆಂಬುದು ಮುಖ್ಯವಲ್ಲ, ಅಲ್ಲಿಯ ಉದ್ಯಮಗಳೊಂದಿಗೆ ಭಾರತೀಯ ಉದ್ಯಮಗಳು ಎಷ್ಟು ಬೆಸೆತುಕೊಳ್ಳಬಲ್ಲವೆಂಬುದು ಮುಖ್ಯ. ವಾಜಪೇಯಿಯವರಿಗೆ ಮೊದಲನೆಯದು ಆದ್ಯತೆಯ ವಿಷಯವಾಗಿತ್ತು. ಎರಡನೆಯದರ ಬಗ್ಗೆ ಯೋಚನೆ ಬರಲಿಲ್ಲ. ಅತಿ ಮುಖ್ಯವಾಗಿ, ಮೂರನೆಯ ರಂಗವು ಸ್ಪಷ್ಟವಾದ ಆರ್ಥಿಕ-ಸಾಂಸ್ಕೃತಿಕ-ರಾಜಕೀಯ ಕಾರ್ಯಕ್ರಮವೊಂದನ್ನು ರೂಪಿಸಿ ಅದರ ಅನುಷ್ಠಾನಕ್ಕಾಗಿ ಐಕ್ಯತೆಯಿಂದ ಕಾರ್ಯಪ್ರವೃತ್ತವಾಗಬೇಕು. ಚುನಾವಣೆಯ ಮೊದಲೇ ಕಾರ್ಯಕ್ರಮ ರೂಪಿಸಿ, ಅದಕ್ಕೆ ಬದ್ಧತೆಯನ್ನು ಬಹಿರಂಗವಾಗಿ ಘೋಷಿಸುವುದು ಚುನಾವಣೆಯಲ್ಲಿ ಗೆಲ್ಲುವ ದೃಷ್ಟಿಯಿಂದಲೂ ಮುಖ್ಯವಾಗುತ್ತದೆ. ಜೊತೆಗೆ, ಮೂರನೆಯ ರಂಗದ ಪಕ್ಷಗಳು ಪರಸ್ಪರರ ವಿರುದ್ಧ ''ಮೈತ್ರಿಯ ಸ್ಪರ್ಧೆ''ಯೆಂಬ ಕುಹಕಕ್ಕೆ ಒಡ್ಡಿಕೊಂಡರೆ ಉದ್ದೇಶವು ವಿಫಲಗೊಳ್ಳುತ್ತದೆ. ಎಡಪಕ್ಷಗಳು, ತೆಲುಗು ದೇಶಂ, ಬಹುಜನ ಸಮಾಜ ಪಕ್ಷ, ಒರಿಸ್ಸಾದ ನವೀನ್ ಪಟ್ನಾಯಕ್ ಬಣ ಮತ್ತು ಕರ್ನಾಟಕದ ದೇವೇಗೌಡರ ಪಕ್ಷ ನಿಜಕ್ಕೂ ಜೊತೆಗೂಡಿ ಶ್ರಮಿಸಿದರೆ ಕಾಂಗ್ರೆಸ್ ಮತ್ತು

(೮ನೇ ಪುಟಕ್ಕೆ)

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಈ ತಿಂಗಳು (೩ನೇ ಪುಟದಿಂದ)

ಇಸ್ರೇಲಿನಿಂದ ಒಂದು ಹಡಗು ದಕ್ಷಿಣ ಆಫ್ರಿಕಾದ ಡರ್ಬಾನ್‌ಗೆ ಬಂದಿತ್ತು. ಅದರಲ್ಲಿ ಕೋಟಿ ಗಟ್ಟಲೆ ಬೆಲೆ ಬಾಳುವ ಸರಕುಗಳಿದ್ದವು. ಗಾಜಾದಲ್ಲಿ ಇಸ್ರೇಲ್ ದುರಾಕ್ರಮಣ ನಡೆಸಿತ್ತೆಂಬ ಕಾರಣಕ್ಕೆ ಡರ್ಬಾನ್‌ನ ಬಂದರು ಕಾರ್ಮಿಕರು ಆ ಹಡಗಿನಲ್ಲಿದ್ದ ಸರಕುಗಳನ್ನು ಇಳಿಸಲು ನಿರಾಕರಿಸಿದರು. ಭಾರತದ ದುಡಿಯುವ ಜನಕ್ಕೆ ಇದೊಂದು ಪ್ರಶಸ್ತವಾದ ಮಾದರಿಯಾಗಬಲ್ಲದು.

* * *

ಸ್ವಿಟ್ಸರ್‌ಲೆಂಡನ್ನು ಭೂಲೋಕದ ಸ್ವರ್ಗ ಎನ್ನುತ್ತಾರೆ. ಅದಕ್ಕೆ ಆಲ್ಪ್ಸ್ ಪರ್ವತ, ಹಿಮ, ಜಿನೀವಾದ ಸರೋವರ, ನಿಸರ್ಗ ಸಂಪತ್ತು, ಎಲ್ಲಾ ಕಾರಣ. ನಮ್ಮ ಕಾಶ್ಮೀರದ ಹಾಗೆ ಎನ್ನಬಹುದು. ಆದರೆ ಕಾಶ್ಮೀರಕ್ಕಿಲ್ಲದ ಒಂದು ದೊಡ್ಡ ಅಪಕೀರ್ತಿ ಸ್ವಿಟ್ಸರ್‌ಲೆಂಡಿಗಿದೆ. ಅದೇನೆಂದರೆ, ವಿಶ್ವದ ಎಲ್ಲ ರಾಷ್ಟ್ರಗಳ ಕಟ್ಟಾ ಖದೀಮರು, ಸಟ್ಟಾ ವ್ಯಾಪಾರಿಗಳು, ರಾಜಕೀಯ ದ್ರೋಹಿಗಳು, ಕಪ್ಪು ಹಣದ ಪ್ರಭಾವಿಗಳು, ತೆರಿಗೆ ನೀಡದ ಭ್ರಷ್ಟರು, ಭಯೋತ್ಪಾದಕರು, ಹೀಗೆ ಎಲ್ಲರೂ ತಮ್ಮ ಹಣವನ್ನು ಸ್ವಿಸ್ ಬ್ಯಾಂಕುಗಳಲ್ಲಿಟ್ಟಿದ್ದಾರೆ. ಆ ದೇಶ ನಿರ್ಲಿಪ್ತ ದೇಶ; ಅಂದರೆ ಯಾವ ಬಣಕ್ಕೂ ಸೇರುವುದಿಲ್ಲ. ಎಲ್ಲ ದೇಶಗಳ ಪಾತಕಿಗಳಿಗೂ ಅದು ಆಶ್ರಯ ನೀಡುವ ''ಸ್ವರ್ಗ'' ಮತ್ತು ಅದರಿಂದಾಗಿ ಶ್ರೀಮಂತ ದೇಶ. ಹಣವಿಟ್ಟಿರುವ ವಿದೇಶಿಯರು ಸ್ವಂತ ದುಡಿಮೆಯಿಂದ ಸಂಪಾದಿಸಿದ ಒಂದು ಚಿಕ್ಕಕಾಸೂ ಇಟ್ಟಿಲ್ಲ; ಎಲ್ಲಾ ಅಪಮಾರ್ಗಗಳ ಸಂಪಾದನೆಯೇ! ಅದನ್ನು ತಿಳಿಯಲು ಇಷ್ಟವಿಲ್ಲದಿದ್ದವರು ಸ್ವಿಟ್ಸರ್‌ಲೆಂಡನ್ನು ''ಆಹಾ, ಎಂಥಾ ದೇಶ'' ಎಂದು ಹುಬ್ಬೇರಿಸುತ್ತಾರೆ. ಕಳೆದ ತಿಂಗಳು ಲೋಕಸಭೆಯಲ್ಲಿ ಸ್ವಿಟ್ಸರ್‌ಲೆಂಡ್ ಪ್ರಸ್ತಾಪಕ್ಕೆ ಬಂತು. ಭಾರತ ಕಮ್ಯುನಿಸ್ಟ್ ಪಕ್ಷದ ಸದಸ್ಯ ಎಸ್. ಸುಧಾಕರ ರೆಡ್ಡಿ ಕೆಲವು ಅಂಕಿ-ಅಂಶಗಳ ದಾಖಲೆಗಳೊಂದಿಗೆ ನಮ್ಮ ದೇಶದ ಕಪ್ಪು ಹಣ ಹೇಗೆ ಹರಿದುಹೋಗಿದೆ ಯೆಂಬುದನ್ನು ವಿವರಿಸಿ, ಸ್ವಿಟ್ಸರ್‌ಲೆಂಡ್‌ನ ಬ್ಯಾಂಕುಗಳಲ್ಲಿ ಭಾರತೀಯರು ಇಟ್ಟಿರುವ ಹಣವನ್ನು ನಮ್ಮ ದೇಶಕ್ಕೆ ತಂದುಕೊಳ್ಳಲು ಯತ್ನಿಸಬೇಕೆಂದು ಆಗ್ರಹಿಸಿದರು. ಅದು ದೊಡ್ಡ ಸುದ್ದಿಯಾಗಲಿಲ್ಲ; ಏಕೆಂದರೆ, ಸುದ್ದಿ ವಿತರಿಸುವ ಮಾಧ್ಯಮಗಳ ಮಾಲಿಕರು ಸಹ ಅಲ್ಲಿ ಕಪ್ಪು ಹಣವನ್ನು ತುಂಬಿಟ್ಟಿದ್ದಾರೆ. ಹಲವು ಐಎಎಸ್ - ಐಪಿಎಸ್ ಅಧಿಕಾರಿಗಳು ಕೂಡ ಸ್ವಿಸ್ ಬ್ಯಾಂಕುಗಳಲ್ಲಿ ಹಣ ಇಟ್ಟಿದ್ದಾರೆ. ಅಲ್ಲಿರುವ ನಮ್ಮ ದೇಶದ ಒಟ್ಟು ಹಣ ೧೪೫೬ ಬಿಲಿಯನ್ ಡಾಲರುಗಳು ಅಥವಾ ೧.೪ ಟ್ರಿಲಿಯನ್ ಡಾಲರುಗಳು. ಅದೆಷ್ಟು ಅಗಾಧವಾದ ಮೊತ್ತವೆಂದು ಸಾಮಾನ್ಯರ ಕಲ್ಪನೆಗೆ ಬರುವುದಿಲ್ಲ. ನಮ್ಮ ಇಡೀ ವಿದೇಶಿ ಸಾಲಕ್ಕಿಂತಲೂ ಹೆಚ್ಚಿನ ಮೊತ್ತ ಇದು. ಅದನ್ನೆಲ್ಲಾ ತಂದು, ಸಾಲವನ್ನೆಲ್ಲಾ ತೀರಿಸಿ, ಉಳಿದುದರ ಬಡ್ಡಿಯಿಂದ ದೇಶದಲ್ಲಿ ತೆರಿಗೆಯನ್ನೇ ವಿಧಿಸದೆ ಆರಾಮವಾಗಿ ಸರ್ಕಾರ ನಡೆಸಬಹುದು. ನಮ್ಮ ದೇಶದ ೪೫ ಕೋಟಿ ಜನಕ್ಕೆ ತಲಾ ಒಂದು ಲಕ್ಷದಂತೆ ಹಣ ಹಂಚಲು ಸ್ವಿಸ್ ಬ್ಯಾಂಕುಗಳಲ್ಲಿ ನಮ್ಮ ''ದೇಶಭಕ್ತ ನಾಗರಿಕರು'' ಇಟ್ಟಿರುವ ಹಣ ಸಾಕಾಗುತ್ತದೆ. ಒಂದೊಂದು ಕಾಸೂ ಲೂಟಿಯ ಫಲ, ಸಾರ್ವಜನಿಕರ ರಕ್ತ ಹೀರಿರುವುದರ ಸಂಕೇತ. ಇನ್ನೂ ಒಂದು ಕೌತುಕವಿದೆ : ಕೆ. ಕೆ. ಗುಪ್ತ ಎಂಬ ಲೇಖಕ ಹೇಳುವಂತೆ, ನಮ್ಮ ದೇಶಕ್ಕೆ ಒಲಿಂಪಿಕ್ ಕ್ರೀಡೆಯಲ್ಲಿ ಚಿನ್ನದ ಪದಕ ದಕ್ಕದಿದ್ದರೂ, ಸ್ವಿಸ್ ಬ್ಯಾಂಕುಗಳಲ್ಲಿ ಅತಿ ಹೆಚ್ಚಿನ ಹಣ ಇಟ್ಟಿರುವ ದೇಶವಾಗಿ ನಮಗೆ ಒಲಿಂಪಿಕ್ ಚಿನ್ನ ಕಟ್ಟಿಟ್ಟ ಬುತ್ತಿ. ನಮ್ಮ ನಂತರ ಬರುವ ರಷ್ಯದ್ದು ೪೭೦ ಬಿಲಿಯನ್ ಮಾತ್ರ. ಆಮೇಲೆ ಬ್ರಿಟನ್ ಮತ್ತು ಉಕ್ರೇನ್. ನಂತರ ಚೀಣಾ ದೇಶ. ಅಮೆರಿಕಾದ ಸರದಿ ಬರುವುದು ಅದರ ನಂತರ. ಹೀಗಿರುವಾಗ ನಮ್ಮ ದೇಶದ ಕ್ಯಾನ್ಸರ್‌ನಂತಿರುವ ಮಹಾ ಅಯೋಗ್ಯರಿಗೆ ಏನು ಹೇಳಬೇಕು ಮತ್ತು ಏನು ಮಾಡಬೇಕು ? ಭಾರತೀಯ ಸಂಸ್ಕೃತಿಯ ಉದಾತ್ತತೆಯನ್ನು ಹಾಡಿ ಹೊಗಳುವ ದೇಶಪ್ರೇಮಿಗಳೂ ಆ ಪಟ್ಟಿಯಲ್ಲಿ ಸೇರಿದ್ದಾರೆ. ಅಂದರೆ, ದೇಶದ ಸಾರ್ವಜನಿಕರ ಸಂಪತ್ತನ್ನು ಯಾವ ಪ್ರಮಾಣದಲ್ಲಿ ದೋಚಲಾಗಿದೆ ಮತ್ತು ಬಡತನವು ಯಾವ ಮಟ್ಟದಲ್ಲಿ ನಮ್ಮನ್ನು ಕಿತ್ತು ತಿನ್ನುತ್ತಿದೆ ಎಂಬುದಕ್ಕೆ ಉತ್ತರ ಇಲ್ಲಿದೆ. ರಕ್ತವನ್ನು ಹೀರಿರುವ ಈ ಜಿಗಣೆಗಳನ್ನು ಹೊಸಕಿಹಾಕುವುದು ಯಾರು ಮತ್ತು ಯಾವಾಗ ? ಸಮಾಜದಲ್ಲಿ ದೊಡ್ಡಸ್ತಿಕೆಯನ್ನು ಮೆರೆಯುವ ಈ ಪಾಪಿಗಳ ಸಂತಾನಕ್ಕೆ ಯಾವ ಸ್ಮಶಾನದಲ್ಲಿ ಎಷ್ಟು ಗಾತ್ರದ ಗೋರಿ ಕಟ್ಟಬೇಕು ? ನಮ್ಮ ಜನ ಇದನ್ನು ಪರಾಮರ್ಶಿಸಿಕೊಳ್ಳಬೇಕು. ಲೋಕಸಭೆಯಲ್ಲಿ ಎತ್ತಲಾದ ಪ್ರಶ್ನೆಗೆ ಕಾಂಗ್ರೆಸ್, ಭಾಜಪ, ಮುಲಾಯಂ ಪಕ್ಷ, ಮುಂತಾದುವು ಪ್ರತಿಕ್ರಿಯಿಸದಿದ್ದುದಕ್ಕೆ ಉತ್ತರ ಸರಳವಾಗಿದೆ : ಅಲ್ಲೆಲ್ಲಾ ರಾಶಿರಾಶಿ ಜಿಗಣೆಗಳಿವೆ !

ಅಮೆರಿಕಾ ಈಚೆಗೆ ಕೆಲವು ಮಾಹಿತಿಗಳನ್ನು ನೀಡಬೇಕೆಂದು ಒತ್ತಾಯಿಸಿದೆ. ಅಲ್ಲಿಯೂ ಜಿಗಣೆಗಳಿವೆಯಲ್ಲಾ, ಅದಕ್ಕೆ! ಸ್ವಿಸ್ ಬ್ಯಾಂಕುಗಳಲ್ಲಿಡಲಾದ ಠೇವಣಿಗಳಿಗೆ ಗುಟ್ಟಿನ ಭದ್ರ ಕೋಟೆಯ ರಕ್ಷಣೆ ಇದೆ. ಆದಾಗ್ಯೂ ಅಮೆರಿಕಾವು ಸ್ವಿಟ್ಸರ್‌ಲೆಂಡನ್ನು ಮಾಹಿತಿಗಾಗಿ ಒತ್ತಾಯಿಸಿದೆ ಮತ್ತು ಪಡೆಯುವುದರಲ್ಲಿದೆ. ನಮ್ಮ ದೇಶವೂ ಅದನ್ನು ಮಾಡಬೇಕು ಹಾಗೂ ಸಿಕ್ಕಿಹಾಕಿಕೊಳ್ಳುವ ಹೆಗ್ಗಣಗಳನ್ನೆಲ್ಲಾ ಗಲ್ಲಿಗೇರಿಸಬೇಕು ! ಸ್ವಿಟ್ಸರ್‌ಲೆಂಡ್ ಈಗ ಇನ್ನೊಂದು ''ಭರವಸೆ'' ನೀಡಿದೆ: ಯಾರಾದರೂ ತೆರಿಗೆಯನ್ನು ನೀಡದೆ ವಂಚಿಸಿದ್ದರೆ ಮತ್ತು ದಾಖಲೆ ಸಮೇತ ಅದನ್ನು ಅವರಿಗೆ ಕೊಟ್ಟರೆ ಅಂತಹವರ ಬಗ್ಗೆ ಮಾತ್ರ ಮಾಹಿತಿ ನೀಡುತ್ತದಂತೆ ಈ ಸ್ವಿಟ್ಸರ್‌ಲೆಂಡ್. ಪ್ರಸ್ತುತ ಚುನಾವಣೆಯ ಸಂದರ್ಭದಲ್ಲಿ ನಮ್ಮ ಈ ಮಹಾನ್ ದೇಶಪ್ರೇಮಿಗಳ ''ಕೊಡುಗೆ''ಯನ್ನು ಸಾರ್ವಜನಿಕರಿಗೆ ತಿಳಿಸಬೇಕು.

* * *

ಯಥಾಪ್ರಕಾರ ನಮ್ಮ ರಾಜ್ಯದಲ್ಲಿ ಮುಖ್ಯಮಂತ್ರಿ, ಗೃಹಮಂತ್ರಿ, ಮುಂತಾದವರ ರಕ್ಷಣೆಯಿಂದಾಗಿ ಕೋಮುದ್ವೇಷವು ವಿಷವೃಕ್ಷವಾಗಿ ಬೆಳೆಯಲು ಬೇಕಾದ ಎಲ್ಲ ಸಾಮಗ್ರಿ ಮತ್ತು ಸಂದರ್ಭಗಳ ಸೃಷ್ಟಿಯಾಗುತ್ತಿದೆ. ನಾಳಿನ ಯೋಚನೆ ಇಲ್ಲದವರು ಮಾಡಬಹುದಾದ ಹೀನ ಕೃತ್ಯ ಇದು. ಕೋಮುದ್ವೇಷವನ್ನು ಪ್ರಚೋದಿಸುವುದು ಭಯೋತ್ಪಾದಕರನ್ನು ಸೃಷ್ಟಿಸುವುದಕ್ಕೆ ಸಮಾನವಾದ ಕುಕೃತ್ಯವೆಂಬುದನ್ನು ಮರೆಯದಿರೋಣ. ಸಮಾಜದ ವ್ಯಕ್ತಿಗಳಲ್ಲಿ ಕೋಮುದ್ವೇಷವು ಅನಾಥಪ್ರಜ್ಞೆಯನ್ನು ಮೂಡಿಸುತ್ತದೆ ಮತ್ತು ಅದು ಹಿಂಸೆಗೆ ಹಾದಿಯಾಗುತ್ತದೆ. ಮಂಗಳೂರಿನಿಂದ ಸುಮಾರು ನೂರು ಕಿಲೋಮೀಟರ್ ದೂರದಲ್ಲಿರುವ ಪಂಜಾ ಎಂಬ ಹಳ್ಳಿಯಿಂದ (ಸುಳ್ಯ ತಾಲ್ಲೂಕು) ಒಂದು ಆಘಾತಕರ ಸುದ್ದಿ ಬಂದಿತ್ತು; ಅಲ್ಲಿಯ ಪದವಿ ಪೂರ್ವ ಕಾಲೇಜಿನಲ್ಲಿ ಅಖಿಲ ಭಾರತ ವಿದ್ಯಾರ್ಥಿ ಪರಿಷತ್ತು ಒಂದು ಆಜ್ಞೆಯನ್ನು ಹೊರಡಿಸಿದೆಯಂತೆ. (ಪ್ರಾಂಶುಪಾಲರು, ಅಧ್ಯಾಪಕರು ಮತ್ತು ವಿದ್ಯಾರ್ಥಿಗಳು ಹೇಗೆ ಪ್ರತಿಕ್ರಿಯಿಸುತ್ತಾರೋ ತಿಳಿಯದು). ಇಡೀ ಊರಿನಲ್ಲಿ ಜನಸಮುದಾಯವು ಇಬ್ಭಾಗವಾಗಿ ಇರುವುದಂತೂ ನಿಜ. ಒಬ್ಬ ಮುಸಲ್ಮಾನ ವಿದ್ಯಾರ್ಥಿಯ ಸ್ನೇಹಿತನಾಗಿದ್ದವನು ಹೇಳುತ್ತಾನಂತೆ, ''ನಾನು ಹಿಂದೆ ಅವನ ಸ್ನೇಹಿತನಾಗಿದ್ದೆ, ಈಗ ಅಲ್ಲ,'' ಎಂದು. ಹಾಗೆ ಹೇಳಿದ ವಿದ್ಯಾರ್ಥಿ ಹಿಂದುವಂತೆ. ಒಬ್ಬ ಮುಸಲ್ಮಾನ ವಿದ್ಯಾರ್ಥಿನಿ ತನ್ನ ಹಿಂದು ಸ್ನೇಹಿತೆಯನ್ನು ಮಾತನಾಡಿಸಲು ಅಂಜುತ್ತಾಳೆ; ನಾಳೆ ಇಬ್ಬರಿಗೂ ''ನೈತಿಕ ಪೊಲೀಸರು'' ಬಿಸಿ ಮುಟ್ಟಿಸುತ್ತಾರೆಂಬ ಭಯಕ್ಕೆ. ಬುರ್ಖಾ ಹಾಕಿಕೊಂಡು ಹೋಗುವ ಹುಡುಗಿಯರನ್ನು ನಮ್ಮ ಸುಸಂಸ್ಕೃತ ವಿದ್ಯಾರ್ಥಿಗಳು ''ಟಾರಿನ ಡಬ್ಬ'' ಎಂದು ಛೇಡಿಸುತ್ತಾರಂತೆ. ಹೀಗೇ ಏನೇನೋ ಇದೆ. ಇದೇ ಮಾರ್ಚ್ ೧೦ರಂದು ಒಂದು ಪತ್ರಿಕಾ ಗೋಷ್ಠಿಯಲ್ಲಿ ಪತ್ರಕರ್ತರೊಬ್ಬರು ಹೇಳಿದರು : ''ಇಡೀ ದಕ್ಷಿಣ ಕನ್ನಡ ಜಿಲ್ಲೆ ಹಾಗೆ ಬರ್ಬರವಾಗಿದೆಯೆಂದು ಭಾವಿಸಬೇಡಿ. ಇವು ಒಂದೆರಡು ಕೆಟ್ಟ ಘಟನೆಗಳು ಮಾತ್ರ'', ಎಂದು. ಅದು ನಿಜ, ಆದರೆ ಅವು ಒಂದೆರಡಕ್ಕೆ ಮುಕ್ತಾಯವಾಗುವಂಥವಲ್ಲ; ಚುನಾವಣೆಯ ಕಾವು ಏರುತ್ತಿದ್ದಂತೆ ಇಂತಹ ಘಟನೆಗಳೂ ಹೆಚ್ಚುತ್ತವೆ. ಕೋಮುಗಳ ಆಧಾರದ ಮೇಲೆ ಜನರನ್ನು ಹೀಯಾಳಿಸುವುದು ಅನೈತಿಕವಷ್ಟೇ ಅಲ್ಲ, ಅದು ಅನಾರೋಗ್ಯಕರ ಕೂಡ. ಒಂದು ಪ್ರಸಂಗ ಹೀಗೆ ನಡೆಯುತ್ತದೆಂದು ಭಾವಿಸಿಕೊಳ್ಳೋಣ : ಒಬ್ಬ ''ಬ್ರಾಹ್ಮಣ'' ವಿದ್ಯಾರ್ಥಿ ಜನಿವಾರ ಹಾಕಿಕೊಂಡಿದ್ದಾನೆ, ಹಣೆಗೆ ತಿಲಕವನ್ನಿಟ್ಟುಕೊಂಡಿದ್ದಾನೆ. ಯಾರೋ ''ಶೂದ್ರ'' ವಿದ್ಯಾರ್ಥಿ ಅದನ್ನು ಸಹಿಸಲಾರ. ಹೋಗಿ ಆ ಇನ್ನೊಬ್ಬನ ಬಟ್ಟೆ ಕಿತ್ತುಹಾಕುತ್ತಾನೆ, ತಿಲಕವನ್ನು ಉಜ್ಜಿಹಾಕುತ್ತಾನೆ, ಜನಿವಾರವನ್ನು ಹರಿದು ಎಸೆಯುತ್ತಾನೆ. ಇಬ್ಬರೂ ''ಹಿಂದುಗಳು'', ಇಬ್ಬರೂ ಭಾರತೀಯರು, ಆದರೆ ''ಶೂದ್ರ'' ಹುಡುಗ ಮಾಡಿದ್ದನ್ನು ನಮ್ಮ ''ಸಂಸ್ಕೃತಿ ವಕ್ತಾರರು'' ಮನ್ನಿಸುತ್ತಾರೆಯೆ ? ನಾಳೆ ''ಬ್ರಾಹ್ಮಣ'' ವಟುವಿನ ಬಾಯಲ್ಲಿ ಬಲವಂತವಾಗಿ ಯಾರೋ ಅಜ್ಞರು ಒಂದು ಮೀನು ತುರುಕುತ್ತಾರೆನ್ನಿ, ಆಗೇನು ಮಾಡುವುದು ? ಅಂದರೆ ಇಷ್ಟೆ. ಚಿಕ್ಕವೆಂದು ತೋರುವ ಘಟನೆಗಳು ಬೃಹತ್ತಾಗಿ ಬೆಳೆಯುತ್ತವೆ, ಜ್ವಾಲೆಯನ್ನು ಹೊತ್ತಿಸುತ್ತವೆ. ಭಯೋತ್ಪಾದಕರ ಸೃಷ್ಟಿಗೆ ಇದಕ್ಕಿಂತಲೂ ಫಲವತ್ತಾದ ಭೂಮಿ ಇನ್ನಾವುದಿದ್ದೀತು ! ಮಾನ್ಯ ಡಾ॥ ವಿ. ಎಸ್. ಆಚಾರ್ಯರೆ, ದಯಮಾಡಿ ನಾಳಿನ ನಮ್ಮ ದೇಶ ಹೇಗಿರಬೇಕು ಮತ್ತು ಹೇಗಿರುತ್ತದೆ ಎಂಬುದನ್ನು ಭಾವಿಸಿಕೊಳ್ಳಿ. ಆಗಲಾದರೂ ನಿಮ್ಮ ಮನಸ್ಸು ಸ್ವಲ್ಪ ತಿಳಿಯಾಗಬಹುದು, ಕ್ರಿಯಾಶಾಲಿತ್ವ ಮೂಡಬಹುದು. ಮಾರ್ಚ್ ೧೪ರಂದು ಮಂಗಳೂರಿನಲ್ಲಿ ನಡೆದ ''ಸೌಹಾರ್ದಕ್ಕಾಗಿ ನಡಿಗೆ'' ಈ ಸಂದೇಶವನ್ನು ನೀಡಲು ಒಂದು ಚಿಕ್ಕ ಪ್ರಯತ್ನವಾಗಿತ್ತು. ಅಂತಹ ಯತ್ನಗಳು ನೂರ್ಮಡಿಯಾಗಿ ಬೆಳೆಯಬೇಕು, ವಿಚ್ಛಿದ್ರಕಾರಿ ಶಕ್ತಿಗಳು ಕುಗ್ಗಿಹೋಗಬೇಕು, ನಯವಾದ ಸಂವಾದ ಏರ್ಪಡಬೇಕು. ನಮ್ಮ ದೇಶಕ್ಕೆ ನಾವೇ ಬೆಂಕಿ ಹಾಕಿಕೊಂಡರೆ ಸುತ್ತಲೂ ಇರುವ ಸಮುದ್ರಗಳಿಂದ ನೀರು ತಂದು ಹಾಕುವವರು ಯಾರಿರುತ್ತಾರೆ, ಜ್ವಾಲೆಯನ್ನು ನಂದಿಸುವುದು ಹೇಗೆ ? ''ತದೈಚ್ಛತ ಬಹುಸ್ಯಾಂ ಪ್ರಜಾಯೇಯ'' ಎಂದು ಪರಬ್ರಹ್ಮ ವಸ್ತುವಿನ ಬಗ್ಗೆ ಉಪನಿಷತ್ತಿನಲ್ಲಿ ಒಂದು ಮಾತಿದೆ. ಅಂದರೆ, ಏಕಾಂಗಿತ್ವದ ಬದಲು ಬಹುತ್ವವನ್ನು ಸ್ವಾಗತಿಸುವ ವಿಧಾನ ಅದು. ನಮ್ಮ ದೇಶವು ಬಹುತ್ವದ ಪ್ರತಿನಿಧಿ. ಅದೇ ನಮ್ಮ ಹೆಮ್ಮೆ. ಅಂತಹ ಉಜ್ವಲ ಕಿರೀಟವನ್ನು ನಾವು ತುಳಿದುಹಾಕುವುದು ಉಚಿತವೆ ? ಎಲ್ಲರೂ ಸಾವಧಾನವಾಗಿ ಆಲೋಚಿಸಿಕೊಳ್ಳೋಣ.

* * *

ಒಂದು ಸುದ್ದಿ ವರದಿಯಾಗಿತ್ತು. ನಂತರ ಅದರ ಮಾತೇ ಇಲ್ಲ. ಕೆಲವು ಅಹಿತಕರ

(೭ನೇ ಪುಟಕ್ಕೆ)




**ಜನವರಿ ವಿಶೇಷ ಸಂಚಿಕೆ – ೨೦೦೮**

ಹೊಸ ವರುಷದ 'ಹೊಸತು' ವಿಶೇಷ ಸಂಚಿಕೆ ತಲುಪಿರುವುದು ಹಳೆಯ ಮಾತಾಯಿತು. 'ಇಂದು-ನಾಳೆ' ಎಂದು ಇಂದಿನ ತನಕ ನನ್ನ ಮೆಚ್ಚಿಗೆಯ ನಾಲ್ಕು ಸಾಲು ಸಹ ಬರೆಯಲಾಗಲಿಲ್ಲ, ಕ್ಷಮೆಯಿರಲಿ.

ವ್ಯಾವಹಾರಿಕವಾಗಿ ಮಾತಾಡುವುದಾದರೆ, ಇಷ್ಟು ಕಡಿಮೆ ಬೆಲೆಯಲ್ಲಿ ಇಷ್ಟೊಂದು ವಾಚನಸಾಮಗ್ರಿಯನ್ನು ಪೂರೈಸುವ ಭಾರತದ ಸಮಸ್ತ ವಿಶೇಷ ಸಂಚಿಕೆಗಳಲ್ಲಿ 'ಹೊಸತು'ವಿಗೇ ಅಗ್ರಸ್ಥಾನವೆಂಬುದು ನನ್ನ ತಿಳುವಳಿಕೆ! ಇದು ಅತಿಶಯೋಕ್ತಿಯೆನಿಸಿದರೂ ನನ್ನ ಪಾಲಿಗೆ ಇದು ಸತ್ಯವೇ. ಯಾಕೆಂದರೆ, ನಾನು ಮುಂಬಯಿಯಲ್ಲಿದ್ದಾಗ ಭಾರತದ ಇತರ ಭಾಷೆಗಳ ವಿಶೇಷ ಸಂಚಿಕೆಗಳನ್ನು ಕಂಡಿದ್ದೇನೆ. ಅಲ್ಲಿಯ ನನ್ನ ಸಾಹಿತಿಮಿತ್ರರೊಡನೆ ಚರ್ಚಿಸಿದ್ದೇನೆ. ಬಹಳಷ್ಟು ವಿಚಾರಪೂರ್ಣ ಹಾಗೂ ಸತ್ವಯುಕ್ತ ಕತೆ-ಕವನ-ಲೇಖನಗಳನ್ನು ಓದುಗರಿಗೆ ಒದಗಿಸುವ ಗುರಿಯುಳ್ಳ ಇಂಥ ವಿಶೇಷ ಸಂಚಿಕೆಗಳಿಗೆ ಒಳಪುಟಗಳ ಲೇಔಟ್‌ಗಳು ಇತ್ಯಾದಿ ತಾಂತ್ರಿಕ ಕಟ್ಟುನಿಟ್ಟುಗಳು ಗೌಣವಾಗಿ ಕಂಡರೂ ಅಚ್ಚರಿಯಲ್ಲ. 'ಹೊಸತು' ವಿಶೇಷ ಸಂಚಿಕೆಯ ಹಲವು ವೈಚಾರಿಕ ಹಾಗೂ ಮಾಹಿತಿಪೂರ್ಣ ಲೇಖನಗಳಂತೂ ಬಹುಕಾಲದವರೆಗೆ ಜಿಜ್ಞಾಸುಗಳಿಗೆ ಆಕರಸಾಮಗ್ರಿಯಾಗಿ ಕೆಲಸಕ್ಕೆ ಬರುತ್ತವೆ! ಒಂದು ಪತ್ರಿಕೆಯ ವಿಶೇಷ ಸಂಚಿಕೆಯಿಂದ ಇದಕ್ಕೂ ಹೆಚ್ಚಿನ ವಿಶೇಷತೆಯನ್ನು ಅಪೇಕ್ಷಿಸಬಹುದೇ?

ಕುಮಟಾ **ಡಾ|| ಬಿ. ಎ. ಸನದಿ**

**ಫೆಬ್ರವರಿ ಸಂಚಿಕೆ**

'ಹೊಸತು' ಫೆಬ್ರವರಿ ಸಂಚಿಕೆ ನಿಜಕ್ಕೂ ಹೊಸ ವರ್ಷದ ಉಡುಗೊರೆಯಾಗಿ ನನ್ನ ಕೈ ಸೇರಿತು. ಮಾಸದಿಂದ ಮಾಸಕ್ಕೆ – ಹೊಸ ವಿಷಯಗಳೊಂದಿಗೆ 'ಹೊಸತು' ಸಮೃದ್ಧವಾಗಿ ಮೂಡಿಬರುತ್ತಿದೆ.

''ಮತಾಂತರವೆಂಬ ಕೊಳ್ಳಿದೆವ್ವ'' ಲೇಖನ ನಿಜಕ್ಕೂ ಇಂದಿನ ತುರ್ತು ಅಗತ್ಯವಾದ ಎಲ್ಲ ಧರ್ಮಗಳ ಬಗ್ಗೆ 'ಮಾಹಿತಿ' ನೀಡುತ್ತದೆ. ಪಿ. ಎಸ್. ಶ್ರೀಧರಮೂರ್ತಿ ಅವರು ತುಂಬಾ ತಾರ್ಕಿಕ ಅಧ್ಯಯನ ನಡೆಸಿ, ಅಂಕಿ-ಅಂಶಗಳ ಸಮೇತ ತುಂಬಾ ವಿವರವಾಗಿ ಬರೆದಿದ್ದಾರೆ.

'ಹಿಂದು' ಶಬ್ದದ ಬಗ್ಗೆ ಉತ್ತಮವಾಗಿ ಯಾವ ಅಂಜಿಕೆಯೂ ಇಲ್ಲದೆ ನೈಜವಾದ ವಿವರಣೆ, ವ್ಯಾಖ್ಯೆಗಳನ್ನು ನೀಡಿದ್ದಾರೆ. ಇದನ್ನು ಕೋಮುವಾದಿಗಳು ಅರಗಿಸಿ ಕೊಳ್ಳುವುದು ತುಂಬಾ ಕಷ್ಟ. ಆದರೆ 'ಸತ್ಯ' ಯಾವಾಗಲೂ ಸತ್ಯವೇ!

''ಮಾಧ್ಯಮ ಮತ್ತು ಸಾಮಾಜಿಕ ಹೊಣೆಗಾರಿಕೆ'' ಲೇಖನ ಇಂದಿನ ಯುಗದಲ್ಲಿ 'ಮಾಧ್ಯಮಗಳು' ನಿರ್ವಹಿಸ ಬೇಕಾದ ಜವಾಬ್ದಾರಿಯನ್ನು ಬಿಂಬಿಸುತ್ತದೆ. ವೃತ್ತ ಪತ್ರಿಕೆಗಳು ಇದ್ದುದರಲ್ಲಿ ಉತ್ತಮವಾಗಿ ತಮ್ಮ ಕಾರ್ಯ ನಿರ್ವಹಿಸುತ್ತಿವೆ. ಆದರೆ ಟಿ. ವಿ. ಚಾನೆಲ್‌ಗಳು 'ಸಾಮಾಜಿಕ-ಜವಾಬ್ದಾರಿಯನ್ನು' ಮರೆತು ವರ್ತಿಸುತ್ತವೆ.

ಸಣ್ಣ ವಿಷಯವನ್ನು ದೊಡ್ಡದಾಗಿ ಬಿಂಬಿಸುವ ಮೂಲಕ ತಮ್ಮ ಟಿಆರ್‌ಪಿಯನ್ನು ಹೆಚ್ಚಿಸಿಕೊಳ್ಳಲು ಎಲ್ಲ ಚಾನೆಲ್‌ನವರು ಹೆಣಗಾಡುತ್ತಿದ್ದಾರೆ. ಪ್ರಸ್ತುತ ಲೇಖನ ಇಂದಿನ 'ಮಾಧ್ಯಮ'ಗಳ ಬಗ್ಗೆ ಹಿಡಿದ ಕೈಗನ್ನಡಿಯಾಗಿದೆ!!

ಚನ್ನಮ್ಮನ ಕಿತ್ತೂರು **ಖುರ್ಷಿದ್ ಆಲಂ ಮೊಮಿನ**




**ಮಾರ್ಚ್ ಸಂಚಿಕೆ – ವಿಭಿನ್ನ ದನಿ!**

ಮಾರ್ಚ್ ಸಂಚಿಕೆಯ '೭೪ನೇ ಕನ್ನಡ ಸಾಹಿತ್ಯ ಸಮ್ಮೇಳನ' ಸಂಪಾದಕೀಯವೊಂದು ವಿಭಿನ್ನ ದನಿ! ಅಧ್ಯಕ್ಷರ 'ಬಂಡಾಯ ಭಾಷಣ'ವನ್ನು ಎಲ್ಲರೂ ಎಲ್ಲ ಪತ್ರಿಕೆಗಳೂ ''ಭಲೆ! ಭೇಷ್!'' ಎಂದು ಕೈವಾರಿಸಿದಾಗ, ''ಯಾರನ್ನು ಎಲ್ಲಿ ಹೇಗೆ ಪ್ರಶ್ನಿಸಬೇಕು ಎಂಬುದೂ ಮುಖ್ಯವಲ್ಲವೇ?'' ಎಂದು ಕೇಳಿದ್ದು ಪ್ರಾಯಃ 'ಹೊಸತು' ಒಂದೇ: ಅಭಿನಂದನೆ!

ಮೈಸೂರು **ಸಿಪಿಕೆ**

**ಮಾರ್ಚ್ ಸಂಚಿಕೆ**

ಮುಖಪುಟ ಚೆನ್ನಾಗಿದೆ. ೭೪ನೆಯ ಕ.ಸಾ.ಸ. ಬಗ್ಗೆ ಬರೆಯುತ್ತಾ ಡಾ|| ಎಲ್.ಬಿ.ಯವರು ಅಧ್ಯಕ್ಷಸ್ಥಾನದಿಂದ ಯಾವ ಭಿಡೆಯೂ ಇಲ್ಲದೆ ಮಾತನಾಡಿದ ಪ್ರಸ್ತಾಪ ಒಂದು. 'ಅದು ಸರಿಯಾದ ವೇದಿಕೆಯೇ?' ಎಂದು ಪ್ರಶ್ನಿಸಲಾಗಿದೆ. ಖಂಡಿತಾ ಸಾ. ಸ. ಅಧ್ಯಕ್ಷರು ತಮ್ಮ ಬಿಚ್ಚು ಮನಸ್ಸಿನ ಸ್ಪಷ್ಟನುಡಿಗಳನ್ನು ಆಡಿದ್ದಾರೆ. ಇದಕ್ಕಾಗಿ ಯಾರೂ ಮುಜುಗರ ಪಟ್ಟುಕೊಳ್ಳುವ ಅಗತ್ಯವಿಲ್ಲ. ಕನ್ನಡ ಸಾಹಿತ್ಯ ಸಮ್ಮೇಳನಗಳು/ಕನ್ನಡ ಸಾಹಿತ್ಯ ಪರಿಷತ್ತು ಸರ್ಕಾರಕ್ಕಿಂತ ದೊಡ್ಡದು. ಅದು ಸರ್ಕಾರವನ್ನು/ಸಾರ್ವಜನಿಕರನ್ನು ಅಧಿಕಾರಸ್ಥರನ್ನು ಎಚ್ಚರಿಸುವ ಕೆಲಸವನ್ನು ಮಾಡಬೇಕು. ಆ ನಿಟ್ಟಿನಲ್ಲಿ ಯೋಚಿಸಿದರೆ ಡಾ|| ಎಲ್. ಬಿ. ತಮ್ಮ ಜವಾಬ್ದಾರಿಯನ್ನು ಸಮರ್ಥವಾಗಿಯೇ ನಿರ್ವಹಿಸಿದ್ದಾರೆ.

ಮೈಸೂರು **ಕೊ. ಸು. ನರಸಿಂಹಮೂರ್ತಿ**

ಮಾರ್ಚ್ ೨೦೦೮ರ ಸಂಚಿಕೆ ಎಂದಿನಂತೆ ಮುದ ನೀಡಿತು. ಸಂಪಾದಕೀಯದ ಬೇರೆ ಬೇರೆ ವಸ್ತು-ವಿಷಯಗಳು ವಿಶ್ವದ ಅತಿದೊಡ್ಡ ಪ್ರಜಾಪ್ರಭುತ್ವದ ನಡವಳಿಕೆಯನ್ನು ಕೂಲಂಕಷವಾಗಿ ದಾಖಲಿಸಿವೆ. ಪ್ರಾಯಶಃ ಡೆಮಾಕ್ರಸಿ ಮತ್ತು ಸೆಕ್ಯೂಲರಿಸಂಗಳು ಏಕಕಾಲದಲ್ಲಿ ಮಿಳಿತಗೊಂಡಿರುವುದರಿಂದಲೇ ಇಷ್ಟೆಲ್ಲಾ ಅವಾಂತರಗಳು, ವೈರುಧ್ಯಗಳು ಮತ್ತು ಅವಜ್ಞೆಗಳು ಸಂಭವಿಸಲು ಕಾರಣವಾಗಿರಬಹುದು. ನಾವು ಭಾರತೀಯರು, ಅದರಲ್ಲೂ ಸುಶಿಕ್ಷಿತರು ಎನ್ನಿಸಿಕೊಂಡವರು, ಒಂದು ಹಂತದಲ್ಲಿ ಅನುಕೂಲಕ್ಕೆ ತಕ್ಕಂತೆ ರಾಜೀ ಮನೋಧರ್ಮ ತಾಳುತ್ತಲೇ ಮತ್ತೊಂದೆಡೆ ಅದಕ್ಕೆ ತದ್ವಿರುದ್ಧ ನಿಲುವಿಗೆ ಬದ್ಧತೆಯನ್ನು ವ್ಯಕ್ತಪಡಿಸುವ ಎಡಬಿಡಂಗಿತನ ಪ್ರದರ್ಶಿಸುವಲ್ಲಿ ನಿಸ್ಸೀಮರಾಗಿದ್ದೇವೇನೋ ಅನ್ನಿಸುತ್ತದೆ. ಆಗ ಒಟ್ಟು ಫಲಿತಾಂಶ ಸಹಜವಾಗಿಯೇ ಗೊಂದಲಮಯವಾಗಿರುತ್ತದೆ. ಇದಕ್ಕೆಲ್ಲಾ ಮೂಲ ಕಾರಣ 'ಶಿಕ್ಷಣದ ಮೂಲ ಆಶಯಗಳು ಹೊಟ್ಟೆ ಪಾಡಿಗಷ್ಟೇ ಸೀಮಿತವಾಗುತ್ತಿರುವುದೇ ಆಗಿದೆ.' ಅಲ್ಲದೆ ಅದು ಹೆಚ್ಚಿಸುವ ಸ್ವಾರ್ಥಪರತೆ ಮತ್ತಷ್ಟು ಅಧ್ವಾನಗಳಿಗೆ ಮುನ್ನುಡಿಯಾಗುತ್ತದೆ! ಹಾಗಾಗಿ ವಿವೇಚನೆ ಹಾದಿ ತಪ್ಪುವುದು ನಿರೀಕ್ಷಿತವಾಗುತ್ತದೆ.

ಇವೆಲ್ಲ ವಿದ್ಯಮಾನಗಳಿಗೆ ಪರಿಹಾರ ಎಂಬಂಥ ಉತ್ತರಗಳ ಮಾದರಿ ಈ ಸಂಚಿಕೆಯ ಮುಂದಿನ ಪುಟಗಳಲ್ಲಿ ಸಾಕಷ್ಟು ತುಂಬಿರುವುದೇ 'ಹೊಸತು'ವಿನ ಹೊಸತನ.

ಚಿತ್ರದುರ್ಗ **ಚನ್ನಬಸವ ಪುತ್ತೂರ್ಕರ**

---

*ಈ ತಿಂಗಳು* *(೬ನೇ ಪುಟದಿಂದ)*

ಘಟನೆಗಳನ್ನು, ಅಪ್ರಬುದ್ಧ ನಡತೆಯನ್ನು, ಹಾಗೆ ಮುಚ್ಚಿಹಾಕಬೇಕಾದ್ದು, ಪತ್ರಿಕಾ ನೀತಿಯ ಒಂದು ಭಾಗವೇನೊ! ನಮಗದು ತಿಳಿಯದು. ಸಂಗತಿ ಚಿಕ್ಕದು, ಆದರೆ ಅದರ ಹಿಂದಿನ ಮನಸ್ಸು ಮತ್ತು ಭಾವನೆ ಬಹಳ ಕೊಳಕಾದ್ದು. ಕರ್ನಾಟಕ ಸರ್ಕಾರವು ಶ್ರೀ ಫಕೀರ್ ಅಹಮದ್ ಕಟ್ಪಾಡಿಯವರನ್ನು ಬ್ಯಾರಿ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರನ್ನಾಗಿ ಮಾಡಲು ಆಜ್ಞೆ ಹೊರಡಿಸಿತು ಮತ್ತು ಅದು ವರದಿಯಾಯಿತು. ಎಂಥ ಸಜ್ಜನರನ್ನು ಆಯ್ಕೆ ಮಾಡಿದ್ದಾರೆಂದು ಸಂತಸದಿಂದ ಹಲವರು ಕಟ್ಪಾಡಿಯವರಿಗೆ ಅಭಿನಂದನೆ ಹೇಳಿದರು. ಆದರೆ ಎಷ್ಟು ದಿನಗಳು ಕಳೆದರೂ ಅವರು ಅಧ್ಯಕ್ಷ ಸ್ಥಾನಕ್ಕೆ ಬರಲಿಲ್ಲ. ಆ ಬಗ್ಗೆ ಬೇರೆ ಯಾವ ವರ್ತಮಾನವನ್ನೂ ಸರ್ಕಾರ ನೀಡಲಿಲ್ಲ. ಒಂದು ದಿನ ಹಠಾತ್ತನೆ ಬೇರೊಬ್ಬರ ನೇಮಕಾತಿಯ ಬಗ್ಗೆ ಆಜ್ಞೆ ಹೊರಟಿತು ಮತ್ತು ಅದನ್ನು ವರದಿ ಮಾಡಲಾಯಿತು. ಪ್ರಶ್ನೆ ಇಷ್ಟೆ: ಶ್ರೀ ಕಟ್ಪಾಡಿಯವರು ಅರ್ಹರೆಂದು ತೀರ್ಮಾನಿಸಿದ ನಂತರ ಅವರಲ್ಲಿ ಯಾವ ಹುಳುಕನ್ನು ಸಂಬಂಧಪಟ್ಟ ಸಚಿವರು (ಅಂದರೆ ಮುಖ್ಯಮಂತ್ರಿಗಳು) ಕಂಡುಹಿಡಿದರು? ಕಟ್ಪಾಡಿಯವರಲ್ಲಿ ಕ್ಷಮೆಯನ್ನಾದರೂ ಯಾಚಿಸಲಾಯಿತೆ? ಇದೇ ಏನು ಸಂಸ್ಕೃತಿ ಇಲಾಖೆಯ ಸಂಸ್ಕೃತಿ? ನಮ್ಮ ಸಾಹಿತಿಗಳಿಗೆ ಇದು ತಿಳಿದಿದೆಯೆ? ತಿಳಿದಿದ್ದರೆ ಏನು ಮಾಡಬಯಸುತ್ತಾರೆ?

ಸಂಪಾದಕೀಯ (೫ನೇ ಪುಟದಿಂದ)

ಭಾಜಪಗಳನ್ನು ಕೇಂದ್ರ ಸರ್ಕಾರದಿಂದ ಹೊರದೂಡಲು ಸಾಧ್ಯವಿದೆ.

ಇಂತಹ ಮೂರನೆಯ ರಂಗದ ಆದ್ಯತೆಗಳು ಹೀಗಿರಬೇಕು : (ಅ) ಜಾಗತೀಕರಣ ಮತ್ತು ವಿಶೇಷ ಆರ್ಥಿಕ ವಲಯಗಳ ಹೆಸರಿನಲ್ಲಿ ವಿದೇಶಿ ಕಂಪನಿಗಳು ಭಾರತವನ್ನು ಲೂಟಿಮಾಡುವ ಪ್ರಕ್ರಿಯೆಗೆ ಇತಿಶ್ರೀ ಹಾಡಬೇಕು; (ಆ) ನಮ್ಮ ದೇಶದ ಸಂಪನ್ಮೂಲಗಳನ್ನು ನಾವೇ ಬಳಸಿಕೊಂಡು ಮೌಲ್ಯವೃದ್ಧಿ ಮಾಡಬೇಕು ಮತ್ತು ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಸ್ವತಂತ್ರವಾಗಿ ವ್ಯವಹರಿಸಬೇಕು; (ಇ) ಕೃಷಿಭೂಮಿಯನ್ನು ಯಾವುದೇ ಕಾರಣಕ್ಕೂ ವ್ಯರ್ಥ ಮಾಡಕೂಡದು; (ಈ) ಸ್ವಿಟ್ಸರ್ಲೆಂಡಿನ ಬ್ಯಾಂಕುಗಳಲ್ಲಿರುವ ಭಾರತೀಯರೆಲ್ಲರ ಹಣವನ್ನು ನಮ್ಮ ದೇಶಕ್ಕೆ ತಂದುಕೊಳ್ಳಬೇಕು ಮತ್ತು ನಮ್ಮ ಉದ್ಯಮಗಳಿಗೆ ಅದನ್ನು ಬಂಡವಾಳವನ್ನಾಗಿ ಮಾಡಿಕೊಳ್ಳಬೇಕು; (ಉ) ಶಿಕ್ಷಣ, ಆರೋಗ್ಯ, ಸಾರಿಗೆ ಮತ್ತು ವಸತಿ, ಇವು ಸಾರ್ವಜನಿಕರೆಲ್ಲರಿಗೂ ಎಟಕುವಂತೆ ಮಾಡಲು ಸೂಕ್ತ ತೀರ್ಮಾನಗಳನ್ನು ಅಳವಡಿಸಿಕೊಂಡು ಅದನ್ನು ಆದ್ಯತೆಯ ಕಾರ್ಯಕ್ರಮವಾಗಿ ಅನುಷ್ಠಾನಕ್ಕೆ ತರಬೇಕು; (ಊ) ವಿದೇಶಾಂಗ ನೀತಿಯನ್ನು ಸ್ವತಂತ್ರ ಮತ್ತು ಅಲಿಪ್ತ ನೆಲೆಯಲ್ಲಿ ಪರಿವರ್ತಿಸಿ ದೇಶದ ಸಾರ್ವಭೌಮತ್ವವನ್ನು ಮತ್ತೆ ಸ್ಥಾಪಿಸಿಕೊಳ್ಳಬೇಕು; (ಋ) ಷೇರು ಮಾರುಕಟ್ಟೆಯೇ ದೇಶದ ಸರ್ವಸ್ವವೆಂಬ ಮೂರ್ಖತನದ ನೀತಿಯನ್ನು ಕಿತ್ತೆಸೆಯಬೇಕು; (ೠ) ದೇಶದ ಆರ್ಥಿಕ ಮತ್ತು ಸಾಂಸ್ಕೃತಿಕ ಸ್ವಾವಲಂಬನೆಯನ್ನು ಬಲಪಡಿಸಬೇಕು; ಮತ್ತು (ಎ) ಭಾರತೀಯರು, ಕ್ರೀಡೆಯೂ ಸೇರಿದಂತೆ, ಎಲ್ಲ ಕ್ಷೇತ್ರಗಳಲ್ಲೂ ವಿಶ್ವದ ಇತರರೊಡನೆ ಸಮಾನಸ್ಕಂಧರಾಗಿ ಹೆಮ್ಮೆಯಿಂದ, ಆದರೆ ನಿಗರ್ವಿಗಳಾಗಿ, ಬಾಳುವಂತಾಗಬೇಕು.

ಇವನ್ನು ಕಾರ್ಯಕ್ರಮದ ಅವಿಭಾಜ್ಯ ಅಂಗಗಳನ್ನಾಗಿ ಹೊಂದಿ, ಅವಕ್ಕೆ ಪೂರಕವಾದ ಇತರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದಾದರೆ ತೃತೀಯ ರಂಗಕ್ಕೆ ಸಮರ್ಥನೆ ಮತ್ತು ಅಧಿಕಾರಕ್ಕೆ ಬರುವ ಸಾಧ್ಯತೆ ಇರುತ್ತದೆ. ಕಾಂಗ್ರೆಸ್ ಮತ್ತು ಭಾರತೀಯ ಜನತಾ ಪಕ್ಷಗಳು ಈ ಕಾರ್ಯಕ್ರಮದ ಲವಲೇಶವನ್ನೂ ಅಂಗೀಕರಿಸುವುದಿಲ್ಲ ಮತ್ತು ಅಂಗೀಕರಿಸುವಂತೆ ನಟನೆ ಮಾಡಿದರೆ ಅದಕ್ಕೆ ಗೌರವ ತೋರಿಸುವುದಿಲ್ಲ. ಆದ್ದರಿಂದ ಈ ಬಾರಿಯ ಚುನಾವಣೆಯು ಪ್ರಖರವಾದ ಪ್ರಾಮುಖ್ಯತೆಯನ್ನು ಪಡೆಯುತ್ತದೆ. ಸೀಳುದಾರಿ ಸಿಕ್ಕಾಗ ಸರಿಯಾದ ಹಾದಿಯನ್ನು ಗುರುತಿಸಿ ಅದರಲ್ಲಿ ಮುಂದೆ ನಡೆಯುವುದು ಆಕಾಂಕ್ಷೆಯ ಪೂರೈಕೆಗೆ ಮೊಟ್ಟಮೊದಲ ಸಾಧನ. ನಮ್ಮ ದೇಶದ ಮತದಾರರು ಹಿಂದೆಷ್ಟೋ ಬಾರಿ ಜಾಣ್ಮೆಯಿಂದ ದೇಶದ ಹಿತಕ್ಕಾಗಿ ಕೈಜೋಡಿಸಿದ್ದಾರೆ. ಹಿಂದೆಂದಿಗಿಂತಲೂ ಸಮರ್ಥವಾಗಿ ಅದನ್ನು ಮಾಡುವುದು ಇಂದಿನ ತುರ್ತು ಅಗತ್ಯ. ಯಾವ ಪಕ್ಷಗಳು ಗೆಲ್ಲುತ್ತವೆಂಬುದು ಗೌಣ, ಮೂಲತಃ ಮತದಾರನು ತಾನು ಸ್ವತಃ ಗೆಲ್ಲುತ್ತಾನೆಯೇ ಎಂಬುದು ದೇಶದ ಭವಿಷ್ಯವನ್ನು ನಿರ್ಧರಿಸುತ್ತದೆ. ಆ ದೃಷ್ಟಿಯಿಂದ ಮೂರನೆಯ ರಂಗದ ಯಶಸ್ಸು ಅಪೇಕ್ಷಾರ್ಹವಾಗಿದೆ.

# ಎಳ್ಳ ಅಮಾವಾಸ್ಯೆ ಬಗೆಗೆ ಇನ್ನೊಂದು ಬರಹ

ಕೃಷಿ ಮತ್ತು ಜನಪದಗಳು ಒಂದಕ್ಕೊಂದು ಬೆಸೆದುಕೊಂಡಿವೆ. ಅಲ್ಲದೆ ಕಾಲದ ವಿವಿಧ ಹಂತಗಳಲ್ಲಿ ಬೇರೆ ಬೇರೆ ಅಂಶಗಳನ್ನು ಸೇರಿಸಿಕೊಂಡು ಸಂಕೀರ್ಣ ಸ್ವರೂಪ ಪಡೆದಿವೆ, ಸಾಂಕೇತಿಕವಾಗಿವೆ ಅಲ್ಲದೆ ಅಂದಿನ ಬದುಕಿನ ಗತಿ ಚಿತ್ರ ನೀಡುವ ರೂಪಕಗಳಾಗಿವೆ. ಅಂತಹ ಅರ್ಥಪೂರ್ಣ ಆಚರಣೆಗಳಲ್ಲಿ ಎಳ್ಳ ಅಮಾವಾಸ್ಯೆಯೂ ಒಂದು.

ಮಾನವನ ಮೊಟ್ಟಮೊದಲ ಕಾಯಕ ಕೃಷಿ. ಕೃಷಿ ಆಚರಣೆಗಳು ಬಹಳ ಪುರಾತನವಾದವು. ಇವು ಮಾನವನ ಸಂಸ್ಕೃತಿಯನ್ನು ಬಿಂಬಿಸುವ ಜೀವಂತ ಪಳೆಯುಳಿಕೆಗಳಾಗಿವೆ.

ಉತ್ತರ ಕರ್ನಾಟಕದಲ್ಲಿ ಹೆಚ್ಚು ಪ್ರಚಲಿತದಲ್ಲಿರುವ – ವಿಶೇಷವಾಗಿ ಬಯಲುನಾಡಿನಲ್ಲಿ ಸಂಭ್ರಮದಿಂದ ಆಚರಿಸಲ್ಪಡುವ – ಎಳ್ಳ ಅಮಾವಾಸ್ಯೆ ಒಂದು ಜನಪದ ಹಬ್ಬ. ಹಿಂಗಾರಿ ಬೆಳೆಗಳು ಹಸಿರುಟ್ಟು ಮೈದುಂಬಿ ನಿಂತಿರುವ ಋತುಮಾನ. ಈ ಹಂತದಲ್ಲಿ ಹಿಂಗಾರಿ ಜೋಳ ಹಾಲಗಾಳು ಬೆಳೆಸಿ ಒಂದು ಹಂತಕ್ಕೆ ಬಂದಿರುತ್ತವೆ. ಗರ್ಭ ಧರಿಸಿದ ಭೂತಾಯಿಗೆ ಬಯಕೆ ಬುತ್ತಿ ಉಣಿಸಿ, ಸೀಮಂತ ಕಾರಣ ಮಾಡುತ್ತಾನೆ ನಮ್ಮ ರೈತ. ಲೇಖಕರು ಭೂತಾಯಿ ಮದುವಣಗಿತ್ತಿ ಆಗಿರುತ್ತಾಳೆ ಎಂದಿದ್ದಾರೆ. ಆದರೆ ಇದು ಸೀಮಂತ ಕಾರಣ. ಈಗಲೂ ಜನಪದ ಗರತಿಯರು ಸೀಮಂತ ಕಾರಣವೆಂದೇ ಕರೆಯುತ್ತಾರೆ. ಈ ಸೀಮಂತ ಕಾರಣದ ಹಬ್ಬ ಮುಂಗಾರಿ ಬೆಳೆಯುವ ಪ್ರದೇಶದಲ್ಲಿ ಶೀಗೆ ಹುಣ್ಣಿಮೆ ಸಂದರ್ಭದಲ್ಲೂ ಆಚರಿಸಲ್ಪಡುತ್ತದೆ. ಕೆಲವು ಕಡೆ ಎರಡೂ ಸಂದರ್ಭ (ಶೀಗೆ ಹುಣ್ಣಿಮೆ ಮತ್ತು ಎಳ್ಳ ಅಮಾವಾಸ್ಯೆ)ಗಳಲ್ಲಿ ಚರಗ ಚೆಲ್ಲಿ ಕೃತಾರ್ಥರಾಗುತ್ತಾರೆ. ಮುಂಗಾರಿ ಹಿಂಗಾರಿ ಎರಡೂ ಸಮನಾಗಿ ಬೆಳೆಯುವ ಪ್ರದೇಶದಲ್ಲಿ ಈ ಆಚರಣೆ ರೂಢಿಯಲ್ಲಿದೆ.

ಬನ್ನಿ ಗಿಡದ ಬುಡದಲ್ಲಿ ಐದು ಕಲ್ಲುಗಳನ್ನಿಟ್ಟು ವಿಭೂತಿ ಕುಂಕುಮ ಹಚ್ಚಿ ಎಡೆ ಮಾಡುತ್ತಾರೆ. ಇಲ್ಲಿಯ ಐದು ಕಲ್ಲುಗಳು ಮತ್ತು ಬನ್ನಿ ಮರ ಪಾಂಡವರ ನೆನಪನ್ನು ತರುವುದು ಸಹಜ. ಆದರೆ ಐದು ಕಲ್ಲುಗಳು ಪಂಚಭೂತಗಳ ಪ್ರತೀಕವಾಗಿರಬೇಕು. ಏಕೆಂದರೆ ಈ ಸಂಪ್ರದಾಯ ಪಾಂಡವರಿಗಿಂತಲೂ ಪುರಾತನವಾದ ಆದಿಮ ಕೃಷಿ ಜೀವನಕ್ಕೆ ಸಂಬಂಧಪಟ್ಟದ್ದು. ವಿಭೂತಿ ಬದಲಾಗಿ ಐದು ಕಲ್ಲುಗಳಿಗೆ ದುಂಡಗೆ ಸುಣ್ಣ ಬರೆಯುವ ವಿಧಾನ ನಮ್ಮ ಭೂಮಿ - ವಿಶ್ವದ ಪ್ರತೀಕವಾಗಿದೆ ಎಂಬುದನ್ನು ಸೂಚಿಸುತ್ತದೆ.

ಚರಗ ಚೆಲ್ಲುವ ಸಂದರ್ಭದಲ್ಲಿ ಬಳಸುವ ಪದಗಳೂ ಸಹ ಇದು ಪಂಚಭೂತಗಳಿಗೆ ಅರ್ಪಿತವೆಂಬುದನ್ನೇ ಧ್ವನಿಸುತ್ತವೆ. ''ಹುಲ್ಲುಲ್ಲಿಗೊ - ಚೆಲ್ಲಂಬರಿಗೊ'' ಈ ಪದಗಳು ಹುಲ್ಲು ಹುಲ್ಲಿಗೂ ಅರ್ಪಿತವಾಗಲಿ, ಅಂಬರಕ್ಕೂ ಅರ್ಪಿತವಾಗಲಿ! ಈ ಪ್ರಸಾದವನ್ನು ಕೊಟ್ಟದ್ದು ಈ ಸಸ್ಯ ಸಂಕುಲವೆ ಆದ್ದರಿಂದ ಆ ಜೀವಸಂಕುಲಕ್ಕೆ ಮತ್ತು ಅದು ಬೆಳೆಯಲು ಕಾರಣವಾದ ಮಳೆ ನೀಡಿದ ಮೋಡಕ್ಕೆ ಅರ್ಪಿತವಾಗಲಿ ಎಂಬ ಆಶಯವಿದೆ. ಭೂಮಿ ಮತ್ತು ಅಂಬರದ ಒಡಲಲ್ಲಿಯೇ ಎಲ್ಲ ಪಂಚಭೂತಗಳು ಬರುವುದರಿಂದ ಈ ಪ್ರಸಾದ ಎಲ್ಲ ಪಂಚಭೂತಗಳಿಗೂ ಸಲ್ಲುತ್ತದೆ. ಇನ್ನು ಬನ್ನಿಮರದ ಪ್ರಸ್ತಾಪವನ್ನು ಗಮನಿಸಿದರೆ ಕೃಷಿ ಜೀವನದಲ್ಲಿ ಅದಕ್ಕೆ ಮಹತ್ವದ ಸ್ಥಾನವಿದೆ. ಏಕೆಂದರೆ ಬನ್ನಿ ಮರವಿದ್ದಲ್ಲಿ ಅಂತರ್ಜಲ ಇದ್ದೇ ಇರುತ್ತದೆ ಎಂಬ ನಂಬಿಕೆ ರೈತನದು. ಅಲ್ಲದೆ ಆ ಗಿಡದ ನೆರಳಲ್ಲಿ ಇತರ ಎಲ್ಲ ಗಿಡಗಳಿಗಿಂತಲೂ ಬೆಳೆ ಚೆನ್ನಾಗಿ ಬೆಳೆದಿರುತ್ತದೆ. ಹೀಗಾಗಿ ಆ ಮರದೇವತೆಗೆ ಪೂಜೆ. ಬನ್ನಿ ಹಬ್ಬದ ಆಚರಣೆ ಹಿನ್ನೆಲೆಯೂ ಸಹ ಈ ಜನಪದ ಆಚರಣೆಯೇ ಆಗಿದೆ. ಬನ್ನಿ ಎಲ್ಲೆಲ್ಲೂ ಬೆಳೆದು ನಮಗೆ ಬಂಗಾರದ ಬೆಳೆ ನೀಡಲಿ, ನಾವೆಲ್ಲರೂ ಬೆಳೆದ ಸಂಪತ್ತನ್ನು ಹಂಚಿಕೊಂಡು ಬಂಗಾರದಂತಹ ಜೀವನವನ್ನು ನಡೆಸೋಣ ಎಂಬುದೇ ಇಲ್ಲಿಯ ಆಶಯ. ಒಟ್ಟು ಈ ಆಚರಣೆಗಳಿಗೆ ಕಾಲಾಂತರದಲ್ಲಿ ಪಾಂಡವರ ಹೆಸರುಗಳು ತಳಕು ಹಾಕಿಕೊಂಡಿವೆ. ಹೀಗೆ ಒಂದೇ ಆಚರಣೆಯಲ್ಲಿ ಅನೇಕ ಹಂತದ ಸಂಗತಿಗಳು ಸೇರಿಕೊಂಡು ಸಂಕೀರ್ಣಗೊಳಿಸಿದ ಅನೇಕ ಉದಾಹರಣೆಗಳು ಜನಪದದಲ್ಲಿವೆ. (ವಿಘ್ನಕಾರಕನಾದ ಕೃಷಿ ಮೂಲದ ಗಣಪ ಕಾಲಾಂತರದಲ್ಲಿ ವಿಘ್ನನಾಶಕನಾಗಿ, ವಿದ್ಯಾದೇವತೆಯಾಗಿಯೂ ಪೂಜೆಗೊಳ್ಳುವುದು, ಜನಪದ ಎಲ್ಲಮ್ಮ ರೇಣುಕೆಯಾಗಿ ಉದಾತ್ತೀಕರಣಗೊಂಡದ್ದು ಮುಂತಾದವು.)

ಎಳ್ಳ ಅಮಾವಾಸ್ಯೆಯ ಚರಗಕ್ಕೆ ಬಳಕೆಯಾಗುವ ಅಡುಗೆಗಳಲ್ಲಿಯೂ ವಿಶೇಷತೆ ಇದೆ. ಚರಗಕ್ಕೆ ಮತ್ತು ಎಡೆಮಾಡಲು ಉಂಡಗಡಬು – ಪುಂಡಿಪಲ್ಲೆ ಅಲ್ಲದೆ ಜೋಳದ ಬಾನ ಬೇಕೇಬೇಕು. (ಉಂಡಗಡಬು ಎಂದರೆ ಜೋಳ ಇಲ್ಲವೆ ಸಜ್ಜೆಯ ಹಿಟ್ಟಿನಿಂದ ಕುದಿಸಿ ಮಾಡಿದ ದುಂಡನೆಯ ಕಡಬು. ಬಾನ ಎಂದರೆ ಜೋಳದ ಅಕ್ಕಿಯಿಂದ ಮಾಡಿದ ಅನ್ನ. ಕಿಚಡಿ, ಇಡಿಕಿಚಡಿ ಎನ್ನುವ ಹೆಸರೂ ಬಳಕೆಯಲ್ಲಿದೆ.) ಇವು ಅತ್ಯಂತ ಪುರಾತನವಾದ ಆದಿಮಾನವನ ಅಡುಗೆಗಳು. ಅನಂತರದಲ್ಲಿ ಕರಿಗಡಬು, ಬದನೆಕಾಯಿಪಲ್ಲೆ ಮುಂತಾದ ನಾಗರಿಕ ಮಾನವನ ಅಡುಗೆಗಳು ಸೇರಿಕೊಂಡಿವೆ. ಇನ್ನು ಪುಂಡಿಪಲ್ಲೆಗೂ ಗಣಪನಿಗೂ ಸಂಬಂಧವಿರುವುದನ್ನು ಗಮನಿಸಬೇಕು. ಗಣಪ್ಪ ಗಣಪ್ಪ ಮೋರಯ್ಯ, ಪುಂಡಿಪಲ್ಲೆ ಸೂರಯ್ಯ – ಎನ್ನುವಲ್ಲಿಯೂ ಗಣಪ ನಮಗೆ ಪುಂಡಿಪಲ್ಲೆ ಸೂರೆಯಾಗುವಂತೆ ಮಾಡಲಿ, ಕೃಷಿ ಸಮೃದ್ಧಿ ತಂದುಕೊಡಲಿ ಎಂಬ ಆಶಯವೇ ಇದೆ.

ಎಳ್ಳ ಅಮಾವಾಸ್ಯೆಗೂ ಎಳ್ಳು ಜೀರಿಗೆ ಬೆಳೆವ ಭೂಮಿತಾಯಿಗೂ ನಿಕಟ ಸಂಬಂಧವಿದೆ ಎಂಬುದನ್ನು ಜನಪದ ಹಾಡಿನಲ್ಲಿಯೂ ಕಾಣಬಹುದು.

ಬಂಧು ಬಾಂಧವರ ಜೊತೆ ನೆರೆಹೊರೆಯವರನ್ನು ಜೋಗಿಜಂಗಮರನ್ನು ಉಣಿಸಿ ತೃಪ್ತಿಪಡಿಸುವ ಗುಣ ರೈತನದು. ತನ್ನ ಮೂರುತಾಳಿನ ಕೂರಿಗೆಯ ಬೆಳೆಯಲ್ಲಿ ಒಂದು ಹಕ್ಕಿ-ಪಕ್ಕಿಗೆ, ಇನ್ನೊಂದು ಆಯಗಾರರು ಮತ್ತು ಜಂಗಮರಿಗೆ, ಉಳಿದದ್ದು ತನಗೆ. ಹೀಗೆ ಹಂಚಿ ತಿನ್ನುವ ಗುಣ ರೈತನಿಗೆ ಇದ್ದೇ ಇದೆ.

**ಪ್ರೊ॥ ಆರ್. ಪಿ. ಪುನಗಿನ,** ೯೮೩, 'ಸರಸ್ವತಿ', ಮಹಾವೀರನಗರ, ಹೀರನವಾಡಿ, ಬೆಳಗಾವಿ - ೫೯೦ ೦೧೪

ನಾನೇಕೆ ಮಾತನಾಡುವುದಿಲ್ಲ,
ಬಯಕೆಗಳ ಬಗ್ಗೆ,
ಬಳ್ಳಿಗಳ ಬಗ್ಗೆ,
ನನ್ನ ನಾಡಿನ ಮಹಾ ಅಗ್ನಿಪರ್ವತಗಳ ಬಗ್ಗೆ,
ಎಂದು ನೀವು ಕೇಳುತ್ತೀರಿ!
ನೋಡಿ, ಬೀದಿಯ ಮೇಲೆ ರಕ್ತವಿದೆ,
ರಕ್ತವಿದೆ ಬೀದಿಯ ಮೇಲೆ — ಪಾಬ್ಲೊನೆರೂಡ

ಎಸ್. ಎಸ್. ಹಿರೇಮಠ ೫-೦೩-೨೦೦೯ರಂದು ಕ್ಯಾನ್ಸರ್‌ನಿಂದ ಸಾವನ್ನಪ್ಪಿದರು. ಕೋಮುವಾದ, ಜಾತಿವಾದ, ಅಸಮಾನತೆ, ಅನಕ್ಷರತೆ ಈ ಸಮಾಜಕ್ಕಂಟಿದ ಕ್ಯಾನ್ಸರ್ ಎಂದು, ಅವುಗಳ ವಿರುದ್ಧದ ಹೋರಾಟಕ್ಕೆ ತಮ್ಮ ಜೀವನವನ್ನೇ ಮುಡಿಪಾಗಿಟ್ಟ ಶ್ರೀ ಎಸ್. ಎಸ್. ಹಿರೇಮಠರು ತಮ್ಮ ವೈಯಕ್ತಿಕ ಬದುಕಿನಲ್ಲಿ ಆರೋಗ್ಯದ ಬಗ್ಗೆಯೂ ಕನಿಷ್ಠ ಕಾಳಜಿ ವಹಿಸದೆ, ಕ್ಯಾನ್ಸರ್‌ಗೆ ಬಲಿಯಾದದ್ದು ದುರಂತ.



ನಾಗರಾಜ್, ಜಂಬಯ್ಯ ನಾಯಕ, ಗುರುಶಾಂತ್, ಪರಶುರಾಮ್ ಕಲಾಲ್, ಸುಕನ್ಯಾ ಮಾರುತಿ, ಗಂಗಾಧರ ಕುಷ್ಠಗಿ, ಕುಂ.ವೀ., ಹರಿಣಿ ಕಕ್ಕೇರಿ, ಎಸ್. ಆರ್. ಆರಾಧ್ಯ, ಇನ್ನೂ ಹಲವು ನಾಯಕರು, ಬರಹಗಾರರು, ವಿದ್ಯಾರ್ಥಿಗಳು ಇಲ್ಲಿ ಸೇರುತ್ತಿದ್ದರು. ಸಭೆಗಳು, ಸಂಘಟನೆ ಕೆಲಸಗಳು ಇವರ ಮನೆಯಲ್ಲೇ ನಡೆಯುತ್ತಿದ್ದವು.

ಪುಸ್ತಕ ಪ್ರಿಯರಾದ ಎಸ್.ಎಸ್. ಯಾವ ಕಾಲಕ್ಕೂ ಮೋಜನ್ನು ಇಚ್ಚಿಸಲಿಲ್ಲ. ಅವರ ಸಹೋದ್ಯೋಗಿಗಳಲ್ಲಿ ಹಲವರು ಮಿತ್ರರು ಕ್ಲಬ್, ಬಾರ್‌ಗಳ ಮೋಜಿನಲ್ಲಿ ಕಾಲ ಕಳೆಯುತ್ತಿದ್ದಾಗ, ಇವರು ಕ್ರಿಯಾತ್ಮಕವಾಗಿ ಯೋಚಿಸುತ್ತಾ ಬಡ ವಿದ್ಯಾರ್ಥಿಗಳಿಗೆ ಧನಸಹಾಯ, ಪುಸ್ತಿಕೆ, ಫೀಜು ಕಟ್ಟುವುದು ಸಂಘಟನಾಕಾರರ ಕಷ್ಟಗಳಿಗೆ ಸ್ಪಂದಿಸುತ್ತಾ ಇದ್ದರು.

ಕನ್ನಡ ವಿ.ವಿ.ಯ ಬಗ್ಗೆ ನಾಡಿನ ಹಲವು ಭಾಗಗಳಿಂದ ವಿರೋಧ ಧ್ವನಿ ಎದ್ದಾಗ, ಕನ್ನಡ ವಿ.ವಿ.ಯ ಕಾರ್ಯ, ದಿಕ್ಕು, ಯೋಚನೆ, ಯೋಜನೆಗಳ ಬಗ್ಗೆ ಹಿರೇಮಠರು

# ಪ್ರಿಯ ಹಿರೇಮಠ್ ನಿಮಗೊಂದು ಹೃದಯಪೂರ್ವಕ ನಮಸ್ಕಾರ

ಸಾಹಿತ್ಯ, ಸಾಂಸ್ಕೃತಿಕ ಚಟುವಟಿಕೆ, ಎಸ್.ಎಫ್.ಐ. ಬಂಡಾಯ ಸಾಹಿತ್ಯ ಸಂಘಟನೆ, ಡಿ.ವೈ.ಎಫ್.ಐ., ಡಿ.ಎಸ್.ಎಸ್., ಸಿ.ಪಿ.ಎಂ. ಇನ್ನಿತರ ಸಂಘಟನೆಗಳನ್ನು ಕಟ್ಟಿದ, ಬೆಳೆಸಿದ, ಬಳ್ಳಾರಿ ಜಿಲ್ಲೆಯ ಹೋರಾಟಗಾರರಲ್ಲಿ ಒಬ್ಬರಾದ ಹಿರೇಮಠರ ಸಾವು ಮಾಧ್ಯಮಗಳಲ್ಲಿ ಸ್ಥಾನ ಪಡೆಯದಿದ್ದುದು ಒಂದು ಸಾಂಸ್ಕೃತಿಕ ದುರಂತ.

ಅದು ೧೯೭೬. ಆಗಷ್ಟೇ ಕರ್ನಾಟಕ ವಿಶ್ವವಿದ್ಯಾಲಯ ದಿಂದ ಎಂ.ಎ. ಕನ್ನಡದಲ್ಲಿ ಚಿನ್ನದ ಪದಕ ಪಡೆದ ಹಿರೇಮಠ ಅವರು ಹೊಸಪೇಟೆಯ ಪ್ರಸಿದ್ಧ ವಿಜಯ ನಗರ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಸೇರಿದ್ದರು. ಶಿವರುದ್ರಯ್ಯ ಸದಾಶಿವಯ್ಯ ಹಿರೇಮಠರೆಂದರೆ, ವೀರಶೈವರಾಗಿ, ವಿ.ವಿ. ಸಂಘದ ಭಂಟರಾಗಬಲ್ಲರೆಂದೇ, ವಿ.ವಿ. ಸಂಘ ಊಹಿಸಿತ್ತೇನೋ, ಆದರೆ ಹಿರೇಮಠರು ತುಳಿದ ಹಾದಿಯೇ ಬೇರೆ. ಬಿಳೀ ಪಾಯಿಜಾಮ, ಬಿಳೀ ಜುಬ್ಬದೊಂದಿಗೆ, ಹೆಗಲಿಗೊಂದು ಚೀಲ ನೇತುಹಾಕಿ ಕೊಂಡು ಬರುತ್ತಿದ್ದ ಈ ಎಸ್.ಎಸ್. ಚೀಲದ ತುಂಬ ಪ್ರಗತಿಪರ ಸಾಹಿತ್ಯವನ್ನು, ಸಿ.ಪಿ.ಎಂ. ಸಾಹಿತ್ಯವನ್ನು ತುಂಬಿ ಕೊಂಡು, ವಿದ್ಯಾರ್ಥಿಗಳಿಗೆ ಓದಲು ಕೊಡುತ್ತಿದ್ದರು. ಅಷ್ಟೇ ಅಲ್ಲದೆ ಆಟದ ಮೈದಾನದಲ್ಲಿ ಚುರುಮುರಿ ತಿನ್ನಿಸುತ್ತಾ, ಚಹಾ ಕುಡಿಸುತ್ತಾ ವಿದ್ಯಾರ್ಥಿಗಳಿಗೆ 'ಡೈಲೆಕ್ಟಿಕಲ್ ಮೆಟೀರಿಯಲಿಸಮ್' ಕುರಿತು ಪಾಠ ಮಾಡುತ್ತಿದ್ದರು. ಅದನ್ನು ಅರಗಿಸಿಕೊಂಡವರೆಷ್ಟೋ? ಆದರೆ ಅವರು ವಿದ್ಯಾರ್ಥಿಗಳ ಗುಂಪೊಂದನ್ನು ಸಿದ್ಧ ಮಾಡಿದರು. ನಂತರದ ದಿನಗಳಲ್ಲಿ ರಾಜ್ಯದ ರಾಜಕೀಯ ತುಂಬ ಕರಪ್ಟ್ ಆಗಿತ್ತು. ಅದರ ವಿರುದ್ಧ ರಾಜ್ಯದೆಲ್ಲೆಡೆ ಎಡ ಮತ್ತು ಪ್ರಜಾಪ್ರಭುತ್ವ ಶಕ್ತಿಗಳು ತುಂಬ ಕ್ರಿಯಾತ್ಮಕವಾಗಿ ಕೆಲಸಮಾಡುತ್ತಿದ್ದವು.

ಅದೇ ದಿನಗಳಲ್ಲಿ ಬಳ್ಳಾರಿಯಲ್ಲಿ ರವಿ ಬೆಳಗೆರೆ ಬಳ್ಳಾರಿ ಪತ್ರಿಕೆ, ಪ್ರಜಾ ಜಾಗೃತಿ ಸಂಘ, ತನ್ನ ಹಲವು ವಿದ್ಯಾರ್ಥಿ/ವಿದ್ಯಾರ್ಥಿನಿ ಹಾಗೂ ಸಂಘಟಕರೊಂದಿಗೆ ತುಂಬ ವ್ಯವಸ್ಥಿತವಾಗಿ ಚಟುವಟಿಕೆ ನಡೆಸಿದ್ದರು.

ಆ ದಿನಗಳಲ್ಲಿ ರವಿ ಬೆಳಗೆರೆ 'ಎಚ್ಚರ! ನಾವು ಮತಾಂತರ ಹೊಂದುತ್ತಿದ್ದೇವೆ' ಎನ್ನುವ ನಾಟಕ ರಚಿಸಿ, ನಿರ್ದೇಶಿಸಿ, ಜಿಲ್ಲೆಯ ಹಲವು ಸ್ಥಳಗಳಲ್ಲಿ ಪ್ರದರ್ಶಿಸಿದ್ದು, ನನ್ನ ನೆನಪಿನಲ್ಲಿ ಇನ್ನೂ ಹಸಿರಾಗಿಯೇ ಉಳಿದಿದೆ.

ನಾಲ್ಕಾರು ಕವನ ಸಂಕಲನ ಒಳಗೊಂಡಂತೆ, ಸುಮಾರು ೪೦ ಕಿರುಹೊತ್ತಿಗೆಗಳನ್ನು ಹೊರತಂದ ಹಿರೇಮಠರ ಕಾವ್ಯ ತೆರೆದುಕೊಳ್ಳುವುದೇ ಹೀಗೆ :

ಮಬ್ಬುಗತ್ತಲಾಗಿತ್ತು,
ಸಂಘಟನೆ ಕೆಲಸ ಮುಗಿಸಿ ಮನೆಗೆ ಹೊರಟಿದ್ದೆ,
ಗಾಂಧಿ ವೃತ್ತದ ಬಳಿ
ಯಾರೋ ಕೈಸನ್ನೆ ಮಾಡಿ ಕರೆದಂತಾಯಿತು.
ನೋಡಿ! ಅವಾಕ್ಕಾದೆ.
ನಮ್ಮವ್ವನ ವಯಸ್ಸಾಗಿತ್ತು
ಮದರ್ ಇಂಡಿಯಾದಷ್ಟು.

ಹಿರೇಮಠರ ಮನೆ ಅಕ್ಷರಶಃ ಎಲ್ಲ ಪ್ರಗತಿಪರ ಸಂಘಟನೆಗಳ ಕೇಂದ್ರವಾಗಿತ್ತು.

ಸಿ.ಜಿ.ಕೆ., ಮಾಲತಿ, ಪಿ. ರಾಮಚಂದ್ರ ರಾವ್, ಎಂ. ಕೆ. ಭಟ್, ಬಿ. ಕೃಷ್ಣಪ್ಪ, ಜನಾರ್ಧನ್, ಗುಡಿಹಳ್ಳಿ

■ ಡಿ. ರವಿವರ್ಮ

ಕಿರುಹೊತ್ತಿಗೆ ಬರೆದಿದ್ದರು. ಡೆಪ್ಯುಟೇಶನ್ ಮೇಲೆ ಕನ್ನಡ ವಿ.ವಿ.ಯಲ್ಲಿದ್ದ ಹಿರೇಮಠರು ಆಗಿನ ಕುಲಪತಿಗಳಾಗಿದ್ದ ಕಂಬಾರರಿಗೊಂದು ಹೊಸ ಯೋಜನೆ ಕೊಟ್ಟು, ಆ ಮೂಲಕ 'ಕರ್ನಾಟಕ ಪುಸ್ತಕ ಜಾಥಾ' ಹಮ್ಮಿಕೊಂಡು ವಿ.ವಿ. ಬಗ್ಗೆ ಎಲ್ಲ ತಾಲ್ಲೂಕು, ಜಿಲ್ಲಾ ಕೇಂದ್ರಗಳಲ್ಲಿ, ಪುಸ್ತಕ ಪ್ರದರ್ಶನ ಮತ್ತು ಮಾರಾಟ, ಸಂವಾದ, ಕವಿಗೋಷ್ಠಿ ಹಮ್ಮಿಕೊಂಡು, ವಿ.ವಿ. ಬಗ್ಗೆ ಸದಭಿಪ್ರಾಯ ಮೂಡಿಸುವ ಹಾಗೂ ಸಲಹೆಗಳನ್ನು ಸಂಗ್ರಹಿಸುವ ಕೆಲಸ ಹಮ್ಮಿಕೊಂಡಿದ್ದರು. ದುರಂತವೆಂದರೆ ಬಳ್ಳಾರಿ ಕವಿ ಗೋಷ್ಠಿಯಲ್ಲಿ ಪ್ರೊ॥ ಇಟಗಿ ಈರಣ್ಣ ಓದಿದ ಕಂಬಾರರ ಬಗೆಗಿನ ವ್ಯಂಗ್ಯ ಕವನದಿಂದಾಗಿ, ಕಂಬಾರರು ಸಿಟ್ಟಿಗೆದ್ದು, ಇಡೀ ಯೋಜನೆಯನ್ನು ರದ್ದುಗೊಳಿಸಿದರು. ಆಗ ಕಂಬಾರರು ಹಿರೇಮಠರನ್ನು ಹಿಗ್ಗಾಮುಗ್ಗಾ ಬಯ್ದದ್ದು, ಹಿರೇಮಠರು ತುಂಬಾ ಡಿಪ್ರೆಸ್ ಆದದ್ದು, ಆ ದಿನಗಳಲ್ಲಿ ಅವರೊಟ್ಟಿಗೆ ರಹಮತ್ ತರೀಕೆರೆ ಹಾಗೂ ಪುರುಷೋತ್ತಮ ಬಿಳಿಮಲೆ ಅವರನ್ನು ಸಮಾಧಾನ ಮಾಡಿದ್ದು ಎಲ್ಲವೂ ಸಾಹಿತ್ಯಕ, ರಾಜಕೀಯ ರಂಗದ ಇತಿಹಾಸವೇ ಸರಿ. ಕನ್ನಡ ವಿ.ವಿ. ಹುದ್ದೆಗೆ ನಿರಂತರ ಪ್ರಯತ್ನ ಮಾಡಿದ ಅವರು, ಅಲ್ಲಿನ ಒಳ ರಾಜಕೀಯದಿಂದಾಗಿ ಅಲ್ಲಿ ಉಳಿಯಲಾಗಲಿಲ್ಲ. ಅಲ್ಲಿ ತನ್ನಂಥ ಸಮಾಜಮುಖಿ ವಿದ್ವಾಂಸನಿಗೆ ವಂಚನೆಯಾಗಿದ್ದು ಕೂಡ ಅವರಿಗೆ ಆಘಾತವಾಗಿತ್ತು.

ಸಂಪೂರ್ಣ ತಮ್ಮನ್ನು ತಾವು ಸಂಘಟನೆಗಳಿಗೆ, ಚಳುವಳಿಗೆ ತೊಡಗಿಸಿಕೊಂಡ ಹಿರೇಮಠ ಅವರು ತಮ್ಮ ಮಕ್ಕಳು ಹಾಗೂ ಮನೆ ಕಡೆ ಹೆಚ್ಚು ಆಸಕ್ತಿ ತೋರಿಸಲಿಲ್ಲವೇನೋ? ಸಂಘರ್ಷ, ಸಂಗ್ರಾಮಗಳ

ನಂತರ ಸಮಾಜ ವಿಮುಕ್ತಿ ಹೊಂದುತ್ತದೆ ಎಂದು ದೃಢವಾಗಿ ನಂಬಿದ್ದ ಅವರು ತಮ್ಮ ಇಬ್ಬರು ಮಕ್ಕಳಿಗೂ ಸಂಘರ್ಷ, ಸಂಗ್ರಾಮ ಎಂದೇ ಹೆಸರಿಟ್ಟಿದ್ದರು.

ಕನ್ನಡ ವಿಶ್ವವಿದ್ಯಾಲಯದಲ್ಲಿ ತಾತ್ಕಾಲಿಕವಾಗಿ ಡಿ.ಟಿ.ಪಿ. ಆಪರೇಟರ್ ಆಗಿ ಕೆಲಸ ಮಾಡುತ್ತಿದ್ದ ಒಬ್ಬ ಮಗ ಇದ್ದಕ್ಕಿದ್ದಂತೆ ಕಾಣೆಯಾದದ್ದು, ಅವರ ಬದುಕಿನ ಕೊನೆಗಳಿಗೆಯವರೆಗೂ ಪತ್ತೆಯಾಗದ್ದು, ಇನ್ನೊಬ್ಬ ಮಗ ಮಾನಸಿಕವಾಗಿ ತೀರ ಅನಾರೋಗ್ಯದಿಂದ ನರಳುತ್ತಿದ್ದು, ಇವೆಲ್ಲಾ ಹಿರೇಮಠರ ಕೊನೆಗಾಲದಲ್ಲಿ ತುಂಬ ಕಾಡಿದ್ದವು. ಹೋರಾಟಗಾರರಾಗಿದ್ದ ಹಿರೇಮಠರು ಮಾನಸಿಕವಾಗಿ, ದೈಹಿಕವಾಗಿ ತುಂಬ ಜರ್ಜರಿತರಾಗಿದ್ದರು. ಆದರೆ ಆ ದಿನಗಳಲ್ಲಿ ಅವರೊಡನೆ ಯಾರೂ ಇರಲಿಲ್ಲ.

ಸಭೆ, ಸಮಾರಂಭಗಳಲ್ಲಿ ಧರ್ಮವನ್ನು, ಸನಾತನ ವಾದಿ ಹಿಂದೂ ಸಂಸ್ಕೃತಿಯನ್ನು ಖಂಡಿಸುತ್ತಿದ್ದ ಹಿರೇಮಠರ ಭಾಷಣಗಳಿಗೆ, ಕೆಲವೆಡೆ ಗಲಾಟೆ, ಬಹಿಷ್ಕಾರ ಆದದ್ದುಂಟು.

ಸಮಾಜವಾದಿಗಳೊಡನೆಯೂ, ಹಲವೊಮ್ಮೆ ಘರ್ಷಣೆ ಗಿಳಿಯುತ್ತಿದ್ದ ಎಸ್.ಎಸ್. ಒಮ್ಮೆ ಬಳ್ಳಾರಿ ಬಂಡಾಯ ಸಾಹಿತ್ಯ ಸಮ್ಮೇಳನದಲ್ಲಿ 'ಸಮಾಜವಾದದ ಚರ್ಚೆಗೆ ಹೆಚ್ಚು ಪ್ರಾಶಸ್ತ್ಯ' ನೀಡಿದ್ದರಿಂದ ಬೆಂಬಲಿಗರೊಂದಿಗೆ ಹೊರಗಡೆ ಮುಷ್ಕರ ಆರಂಭಿಸಿದ್ದರು. ಅಧ್ಯಕ್ಷತೆ ವಹಿಸಿದ್ದ ಚಂಪಾ, ತಮ್ಮ ಎಂದಿನ ಧಾಟಿಯಲ್ಲಿ ''ಒಳಗಾಽ ಬಂದು ಮುಷ್ಕರ ಮಾಡ್ರಲಾಽ... ಹೊರಗಾಽ ಯಾಕ ಕುಂತೀರಿ'' ಎಂದು ವ್ಯಂಗ್ಯ ಮಾಡಿದಾಗ, ಎಲ್ಲರ ಹಠಕ್ಕೆ ಮಣಿದು ಕೊನೆಗೆ ಮಾರ್ಕ್ಸ್‌ವಾದದ ಬಗ್ಗೆ ಚರ್ಚೆಗೆ ಒಪ್ಪಿದಾಗ ಎಲ್ಲರೂ ಸಭೆ ಸೇರಿಕೊಂಡಿದ್ದೆವು. ಈ ಸಭೆಯಲ್ಲಿ ಚಂಪಾ ತಮ್ಮ ಎಂದಿನ ಟ್ರಂಪ್‌ಕಾರ್ಡ್, 'ಪಾರೋತಿ ನೀ ಮಾಡಿದ ಮೂರುತಿ' ಎಂಬ ಕಾವ್ಯ ಹಾಡಿದರೆ, ಅದೇ ಸಭೆಯಲ್ಲಿ ನಮ್ಮ ಜೊತೆಗಿದ್ದ ರವಿ ಬೆಳಗೆರೆ ಅದು ಚುನಾವಣೆ ಸಮಯವಾದ್ದರಿಂದ, ಆಗತಾನೆ ಬರೆದ ಹಾಡು,

ಎಲೆಕ್ಷನ್ ಎಲೆಕ್ಷನ್‌ಲೇ,
ಎಲೆಕ್ಷನ್ ಎಲೆಕ್ಷನ್‌ಲೇ
ಕೂಳಿಗಾಗಿ, ನೀರಿಗಾಗಿ, ಪರದಾಡುತಿರುವಾಗ
ಎಲೆಕ್ಷನ್, ಎಲೆಕ್ಷನ್‌ಲೇ...

ಎಂದು ಗದ್ದರ್ ಕಂಠದಲ್ಲಿ ಹಾಡಿದ್ದು, ಇಡೀ ಸಭೆ ಥ್ರಿಲ್ ಆದದ್ದು ನನಗೆ ಮರೆಯಲಾಗದ ನೆನಪು.

ಸಿ.ಪಿ.ಎಂ. ಪಾರ್ಟಿಯಿಂದ ತಾತ್ವಿಕ ಕಾರಣಗಳಿಂದ ಹೊರಹಾಕಿದರೂ, ಹಿರೇಮಠ ಮಾರ್ಕ್ಸ್‌ವಾದದಿಂದ ಹೊರ ಬರಲಿಲ್ಲ. ಹಾಗೆ ನೋಡಿದರೆ ಅವರು ಸಿ.ಪಿ.ಎಂ. ನಲ್ಲಿದ್ದಾಗ್ಯೂ, ಸಿ.ಪಿ.ಐ., ಡಿ.ಎಸ್.ಎಸ್. ಇನ್ನಿತರ ಸಂಘಟನೆಗಳ ಗೆಳೆಯರೊಂದಿಗೂ ಸಂಪರ್ಕದಲ್ಲಿದ್ದರು. ಒಮ್ಮೆ ಗಾರ್ಕಿಯ 'ತಾಯಿ' ಕಾದಂಬರಿ (ಅನುವಾದ ನಿರಂಜನ) ೫೦ ಪ್ರತಿ ಕೊಂಡಿದ್ದರು. ನಾನು ಆ ಪುಸ್ತಿಕೆಗಳನ್ನು ಅವರ ಮನೆಗೆ ಹೊರಬೇಕಾಯ್ತು. ಆ ದಿನದ ಬೆಲೆ : ಹತ್ತುರೂಪಾಯಿ ಮಾತ್ರ. ಅಷ್ಟೊಂದು ಪ್ರತಿ ಏಕೆ ಎಂದು ಕೇಳಿದರೆ, ವಿದ್ಯಾರ್ಥಿಗಳಿಗೆ ಹಂಚಲು ಎಂದು ಹೇಳಿದ್ದರು. ಇದೇ ಹಿರೇಮಠರ ವಿಶಿಷ್ಟತೆ ಹಾಗೂ ವಿಭಿನ್ನತೆ. ಆ ದಿನಗಳಲ್ಲಿ ಅವರಿಗೊಂದಿಷ್ಟು ಅನಾಥ ಪ್ರಜ್ಞೆ ಕಾಡುತ್ತಿತ್ತು. ಆದರೂ, ಅವರು ಆ ದಿನಗಳಲ್ಲಿ ಸಮುದಾಯ, ಜನಪದ, ಜನಪರ ಸಂಘಟನೆಗಳೊಂದಿಗೆ ಗುರುತಿಸಿಕೊಂಡು ಕ್ರಿಯಾಶೀಲರಾದರು.

ಕೆಲವೊಮ್ಮೆ ನನಗೆ ಹಿರೇಮಠರು ಲಂಕೇಶ್ ನಿರ್ದೇಶಿಸಿದ ಸಿನಿಮಾ, 'ಅನುರೂಪ'ದ ನಾಯಕನಂತೆ ಕಾಣುತ್ತಾರೆ.

ತಾವೇ ಹುಟ್ಟುಹಾಕಿದ, ಸಂಘಟಿಸಿದ, ಆತ್ಮವಿಶ್ವಾಸ ತುಂಬಿದ ಹಲವು ಹುಡುಗರು ಅವರಿಗೇ ತಿರುಗಿಬಿದ್ದದ್ದು, ಹಿಂಸೆಕೊಟ್ಟಿದ್ದು, ಒಂದಿಷ್ಟು ಮೋಸಮಾಡಿದ್ದು, ಹಿರೇಮಠರೂ ಯಾರ ಮುಂದೂ ಹೇಳದೆ ಮುಸಿಮುಸಿ ಅತ್ತದ್ದೂ ಎಲ್ಲವೂ... ಇತಿಹಾಸದ ಬುಟ್ಟಿ ಸೇರಿವೆ.

ಒಮ್ಮೆ ಅವರು ನಿಮ್ಹಾನ್ಸ್‌ನಿಂದ ಮನೆಗೆ ಬಂದಾಗ ನಾನು ಅವರ ಮನೆಗೆ ಹೋಗಿದ್ದೆ. ಹತ್ತಾರು ಪುಸ್ತಕ ಹರವಿಕೊಂಡು ''ದಲಿತ ಸಂಸ್ಕೃತಿ ಬಗ್ಗೆ ನೋಟ್ಸ್ ಮಾಡುತ್ತಿದ್ದೇನೆ'' ಎಂದಾಗ ಅವಾಕ್ಕಾದೆ. ಒಂದಿಷ್ಟು ದಿನ ಸಾಹಿತ್ಯ ದೂರವಿಡಿ, ಆರಾಮಾಗಿರಿ, ಸಂಗೀತ ಕೇಳಿ, ಖುಷಿಯಾಗಿರಿ ಎಂದು ಹೇಳಲು ಯೋಚಿಸಿದೆ. ಆದರೆ ಈ ಪುಸ್ತಕಪ್ರೇಮಿಗೆ ಪುಸ್ತಕಬಿಟ್ಟು ಬೇರೆ ಹವ್ಯಾಸವಿಲ್ಲವಾದ್ದರಿಂದ ಅದರೊಟ್ಟಿಗೆ ಇರಲಿ ಎಂದು ಯೋಚಿಸಿ ಮೂಕನಾದೆ.

ನನ್ನ ಮನದಾಳದಲ್ಲಿ ಇಂದು ಒಂದು ಸಂಶಯ ಕಾಡುತ್ತಿದೆ, ಇವರು ಸಿ.ಪಿ.ಎಂ. ಪಕ್ಷದವರೋ, ಸಿ.ಪಿ.ಐ. ಪಕ್ಷದವರೋ, ಡಿ.ಎಸ್.ಎಸ್., ಇನ್ನೂ ಹಲವು ಸಲ ಇವರು ಮಹಿಳಾ ಸಂಘಟನೆಗೆ ಸೇರಿದವರೋ. ಏಕೆಂದರೆ ಎಲ್ಲಾ ಸಂಘಟನೆಗಳಿಗೂ ಅವರು ಸ್ಪಂದಿಸಿದವರು. ಎಲ್ಲಾ ಸಂಘಟನೆಗಳ ಗೆಳೆಯರೊಂದಿಗೂ ಮುಕ್ತ ಸಂಬಂಧ ಹೊಂದಿದ್ದರು. ಹಾಗಾಗಿಯೇ ನಾವು ಇವರನ್ನು ಎಲ್ಲ ಸಂಘಟನೆಗಳ ಬ್ಯಾನರ್ ಹೊರಗಿರಿಸಿ ''ಮಾನವತಾವಾದಿ'' ಎಂದು ಕರೆಯುತ್ತೇನೆ.

ಎಸ್. ಎಸ್. ಹಿರೇಮಠ ಇಂದಿಲ್ಲ, ಆದರೆ ಅವರ ಗರಡಿಯಲ್ಲಿ ಬೆಳೆದ ಗುರುಶಾಂತ್ ಸಿಪಿಎಂ ರಾಜ್ಯ ಸಮಿತಿ ಸದಸ್ಯ, ಪ್ರಸನ್ನಕುಮಾರ್, ಫಣಿರಾಜ್, ಗುಡಿಹಳ್ಳಿ ನಾಗರಾಜ್ ಇನ್ನೂ ಹಲವು ಚಿಂತಕರ ವಿಚಾರಧಾರೆಗಳಲ್ಲಿ ಹಲವು ಸಭೆಗಳಲ್ಲಿ ಅವರು ಕಲಿಸಿಕೊಟ್ಟ ಕ್ರಾಂತಿಗೀತೆಗಳಲ್ಲಿ ಜೀವಂತವಾಗಿದ್ದಾರೆ. ಸುಮಾರು ೩೦,೦೦೦ ಪುಸ್ತಕಗಳಿರುವ ಹಿರೇಮಠರ ವೈಯಕ್ತಿಕ ಗ್ರಂಥಾಲಯ ತಮ್ಮ ಹುಟ್ಟೂರು ಬೈಲಹೊಂಗಲದ ವಿದ್ಯಾರ್ಥಿಗಳಿಗೆ ಉತ್ತಮ ಗ್ರಂಥಾಲಯವಾಗಬಹುದೇನೋ. ಬಿಎಮ್‌ಎಸ್ ಡಾಕ್ಟರ್ ಆಗಿರುವ ಅವರ ಮಗಳು ಡಾ|| ಕವಿತಾ ಈ ದಿಕ್ಕಿನಲ್ಲಿ ಯೋಚಿಸಬೇಕಾಗಿದೆ.

ಅವರ ಅಪ್ರಕಟಿತ ಲೇಖನ, ಕಿರುಹೊತ್ತಿಗೆ ಬಗ್ಗೆ ಸಾಹಿತ್ಯಾಸಕ್ತರು ಗಮನ ಹರಿಸಿದಲ್ಲಿ ಕನ್ನಡ ಸಾಹಿತ್ಯಲೋಕಕ್ಕೆ ಒಂದು ವಿಶಿಷ್ಟ ಕೊಡುಗೆಯಾದೀತು.

ಪ್ರಿಯ ಎಸ್.ಎಸ್. ನೀವು ಸತ್ತಿಲ್ಲ
ಮುಂದಿನ ಪೀಳಿಗೆ ಓದಬಹುದಾದ ಹೋರಾಟದ
ಇತಿಹಾಸದಲ್ಲಿ, ಎಡ ಮತ್ತು ಪ್ರಜಾಪ್ರಭುತ್ವ
ಚಳುವಳಿಗಳಲ್ಲಿ, ಅವರು ಹಾಡುವ ನೀವೇ
ಕಲಿಸಿಕೊಟ್ಟ ಕ್ರಾಂತಿಗೀತೆಗಳಲ್ಲಿ
ನೀವು ಜೀವಂತವಾಗಿದ್ದೀರಿ !
ಇದೋ
ನಿಮಗೊಂದು
ಹೃದಯಪೂರ್ವಕ ನಮಸ್ಕಾರ.


**ಡಿ. ರವಿವರ್ಮ**
ಭಾರತೀಯ ಜೀವ ವಿಮಾ ನಿಗಮ, ಶರಣ್ ಪ್ಲಾಜಾ
ಡ್ಯಾಂ ರಸ್ತೆ, ಹೊಸಪೇಟೆ - ೫೮೩ ೨೦೧


## ಅಳಿಲು ಸೇವೆ

ರಾಮಾಯಣ ಓದದವರು
ಏನು ಬಲ್ಲರು ?
ಅಳಿಲು ಸೇವೆಯ ಮಹತ್ವ
ಮತ್ತು ಹನುಮ
ಬೆಟ್ಟ ಹೊತ್ತ ಕಷ್ಟ!


**ಡಿ. ವಿ. ಬಡಿಗೇರ**
ತೆಗ್ಗಿನ ಪೇಟೆ ಓಣಿ, ಗದಗ - ಬೆಟಗೇರಿ - ೫೮೨ ೧೦೨

# ಸಮಾಜವಾದಿ ಕ್ರಾಂತಿ

ಇಪ್ಪತ್ತನೆಯ ಶತಮಾನವು ದುಡಿಯುವ ವರ್ಗದ ಹೋರಾಟದ ಅಲೆಗಳಿಂದ ಕೂಡಿದ ಶತಮಾನವಾಗಿತ್ತು. ಬಂಡವಾಳಶಾಹಿ ಅರ್ಥ ವ್ಯವಸ್ಥೆಯಲ್ಲಿ ರೂಪಗೊಂಡಿರುವ ಎರಡು ವರ್ಗಗಳ ನಡುವಿನ ಸಂಘರ್ಷ ಅಂತಿಮವಾಗಿ ಅಂದರೆ, ಬಂಡವಾಳಶಾಹಿ ವರ್ಗ ಮತ್ತು ದುಡಿಯುವ ವರ್ಗ – ದುಡಿಯುವ ವರ್ಗದ ಪರವಾಗಿರುತ್ತದೆ. ದುಡಿಯುವ ವರ್ಗವು ಎಲ್ಲ ಶೋಷಿತ ಸಮುದಾಯದ ಅಧಿನಾಯಕನಾಗಿ ಅಧಿಕಾರ ಚಲಾಯಿಸುತ್ತದೆ. ತತ್‌ಪರಿಣಾಮ ವರ್ಗರಹಿತ ಸಮಾಜಕ್ಕೆ ನಾಂದಿ ಹಾಡುತ್ತದೆ ಎಂದು ಬಗೆಯಲಾಗಿತ್ತು. ಇಪ್ಪತ್ತನೆಯ ಶತಮಾನದ ಅಂತ್ಯದ ದಶಕಗಳಲ್ಲಿ ಸೋವಿಯತ್ ಒಕ್ಕೂಟದ ಪತನದ ನಂತರ ದುಡಿಯುವ ವರ್ಗದ ಆಧಿಪತ್ಯವಿರುವ ಬಹುತೇಕ ರಾಷ್ಟ್ರಗಳೆಲ್ಲ ಭೂಗೋಲದ ನಕ್ಷೆಯಿಂದ ಒಂದೊಂದಾಗಿ ಅಳಿಸಿಹೋದವು. ಬಂಡವಾಳಶಾಹಿ ಬೇಗುದಿಗೆ ಸಿಲುಕಿ ತತ್ತರಿಸಿದ್ದ ಮನುಕುಲಕ್ಕೆ ಸಮಾಜವಾದ ಒಂದು ಆಶಾದೀಪವಾಗಿತ್ತು, ಆದರೆ ಸಮಾಜವಾದಿ ರಾಷ್ಟ್ರಗಳ ಪತನದಿಂದಾಗಿ ಇಡೀ ಮನುಕುಲ ವಿಷಣ್ಣವಾಯಿತು. ಬಂಡವಾಳಶಾಹಿಯ ತಾರತಮ್ಯದ ಬದುಕಿಗೆ ಹೊರತಾಗಿ ಬೇರೆ ತೆರನಾದ ಬದುಕಿಲ್ಲ ಎಂಬಂತೆ ಚಿತ್ರಿಸಲಾಯಿತು.

ಮಾನವ ಸಮಾಜ ಪರಿವರ್ತನೆಯಲ್ಲಿ ಅಗಾಧವಾದ ಪರಿಣಾಮ ಬೀರಿದ ಮಹಾಚಿಂತಕ ಕಾರ್ಲ್ ಮಾರ್ಕ್ಸ್‌ನಲ್ಲಿ ಮನುಕುಲದ ಭವಿಷ್ಯ ಕುರಿತು ಯಾವ ತೆರನಾದ ಚಿಂತನೆ ಇದೆ ಎಂಬುದು ಪ್ರಸ್ತುತವಾಗುತ್ತದೆ. ಮಾರ್ಕ್ಸ್‌ನ ಅನುಯಾಯಿಗಳೆಂದು ಹೇಳಿಕೊಳ್ಳುವವರು ಮಾರ್ಕ್ಸ್‌ನನ್ನು ಸಮಗ್ರವಾಗಿ ಅರ್ಥೈಸುವಲ್ಲಿ ವಿಫಲವಾಗಿರುವುದೆ, ಇಂದಿನ ಬಂಡವಾಳಶಾಹಿ ಅಟ್ಟಹಾಸಕ್ಕೆ ಉತ್ತರ ಸಿಗದಂತಾಗಿದೆ.

ಸದಾ ಬದಲಾವಣೆಯ ಆರಾಧಕರಾಗಿದ್ದ ಮಾರ್ಕ್ಸ್ ಮತ್ತವರ ಅದ್ವಿತೀಯ ಮಿತ್ರ ಮತ್ತು ಸಹಚಿಂತಕ ಫ್ರೆಡರಿಕ್ ಎಂಗೆಲ್ಸ್ ಮಾನವ ಸಮಾಜದ ಬೆಳವಣಿಗೆಯ ಮಜಲುಗಳನ್ನು ಗುರುತಿಸಿ ಅವುಗಳಿಗೆ ಅಲ್ಪವಿರಾಮ ಹಾಕುತ್ತ ಹೋದರೆ ವಿನಾ ಎಲ್ಲಿಯೂ ಕೂಡ ಅವರು ಸಮಾಜ ಬೆಳವಣಿಗೆಗೆ ಪೂರ್ಣ ವಿರಾಮ ನೀಡಲಿಲ್ಲ. ಒಂದು ವ್ಯವಸ್ಥೆ ಅಸ್ತಿತ್ವದಲ್ಲಿರುವಾಗಲೇ ಅದರ ಬೆಳವಣಿಗೆಯ ಅಂತರ ದ್ವಂದ್ವದ ನಿಯಮದಿಂದಾಗಿ ಮತ್ತೊಂದು ವ್ಯವಸ್ಥೆ ರೂಪುಗೊಳ್ಳುತ್ತ ಹೋಗುತ್ತದೆ ಎಂದು ಶಾಸ್ತ್ರೀಯವಾಗಿ ಪ್ರತಿಪಾದಿಸಿದವರು ಮಾರ್ಕ್ಸ್.

ಮಾನವ ಸಮಾಜ ಬೆಳವಣಿಗೆಯ ಒಂದು ಕಾಲಘಟ್ಟದಲ್ಲಿ ಗುಲಾಮಗಿರಿ ಸಮಾಜ ಸಂಪತ್ತಿನ ನಿರ್ಮಾಣದಲ್ಲಿ ತಳಪಾಯವಾಗಿತ್ತು. ಗುಲಾಮಗಿರಿ ವ್ಯವಸ್ಥೆ ಇರುವಾಗಲೇ ರೂಪುಗೊಂಡಿದ್ದ ಜೀತದಾಳು ವ್ಯವಸ್ಥೆ ಮುಂದಿನ ಕಾಲಘಟ್ಟದಲ್ಲಿ ವಿಶಾಲ ರೈತಾಪಿ ವರ್ಗ ರೂಪುಗೊಳ್ಳಲು ನೆರವಾಯಿತು. ರೈತಾಪಿ ವರ್ಗವನ್ನು ಕೇಂದ್ರವನ್ನಾಗಿಟ್ಟುಕೊಂಡು ಬೆಳೆದು ಬಂದ ಗ್ರಾಮೀಣ ಅರ್ಥವ್ಯವಸ್ಥೆ ಇರುವಾಗಲೇ ಸಮಾಜ ಸಂಪತ್ತಿನ ಯಜಮಾನಿಕೆ ನಿಧಾನವಾಗಿ ವ್ಯಾಪಾರಿ ವರ್ಗಕ್ಕೆ ಹಸ್ತಾಂತರವಾಯಿತು. ವ್ಯಾಪಾರಿ ವರ್ಗದ ಬಂಡವಾಳದಿಂದ ರೂಪಗೊಂಡ ಬಂಡವಾಳಶಾಹಿ ಉತ್ಪಾದನಾ ವ್ಯವಸ್ಥೆಯಿಂದಾಗಿ ಇಡೀ ಸಮಾಜದ ಸಂಪತ್ತು ಬಂಡವಾಳಶಾಹಿ ವರ್ಗದಲ್ಲಿ ಕೇಂದ್ರೀಕೃತವಾಗುತ್ತ ಸಾಗಿತು. ಈ ಕ್ರಿಯೆಯಲ್ಲಿ ಬಂಡವಾಳಶಾಹಿ ವರ್ಗಕ್ಕೆ ಎದುರಾಗಿ ದುಡಿಯುವ ವರ್ಗ ಸನ್ನದ್ಧವಾಗುತ್ತದೆ ಎಂದು ಮಾರ್ಕ್ಸ್ ವಿಶ್ಲೇಷಿಸುತ್ತಾರೆ. ಇದೆಲ್ಲ ನಿಜವೇ ಆಗಿದೆ. ಮಾರ್ಕ್ಸ್ ಅಭಿಪ್ರಾಯಪಟ್ಟಂತೆ ಬಂಡವಾಳಶಾಹಿ ವರ್ಗಕ್ಕೆ ಎದುರಾಗಿ ದುಡಿಯುವ ವರ್ಗ ಸೆಟೆದು ನಿಂತದ್ದನ್ನು ೨೦ನೇ ಶತಮಾನದಾದ್ಯಂತ ನೋಡುತ್ತೇವೆ. ಆದರೆ ಮಾರ್ಕ್ಸ್ ಊಹಿಸಿದಂತೆ ದುಡಿಯುವ ವರ್ಗ ತನ್ನ ಸಂಘರ್ಷವನ್ನು ಇಡೀ ಶೋಷಿತ ಸಮುದಾಯದ ಸಂಘರ್ಷವನ್ನಾಗಿ ಮಾಡದೆ ತನ್ನ ವರ್ಗ ಹಿತಕ್ಕೆ ಸೀಮಿತಗೊಳಿಸಿತು. ಇದರ ಪರಿಣಾಮ ದುಡಿಯುವ ವರ್ಗದ ಸಂಘರ್ಷ ಎಲ್ಲ ಶೋಷಿತ ವರ್ಗದ ಜನರ ಸಂಘರ್ಷವಾಗಿ ಸಮಾಜ ಪರಿವರ್ತನೆಯ ಸಂಘರ್ಷ ಅರ್ಥಾತ್ ಸಮಾಜವಾದಿ ಸಮಾಜ ರಚನೆಯ ಸಂಘರ್ಷವಾಗಿ ರೂಪುಗೊಳ್ಳಲಿಲ್ಲ. ಮಾರ್ಕ್ಸ್‌ರವರ ಲೆಕ್ಕಾಚಾರ ತಪ್ಪಲು ಕಾರಣ ಹುಡುಕಲು ನಾವು ಮಾರ್ಕ್ಸ್‌ರನ್ನೇ ಮೊರೆಹೋಗಬೇಕಾಗುತ್ತದೆ.

ಮಾರ್ಕ್ಸ್–ಏಂಗೆಲ್ಸ್ ತಮ್ಮ ಜೀವಿತದ ಕಾಲಾವಧಿಯ ವಿದ್ಯಮಾನಗಳ ಆಧಾರದ ಮೇಲೆ ಅವರು ದುಡಿಯುವ ವರ್ಗ ಕುರಿತು ಮಾತನಾಡಿದರು. ಅದು ಸಮಾಜ ಪರಿವರ್ತನೆಯ ನಾಯಕತ್ವ ವಹಿಸುತ್ತದೆ ಎಂದೂ ಅದಕ್ಕಾಗಿ ಅದು ತನ್ನ ನೇತೃತ್ವದಡಿ ಸರ್ವಾಧಿಕಾರ ಚಲಾಯಿಸುತ್ತ ಶೋಷಕ ವರ್ಗಗಳನ್ನು ಮಟ್ಟ ಹಾಕುತ್ತದೆ ಎಂದೂ ಅವರು ನಿರೂಪಿಸಿದರು. ಅವರ ಈ ನಿರೂಪಣೆ ೧೯ನೇ ಶತಮಾನದಲ್ಲಿ ಹೊರಹೊಮ್ಮಿದ್ದು. ಒಂದು ಉನ್ನತ ಮಟ್ಟದ ಪರಿವರ್ತನೆಗೆ ಕಾಲ ಪಕ್ವವಾದಾಗ ಅದನ್ನು ಪೂರೈಸಬೇಕಾದ ಸಮುದಾಯದ ಶಕ್ತಿಯ ದೌರ್ಬಲ್ಯದಿಂದಾಗಿ ಅದು ಪೂರೈಸದಿದ್ದಲ್ಲಿ ಬದಲಾವಣೆಯನ್ನು ನಿರೀಕ್ಷಿಸಿದವರನ್ನು ದೂರಲಾಗದು. ಪರಿವರ್ತನೆ ಎಂಬುದು ವಸ್ತುಸ್ಥಿತಿಯ ಮೇಲೆ ಅರ್ಥಾತ್ ಸನ್ನಿವೇಶದ ಮೇಲೆ ಪರಿವರ್ತನೆ ಮಾಡಬೇಕಾದ ಸಮುದಾಯ ಶಕ್ತಿ ಎಷ್ಟರ ಮಟ್ಟಿಗೆ ಪ್ರತಿಕ್ರಿಯಿಸಬಲ್ಲದೊ ಅಷ್ಟರ ಮಟ್ಟಿಗೆ ಬದಲಾವಣೆ ಅವಲಂಬಿತವಾಗಿರುತ್ತದೆ. ಸಮಾಜವಾದಿ ಕ್ರಾಂತಿಯ ಮುಂದಾಳತ್ವವಹಿಸುವ ವರ್ಗ ದುಡಿಯುವ ವರ್ಗ ಎಂದು ಬಗೆಯಲಾಯಿತು. ಆದರೆ ಐತಿಹಾಸಿಕವಾಗಿ ಈ ದುಡಿಯುವ ವರ್ಗ ಸಮಾಜ ಪರಿವರ್ತನೆಗೆ ಸಿದ್ಧವಾಗಿರಲಿಲ್ಲ. ಬದಲಾಗಿ ಬಂಡವಾಳಶಾಹಿ ಆಸ್ತಿ ವ್ಯವಸ್ಥೆಯಲ್ಲಿಯೇ ತನ್ನದಷ್ಟು ಪಾಲನ್ನು ಪಡೆಯಲು ದುಡಿಯುವ ವರ್ಗ ನಿರ್ಣಾಯಕ ದಾಳಿ ನಡೆಸಿತು. ಇದರ ಪರಿಣಾಮವಾಗಿ ಇಂದು ಜಗತ್ತಿನಾದ್ಯಂತ ಆಸ್ತಿವಂತ ದುಡಿಯುವ ವರ್ಗ ಒಂದು ನಿರ್ಮಾಣವಾಗಿದೆ. ಮಾರ್ಕ್ಸ್‌ರವರ ಕಾಲದಲ್ಲಿ ಆಸ್ತಿವಂತ ದುಡಿಯುವ ವರ್ಗ ನಿರ್ಮಾಣವಾಗಿರಲಿಲ್ಲ. ಆದರೂ ಮಾರ್ಕ್ಸ್‌ರವರು ಇಂಗ್ಲೆಂಡ್ ಕಾರ್ಮಿಕ ವರ್ಗ ಕುರಿತು ಮಾತನಾಡುವಾಗ ಸಮ್ರಾಜ್ಯಶಾಹಿ ಇಂಗ್ಲೆಂಡ್ ವಸಾಹತುಗಳಿಂದ ಸಂಪತ್ತನ್ನು ದೋಚುತ್ತದೆ. ಅದರ ಒಂದು ಭಾಗವನ್ನು ಇಂಗ್ಲೆಂಡ್ ಕಾರ್ಮಿಕ ವರ್ಗಕ್ಕೆ ನೀಡುತ್ತದೆ ಎಂದು ವ್ಯಾಖ್ಯಾನಿಸುವ ಮೂಲಕ ಆಸ್ತಿವಂತ ಕಾರ್ಮಿಕ ವರ್ಗದ ಸಾಧ್ಯತೆಯನ್ನು ತಳ್ಳಿಹಾಕಿರಲಿಲ್ಲ ಎಂಬುದು ಗಮನಾರ್ಹ.

೧೯೧೭ರಲ್ಲಿ ರಷ್ಯಾದಲ್ಲಿ ಉಂಟಾದ ಕ್ರಾಂತಿ ದುಡಿಯುವ ವರ್ಗದ ನೇತೃತ್ವದಲ್ಲಿ ನಡೆಯಿತು. ಲೆನಿನ್ ನಾಯಕತ್ವ ಪ್ರಾಮಾಣಿಕವಾಗಿಯೇ ಸಮಾಜವಾದವನ್ನು ಕಟ್ಟಲು ಹೊರಟಿತು. ಆದರೆ ಆ ಕಾಲದ ರಷ್ಯಾದ ಆರ್ಥಿಕ ಬೆಳವಣಿಗೆಯ ಹಂತ ಸಮಾಜವಾದಿ ಕ್ರಾಂತಿಗೆ ಪಕ್ವವಾಗಿರಲಿಲ್ಲ. ಪರಿಣಾಮ ಸ್ವರೂಪ ಸಮಾಜವಾದಿ ಬಾವುಟ ಕೆಳಗೆ ರಷ್ಯಾದಲ್ಲಿ ಬಂಡವಾಳವಾದ ಬೆಳೆಯಿತು ಎಂಬುದನ್ನು ಬೋರಿಸ್ ಎಲ್ಸಿನ್, ವ್ಲಾದಿಮಿರ್ ಪುತಿನ್ ಜಗತ್ತಿಗೆ ತೋರಿಸಿಕೊಟ್ಟರು. ಸಮಾಜ ಪರಿವರ್ತನೆ ವಿಷಯದಲ್ಲಿ ಮಾರ್ಕ್ಸ್‌ರವರು ಚಾರಿತ್ರಿಕವಾಗಿ ಯಾವ ವರ್ಗ ಮುಂದಾಳತ್ವ ವಹಿಸಬಲ್ಲದೊ ಆ ವರ್ಗಕ್ಕೆ ಶ್ರಮಿಕ ವರ್ಗದ ಬೆಂಬಲವಿರಬೇಕೆಂದು ಸಾರಿದರು.

೧೯ನೇ ಶತಮಾನದ ಸಂದರ್ಭದಲ್ಲಿ ಜರ್ಮನಿಯ ವಿಷಯವಾಗಿ ಮಾತನಾಡುವಾಗ ಮಾರ್ಕ್ಸ್‌ರವರು ಹೀಗೆ ಹೇಳುತ್ತಾರೆ: ''ಬಂಡವಾಳಶಾಹಿ ನಿರಂಕುಶ ರಾಜಪ್ರಭುತ್ವ, ಸಾಮಂತಶಾಹಿ, ಜಮೀನುದಾರಿ ಹಾಗೂ ಪುಟ್ಟ ಬಂಡವಾಳಶಾಹಿಗಳ ವಿರುದ್ಧ ಕ್ರಾಂತಿಕಾರಿ ರೀತಿಯಲ್ಲಿ ಯಾವಾಗ ವರ್ತಿಸುವದೊ ಆವಾಗಲೆಲ್ಲ ಅದರೊಂದಿಗೆ (ಬಂಡವಾಳಶಾಹಿಯೊಂದಿಗೆ) ಕೂಡಿಕೊಂಡು ಶ್ರಮಜೀವಿಗಳು ಹೋರಾಡುತ್ತಾರೆ.'' (ಕಮ್ಯುನಿಸ್ಟ್ ಮೆನಿಫೆಸ್ಟೊದ ಪುಟ ೪೪ರಲ್ಲಿ)

ಸಮಾಜ ಪರಿವರ್ತನೆ ಎಂಬುದು ಅಸ್ತಿತ್ವದಲ್ಲಿರುವ ಒಟ್ಟು ಸಾಮಾಜಿಕ ಉತ್ಪಾದನಾ ಸಾಮರ್ಥ್ಯದ ಮೇಲೆ ಅವಲಂಬಿತವಾಗಿರುತ್ತದೆ ಎಂಬುದೇ ಮಾರ್ಕ್ಸ್‌ವಾದದ ಮೂಲತತ್ವವಾಗಿರುತ್ತದೆ. ಶ್ರಮಜೀವಿ ವರ್ಗವು ರಾಜ್ಯಾಧಿಕಾರಕ್ಕೆ ಬಂದಲ್ಲಿ ರಾಜ್ಯಾಧಿಕಾರದ ನಿರಂಕುಶ ಪ್ರಭುತ್ವವನ್ನು ಚಲಾಯಿಸಿ ಬಂಡವಾಳಶಾಹಿಯನ್ನು ನಿಯಂತ್ರಿಸಿ ಅಥವಾ ಸದೆಬಡೆದು ಬಂಡವಾಳಶಾಹಿ ಪ್ರಕ್ರಿಯೆಯನ್ನು ಹೊರತುಪಡಿಸಿ ಅಂದರೆ ಬಂಡವಾಳಶಾಹಿ ಮಾರ್ಗ ತ್ಯಜಿಸಿ ಉಪಮಾರ್ಗ ಹಿಡಿದು ಸಮಾಜವಾದವನ್ನು ಕಟ್ಟುತ್ತೇವೆ ಎಂದು ರಶಿಯನ್ ಕಮ್ಯುನಿಸ್ಟರು ಭಾವಿಸಿದ್ದರು. ಇದರಿಂದಾಗಿ ರಷ್ಯಾ ಯಾವಾಗಲೂ ಉದಯೋನ್ಮುಖಿ ವಸಾಹತು ರಾಷ್ಟ್ರಗಳಿಗೆ ಬಂಡವಾಳಶಾಹೀಯೇತರ ಮಾರ್ಗ ಅನುಸರಿಸುವಂತೆ ತಮ್ಮ ವಿದೇಶ ನೀತಿಯನ್ನು ನಿರೂಪಿಸಿದ್ದರು. ೧೯೧೭ರ ಅಕ್ಟೋಬರ ಕ್ರಾಂತಿಯ ಪ್ರಯೋಗ ಏಳು ದಶಕಗಳವರೆಗೆ ನಡೆದರೂ ಕೊನೆಯಲ್ಲಿ ರಷ್ಯಾ ಬಂಡವಾಳಶಾಹಿಗೆ ಶರಣಾಗಬೇಕಾಯಿತು. ದೀರ್ಘ ಅವಧಿಯ ಶ್ರಮಿಕ ವರ್ಗದ ಅಧಿಕಾರ ಅಲ್ಲಿ ಉದ್ದೇಶಿತ ಸಮಾಜವಾದಿ ಕ್ರಾಂತಿಯನ್ನು ತರುವಲ್ಲಿ ವಿಫಲವಾಯಿತು. ಕಮ್ಯುನಿಸ್ಟ್ ಚೀನಾ ಈಗ ಶ್ರಮಿಕ ವರ್ಗದ ಸರ್ವಾಧಿಕಾರಿ ಆಡಳಿತದಲ್ಲಿದ್ದರೂ ಅದು ಚರಿತ್ರೆಯಿಂದ ಪಾಠ ಕಲಿತಿದೆ. ''ಒಂದು ರಾಷ್ಟ್ರ ಎರಡು ವ್ಯವಸ್ಥೆ'' ಇದು ಈಗಿನ ಚೀನಾ ಕಮ್ಯುನಿಸ್ಟ್ ಪಕ್ಷದ ಧೋರಣೆಯಾಗಿದೆ. ಅಂದರೆ ಕೆಲವು ವಲಯದಲ್ಲಿ ಬಂಡವಾಳಶಾಹಿ ಅಭಿವೃದ್ಧಿಗೆ ಅವಕಾಶ ಕಲ್ಪಿಸಲಾಗಿದೆ. ಇದರಿಂದಾಗಿ ಚೀನಾದಲ್ಲಿ ಈಗ ಕಮ್ಯುನಿಸ್ಟ್ ಪಕ್ಷದ ಬಾವುಟದ ಕೆಳಗೆ ಬಂಡವಾಳವಾದ ಬೆಳೆಯುತ್ತಿದೆ. ಈ ಬೆಳವಣಿಗೆ ಮಾರ್ಕ್ಸ್‌ರವರು ಕಂಡುಕೊಂಡ ಸಮಾಜ ಬೆಳವಣಿಗೆಯ ಚಾರಿತ್ರಿಕ ನಿಯಮದಡಿಯೇ ಇರುತ್ತದೆ. ಶಾಸ್ತ್ರಾಂಧರು ಇದನ್ನು ಒಪ್ಪುವುದಿಲ್ಲ. ಅವರು ಬಂಡವಾಳಶಾಹಿ ಪಥವನ್ನು ತುಳಿಯದೆ ಸಮಾಜವಾದಕ್ಕೆ ಮಹಾನೆಗೆತ ಮಾಡಬಹುದೆಂದು ವಾದಿಸುತ್ತಾರೆ. ಆದರೆ ಇತಿಹಾಸ ಇದನ್ನು ಸುಳ್ಳಾಗಿಸಿದೆ. ಶ್ರಮಿಕ ವರ್ಗವು ಈಗ ಒಂದು ಆಸ್ತಿವಂತ ವರ್ಗವಾಗಿ ರೂಪಗೊಳ್ಳಲು ಯತ್ನಿಸುತ್ತಿದೆ ವಿನಾ ಸಮಗ್ರ ಸಾಮಾಜಿಕ ಕ್ರಾಂತಿಗಾಗಿ ಯತ್ನಿಸುತ್ತಿಲ್ಲ. ಇದಕ್ಕೆ ಶ್ರಮಿಕ ವರ್ಗವನ್ನು ದೂರಲಾಗದು. ಇತಿಹಾಸ ಬೆಳವಣಿಗೆಯ ಇಂದಿನ ಕಾಲಘಟ್ಟದಲ್ಲಿ ಶ್ರಮಿಕ ವರ್ಗ ವೇತನಕ್ಕಾಗಿ ಬಂಡವಾಳಶಾಹಿ ಆಸ್ತಿಯಲ್ಲಿನ ಸ್ವಲ್ಪ ಪಾಲಿಗಾಗಿ ಮಾತ್ರ ಹೋರಾಟ ನಡೆಸಬಲ್ಲದು. ಸಮಾಜವಾದಿ ಕ್ರಾಂತಿಯನ್ನು ಉಂಟುಮಾಡುವ ಅಥವಾ ಇಂಥ ಸಾಮಾಜಿಕ ಕ್ರಾಂತಿಯ ಮುಂದಾಳತ್ವ ವಹಿಸುವ ಪ್ರಮೇಯ ಈಗ ಕಾರ್ಮಿಕ ವರ್ಗದ ಮುಂದಿರುವುದಿಲ್ಲ. ಈ ವಾಸ್ತವ ಸತ್ಯವನ್ನು ಅರಿತು ಮಾರ್ಕ್ಸ್‌ವಾದಿಗಳು ಸಮಾಜ ಪರಿವರ್ತನೆಗೆ ನಿಜವಾದ ಶಾಸ್ತ್ರೀಯ ಪರಿಕಲ್ಪನೆ ಕಲ್ಪಿಸಬೇಕಾಗಿದೆ. ಅಲ್ಲಿಯವರೆಗೆ ಮಾರ್ಕ್ಸ್‌ವಾದಿಗಳು ತಮ್ಮ ಪ್ರಸ್ತುತತೆಯನ್ನು ಒರೆಗಲ್ಲಿಗೆ ಹಚ್ಚಬೇಕಾಗುತ್ತದೆ.

*(ಈ ಬಗ್ಗೆ ಚರ್ಚೆಗೆ ಸ್ವಾಗತವಿದೆ. ಲೇಖನಗಳು ೨೦೦ ಪದಗಳ ಮಿತಿಯಲ್ಲಿರಬೇಕು – ಸಂ)*

**ಆರ್. ಡಿ. ಹಳಿಂಗಳಿ**
ವಕೀಲರು, ಜಮಖಂಡಿ - ೫೮೭ ೩೦೧

# ಪ್ರಸ್ತುತ ಸಂದರ್ಭದಲ್ಲಿ ಧರ್ಮ ದೇವರು

ಪ್ರಸ್ತುತ ಸಂದರ್ಭದಲ್ಲಿ ಧರ್ಮ-ದೇವರುಗಳನ್ನು ಕುರಿತಂತೆ ನಕಾರಾತ್ಮಕವಾದ ಭಾವನೆಗಳೇ ಹೆಚ್ಚಾಗಿವೆ. ಕುಡಿಯುವ ಹಾಲೇ ನಂಜಾದ ಸ್ಥಿತಿಯನ್ನು ಇತ್ತೀಚಿನ ಬೆಳವಣಿಗೆಗಳಲ್ಲಿ ಕಾಣಬಹುದಾಗಿದೆ. ಜನ ಸಾಮಾನ್ಯರ ಮತಾಂತರದ ಬಗೆಗೆ ಹೆಚ್ಚಿನ ಚರ್ಚೆ ನಡೆದಿದೆಯೇ ಹೊರತು, ಅವರ ಹಸಿವು-ಬಡತನ-ನಿರುದ್ಯೋಗದಂತಹ ವಿಷಯಗಳು ದೂರ ಸರಿದಿವೆ. ಜನ ಸಮುದಾಯದ ಬದುಕನ್ನು ರೂಪಿಸಬೇಕಾಗಿದ್ದ ಧರ್ಮ-ದೇವರುಗಳು ಇಂದು ಜನಸಾಮಾನ್ಯರ ಜೀವ ತಿನ್ನುತ್ತಲಿವೆ. ಧರ್ಮ-ದೇವರುಗಳ ವಿಷಯ ಬಂದಾಗ ವಾಸ್ತವತೆಗಿಂತ - ಭಾವನಾತ್ಮಕತೆ ಮುಖ್ಯವಾಗುತ್ತಿದೆ. ಹೀಗಾಗಿ ಈ ವಿಷಯಕ್ಕೆ ಸಂಬಂಧಿಸಿದ ಚರ್ಚೆಗಳು ಸರಿಯಾದ ದಿಕ್ಕಿನತ್ತ ಸಾಗುತ್ತಿಲ್ಲ.

ಈ ಜಗತ್ತಿನಲ್ಲಿ ಹುಟ್ಟಿದ ಯಾವುದೇ ಧರ್ಮವಿರಲಿ, ಅದು ಜನತೆಗೆ ಒಳ್ಳೆಯದನ್ನು ಮಾಡುವ ಉದ್ದೇಶದಿಂದಲೇ ಹುಟ್ಟಿಕೊಂಡಿರುತ್ತದೆ. ದಯೆ-ಅಂತಃಕರಣಗಳೇ ಅದರ ಸ್ಥಾಯೀ ಭಾವಗಳಾಗಿರುತ್ತವೆ. ಆದರೆ ಮುಂದೆ ಆ ಧರ್ಮದ ಅನುಯಾಯಿಗಳೇ ತಮ್ಮ ಸ್ವಾರ್ಥಕ್ಕಾಗಿ ಧರ್ಮವನ್ನೇ ಅಧರ್ಮವನ್ನಾಗಿ ಮಾರ್ಪಡಿಸುತ್ತಾರೆ. ದೇವರನ್ನೇ ವ್ಯಾಪಾರೀ ಕೇಂದ್ರವಾಗಿಸುತ್ತಾರೆ. ಆಗ ದೊಡ್ಡ ದೊಡ್ಡ ದೇವಾಲಯಗಳು ಇಂಡಸ್ಟ್ರಿಗಳಾಗಿ (ಉದ್ದಿಮೆ) ಮಾರ್ಪಡುತ್ತವೆ. ಮತಾಂತರ ಎಂಬುದು ರಾಜಕೀಯ ತಂತ್ರಗಾರಿಕೆಯಾಗಿ ಬೆಳೆಯುತ್ತ ಹೋಗುತ್ತದೆ. ಸ್ವಾರ್ಥ ರಾಜಕೀಯದ ತೀವ್ರತೆಯಿಂದ ದೇವಾಲಯ - ಮಸೀದಿ-ಚರ್ಚ್‌ಗಳಲ್ಲಿ ಬಾಂಬ್ ಸೃಷ್ಟಿಯಾಗುತ್ತವೆ. ಕೋಮು ಸೌಹಾರ್ದತೆಯನ್ನುಂಟುಮಾಡಬೇಕಾಗಿದ್ದ ಧರ್ಮಗಳು, ಕೋಮುಗಲಭೆಗಳಿಗೆ ಮುಖ್ಯ ಕಾರಣಗಳಾಗುತ್ತವೆ.

ಜಗದ್ಗುರುಗಳೆಂದು ಕರೆದುಕೊಳ್ಳುವವರು, ಮಠಾಧೀಶರಾಗಿ ಮಡಿ ಆಚರಿಸುವವರು, ಪಾದ್ರಿಗಳಾಗಿ ತಂತ್ರ ಹೂಡುವವರು, ಮುಲ್ಲಾ-ಮೌಲ್ವಿಗಳಾಗಿ ಭಯೋತ್ಪಾದನೆಯ ಹುಟ್ಟಿಗೆ ಕಾರಣರಾಗುವವರು ಇಂದು ನಮ್ಮ ಸುತ್ತ-ಮುತ್ತಲಿದ್ದಾರೆ. ಹೊಲಕ್ಕೆ ಬೇಲಿಯಾಗಬೇಕಾಗಿದ್ದ ಇವರೇ ಇಂದು ಹೊಲ ಮೆಯ್ಯತೊಡಗಿದ್ದಾರೆ. ಈ ಸತ್ಯವನ್ನು ಜನಸಾಮಾನ್ಯರು ಅರ್ಥಮಾಡಿಕೊಳ್ಳಬೇಕಾಗಿದೆ.

''ಇಂದು ಹಿಂದೂ ಧರ್ಮಕ್ಕೆ ಕುತ್ತು ಬಂದಿದೆ. ಹಿಂದೂ ಧರ್ಮ ನಾಶವಾಗುತ್ತದೆ. ಇದಕ್ಕೆಲ್ಲ ಮತಾಂತರವೇ ಕಾರಣವಾಗಿದೆ'' ಎಂದು ಅನೇಕರು ಬೊಬ್ಬೆ ಹೊಡೆಯುತ್ತಲಿದ್ದಾರೆ. ಇಂಥವರಿಗೆ ಧರ್ಮದ ಬಗೆಗೆ ಪ್ರಾಥಮಿಕ ಜ್ಞಾನವೇ ಇದ್ದಂತಿಲ್ಲ. ಹಿಂದೂ ಧರ್ಮವೆಂದು ಹೇಳಿದವರಾರು? ಈ ದೇಶದಲ್ಲಿ ಹಿಂದೂ ಧರ್ಮವೆಂಬುದಿದೆಯೆ? ಈ ಪ್ರಶ್ನೆಗಳನ್ನು ಕೇಳಿಕೊಂಡಾಗ ಸತ್ಯ ಹೊರಬರುತ್ತದೆ. 'ಹಿಂದೂ' ಎಂಬುದು ಸಿಂಧೂ ಪ್ರದೇಶದ ಪರ್ಯಾಯ ನಾಮವೇ ಹೊರತು ಅದು ಧರ್ಮವಲ್ಲ. ಹಿಂದೂಪ್ರದೇಶ, ಹಿಂದುಸ್ಥಾನವೆಂಬುದು ಒಂದು ದೇಶದ ಹೆಸರಾಗಿದೆಯೇ ಹೊರತು, ಅದು ಒಂದು ಧರ್ಮದ ಹೆಸರಲ್ಲ. ಈ ಹಿಂದೂಸ್ಥಾನದಲ್ಲಿ ಅನೇಕ ಧರ್ಮಗಳಿವೆ. ವಿವಿಧ ರೂಪದ ದೇವರುಗಳಿದ್ದಾರೆ. ಅವುಗಳಲ್ಲಿ ಶೈವಧರ್ಮ, ಬೌದ್ಧ ಧರ್ಮ, ಜೈನಧರ್ಮ, ವೈದಿಕ ಧರ್ಮ, ವೀರಶೈವ ಧರ್ಮ ಹೀಗೆ ಇವುಗಳ ಸಂಖ್ಯೆ ಬೆಳೆಯುತ್ತಲೇ ಹೋಗುತ್ತದೆ. ಈ ಎಲ್ಲ ಧರ್ಮಗಳ ಪ್ರಾರಂಭದ ಆಶಯಗಳು ಜನತೆಗೆ ಒಳಿತನ್ನುಂಟು ಮಾಡುವಂತಹವುಗಳೇ ಆಗಿದ್ದವು. ಆದರೆ ಕಾಲಘಟ್ಟದಲ್ಲಿ ಈ ಧರ್ಮಗಳ ಅನುಯಾಯಿಗಳೇ ಇವುಗಳ ಮಾಲಿಕರಾಗಿಬಿಟ್ಟರು. ಆಗ ಧರ್ಮದ ಮೂಲೋದ್ದೇಶ ಮರೆಮಾಚಿ ಮಾಲಿಕರ ಆಸೆ ಆಮಿಷಗಳೇ ಆಯಾ ಧರ್ಮಗಳ ಸಿದ್ಧಾಂತಗಳಾಗಿಬಿಟ್ಟವು. ಹಾದಿ ಹಿಡಿಸಬೇಕಾಗಿದ್ದ ಇಂತಹ ಧರ್ಮಗಳೇ ಹೀಗೆ ಹಾದಿಬಿಟ್ಟಾಗ, ಅಲ್ಲಿರುವ ಮುಖಂಡರು ಅವುಗಳ ಹಾದಿ ತಪ್ಪಿಸಿದಾಗ ಕೋಮು ಗಲಭೆಗಳು ಪ್ರಾರಂಭವಾದವು. ಭಯೋತ್ಪಾದನೆ ಬೆಳೆದುನಿಂತಿತು. ಆಗ ಮತಾಂತರಕ್ಕೆ ಹೆಚ್ಚಿನ ಮಹತ್ವ ಬಂತು.

> ಎಲ್ಲ ಧರ್ಮಗಳು, ದೇವರುಗಳು ಅಹಂಭಾವವನ್ನು ತೊರೆಯಲು ಹೇಳಿದವು. ಪ್ರತಿಷ್ಠೆಯನ್ನು ದೂರವಿಡಲು ತಿಳಿಸಿದವು. ಮನುಷ್ಯ – ಮನುಷ್ಯರಲ್ಲಿ ದಯೆ – ಅಂತಃಕರಣಗಳನ್ನು ಬೆಳೆಸಿದವು. ಆದರೆ ಇಂದು ಆಗುತ್ತಿರುವುದೇನು ? ಅದೇ ಧರ್ಮ–ದೇವರುಗಳ ಹೆಸರಿನಲ್ಲಿ ಸುಲಿಗೆ ನಡೆದಿದೆ. ಶೋಷಣೆ ನಿರಂತರವಾಗಿದೆ. ಅಮಾಯಕರು ನಿತ್ಯವೂ ಸಾಯುತ್ತಿದ್ದಾರೆ. ನನ್ನ ಧರ್ಮ ಶ್ರೇಷ್ಠ, ನಾನು ಶ್ರೇಷ್ಠ ಎಂದು ಮೂಲಭೂತವಾದಿಗಳು ಮಾತನಾಡಿದರೆ, ನಿನ್ನ ಧರ್ಮ ಕನಿಷ್ಠ, ನೀನು ಕನಿಷ್ಠ ಎಂದು ಕೋಮುವಾದಿಗಳು ಬೊಗಳೆ ಬಿಡುತ್ತಾರೆ.

■

ಡಾ|| ಬಸವರಾಜ ಸಬರದ

ಆಸ್ತಿಕರಾಗುವುದು ಸರಿಯೋ, ನಾಸ್ತಿಕರಾಗುವುದು ಸರಿಯೋ ಎಂಬ ಚರ್ಚೆಗಿಂತ, ಇಂದು ಮನುಷ್ಯರಾಗುವುದು ಬಹಳ ಮುಖ್ಯವಾಗಿದೆ. ಪ್ರಸ್ತುತ ಸಂದರ್ಭದಲ್ಲಿ ಜಾಗತಿಕವೆಂದೆನಿಸಿಕೊಂಡು ಪ್ರಸಿದ್ಧಿ ಪಡೆದಿರುವ ಕ್ರೈಸ್ತ ಧರ್ಮ ಮತ್ತು ಇಸ್ಲಾಂ ಧರ್ಮದ ಮುಖಂಡರನ್ನು ನೋಡಿದರೆ ಭಯ ಹುಟ್ಟುತ್ತದೆ. ಜಗತ್ತಿಗೇ ಶಾಂತಿಯನ್ನು ಸಾರಿದ ಏಸುಕ್ರಿಸ್ತ ಅಂತಃಕರಣವೇ ಧರ್ಮವೆಂದು ಹೇಳಿದ ಆ ಮಹಾತ್ಮನ ಮಾತುಗಳು ಇಂದು ಎಲ್ಲಿ ಕಳೆದುಹೋಗಿವೆ ? ಕ್ರಿಶ್ಚಿಯನ್ ಧರ್ಮದ ಮುಖಂಡರಾದವರು ಇಂದು ಜಗತ್ತಿನಲ್ಲಿ ಏನು ನಡೆಸಿದ್ದಾರೆ ? ಬುಷ್ ಮತ್ತು ಕ್ಲಿಂಟನ್‌ರ ಅಧಿಕಾರಾವಧಿಯಲ್ಲಿ ನಡೆದಿರುವ ರಕ್ತಪಾತಗಳಿಗೆ ಲೆಕ್ಕವಿದೆಯೆ ? ಯುದ್ಧವನ್ನೇ ಒಂದು ಉತ್ಪಾದನಾ ಕೇಂದ್ರವನ್ನಾಗಿ ಮಾಡಿಕೊಂಡ ಇಂತಹ ಹಿರಿಯಣ್ಣರನ್ನು ಪ್ರಶ್ನಿಸುವವರಾರು ? ಇವರ ಸ್ವಾರ್ಥ ಅಧಿಕಾರದಲ್ಲಿ ಮೂರನೇ ಜಗತ್ತಿನ ದೇಶಗಳೆಲ್ಲ ನಲುಗಿ ಹೋಗಿವೆ. ಇರಾನ್-ಇರಾಕ್‌ಗಳ ಸ್ಥಿತಿಗೆ ಕಾರಣರಾರು ? ಏಸುವಿನ ಹೆಸರಿನಲ್ಲಿ ಪ್ರಾರ್ಥಿಸುವ ನೈತಿಕ ಹಕ್ಕು ಇಂಥವರಿಗಿದೆಯೆ ?

ಸೋದರತ್ವವನ್ನು ಸಾರಿದ ಇಸ್ಲಾಂ ಧರ್ಮದ ಸ್ಥಿತಿ ಇಂದು ಏನಾಗಿದೆ ? ಅಲ್ಲಿಯ ಮತಾಂಧರು ಭಯೋತ್ಪಾದಕರಾಗಿ ರಕ್ತಪಾತ ನಡೆಸಿದ್ದಾರೆ. ಸ್ವಂತ ಸೋದರರನ್ನೇ ಕೊಚ್ಚಿಹಾಕುವವರೆಗೆ ಇವರ ದ್ವೇಷ ಬೆಳೆದುಬಿಟ್ಟಿದೆ. ಸೋದರರಂತಿದ್ದ ಭಾರತೀಯ - ಪಾಕಿಸ್ತಾನಿ ಪ್ರಜೆಗಳಲ್ಲಿ ಇಂಥವರು ದ್ವೇಷದ ಕಿಚ್ಚು ಹಚ್ಚುತ್ತಿದ್ದಾರೆ. ಅಲ್ಲಿಯ ಮೂಲಭೂತವಾದಿಗಳು ಮುಸ್ಲಿಂ ಯುವಕರಲ್ಲಿ ಮೌಢ್ಯತೆಯನ್ನು ಬಿತ್ತುತ್ತಿದ್ದಾರೆ. ಮುಲ್ಲಾ- ಮೌಲ್ವಿಗಳೂ ಮುಸ್ಲಿಂ ಮಹಿಳೆಯರ ಬೆಳವಣಿಗೆಗೆ ಅಡ್ಡಗಾಲು ಹಾಕುತ್ತಿದ್ದಾರೆ. ಪೈಗಂಬರ ಸಾರಿದ ಸೋದರತ್ವದ ಈ ಧರ್ಮ ಇಂದು ಯಾವ ಹಂತ ತಲುಪಿದೆ ? ಕ್ರಿಶ್ಚಿಯನ್ ಮತ್ತು ಮುಸ್ಲಿಂ ಸಮುದಾಯಗಳ ಜನಸಾಮಾನ್ಯರನ್ನು ಇಂದಿನ ರಾಜಕೀಯ ಪಕ್ಷಗಳು ಓಟು ಬ್ಯಾಂಕ್‌ಗಳಾಗಿ ಪರಿವರ್ತಿಸುತ್ತಿವೆ. ರಿಜರ್ವೇಷನ್ ಹೆಸರಿನಲ್ಲಿ ನಡೆಯುವಷ್ಟು ರಾಜಕಾರಣ ಮತ್ತಾವ ವಿಷಯದಲ್ಲಿಯೂ ನಡೆಯುವುದಿಲ್ಲ.

ಶತ-ಶತಮಾನಗಳಿಂದ ದಲಿತರನ್ನು ಅಸ್ಪೃಶ್ಯರನ್ನಾಗಿಸಿದ್ದ, ಮಹಿಳೆಯರನ್ನು ಭೋಗದ ವಸ್ತುವನ್ನಾಗಿ ಕಂಡ ಭಾರತ ದೇಶದ ಪುರೋಹಿತಶಾಹಿ ಧರ್ಮಗಳು ಏನು ನಡೆಸಿವೆ ? ವೈದಿಕ ಧರ್ಮವನ್ನೇ ಹಿಂದೂ ಧರ್ಮವೆಂದು ಪ್ರತಿಪಾದಿಸುತ್ತ ಈ ದೇಶದ ಅಮಾಯಕರು ಮತಾಂತರಗೊಳ್ಳುವುದೇ ಮಹಾಪಾಪವೆನ್ನುವಂತೆ ಇಲ್ಲಿಯ ಸ್ವಾಮಿಗಳು,

ಜಗದ್ಗುರುಗಳು ಮತ್ತು ಮಠಾಶ್ರಯದ ಸಾಹಿತಿಗಳು ಮಾತನಾಡುತ್ತಿದ್ದಾರೆ. ಬಸವಣ್ಣನ ಪರಂಪರೆಯವರೆಂದು ಹೇಳಿಕೊಳ್ಳುವ ವೀರಶೈವ ರಾಜಕಾರಣಗಳು ಇಂದು ಸಂಪೂರ್ಣ ಕೇಸರೀಕರಣಗೊಂಡಿದ್ದಾರೆ. ಗುಡಿ ಗುಂಡಾರಗಳ ಬೆನ್ನು ಹತ್ತಿದ್ದಾರೆ; ಯಜ್ಞಯಾಗಾದಿಗಳ ಮೊರೆ ಹೋಗಿದ್ದಾರೆ. ಅಂದು ಕ್ಷತ್ರಿಯರ ಮೂಲಕ ರಾಜ್ಯವನ್ನಾಳಿದ ಪುರೋಹಿತಶಾಹಿ ಮನಸ್ಸುಗಳು ಇಂದು ಬಸವಣ್ಣನ ಅನುಯಾಯಿಗಳ ಮೂಲಕವೇ ಲೂಟಿಯನ್ನು ಪ್ರಾರಂಭಿಸಿವೆ.

ಇಂತಹ ವಿವಿಧ ಧರ್ಮಗಳಲ್ಲಿರುವ ರಾಜಕೀಯ ನಾಯಕರನ್ನು ನೋಡಿದರೆ ಜನಸಾಮಾನ್ಯರಿಗೆ ಅಂತಹ ಧರ್ಮಗಳ ಬಗೆಗೇನೇ ಜಿಗುಪ್ಸೆ ಉಂಟಾಗುತ್ತದೆ. ಯಾವ ಧರ್ಮಗಳು ಅಂದು ಜಗತ್ತಿನಲ್ಲಿ ಸತ್ಯ, ಶಾಂತಿ, ಅಹಿಂಸೆ, ಸೋದರತ್ವ, ದಯೆ, ಅಂತಃಕರಣಗಳಂತಹ ಮೌಲ್ಯಗಳನ್ನು ಹುಟ್ಟುಹಾಕಿದ್ದವೋ, ಇಂದು ಆ ಧರ್ಮಗಳ ರಾಜಕೀಯ-ಧಾರ್ಮಿಕ ಮುಖಂಡರ ಮುಖಾಂತರ ಅವು ದಿವಾಳಿಯ ಅಂಚಿನಲ್ಲಿವೆ. ಪ್ರಜ್ಞಾವಂತರು ಅವುಗಳನ್ನು ನಂಬದ ಸ್ಥಿತಿಗೆ ತಲುಪಿದ್ದಾರೆ. ಹೋರಾಟಗಾರರು ಅಸಹಾಯಕರಾಗಿದ್ದಾರೆ. ಅಸಂಖ್ಯಾತ ಅಮಾಯಕರು ದಿಕ್ಕುತೋಚದ ಸ್ಥಿತಿಗೆ ತಲುಪಿದ್ದಾರೆ. ಇದನ್ನೇ ಸಾಂಸ್ಕೃತಿಕ ವಿಸ್ಮೃತಿಯೆಂದು ಕರೆಯಲಾಗುತ್ತದೆ. ನಮ್ಮ ಧರ್ಮಗಳೇ ನಮಗೆ ಭೂತಗಳಾಗಿ, ನಮ್ಮ ಸೋದರರೇ ನಮಗೆ ವೈರಿಗಳಂತೆ ಕಾಣಲು ಮಾಡಿದವರಾರು ? ಇದರ ಹಿಂದಿರುವ ಕಾಣದ ಕೈಗಳಾವುವು ? ಈ ವಿಷಯದ ಬಗೆಗೆ ಚರ್ಚೆ ನಡೆಯುವುದು ಮುಖ್ಯವೆನಿಸುತ್ತದೆ.

ಇಂದು ಧರ್ಮ-ದೇವರುಗಳನ್ನು ಕುರಿತಂತೆ ಆನ್ವಯಿಕ ಚರ್ಚೆ ನಡೆಯಬೇಕಾಗಿದೆ. ಯಾವುದೋ ಕಾಲದಲ್ಲಿ ಬರೆದಿದ್ದ ಗ್ರಂಥವೊಂದನ್ನು ಧರ್ಮಗ್ರಂಥವೆಂದು ಭಾವಿಸುವುದು ಮೊದಲನೇ ಮೌಢ್ಯತೆಯಾಗಿದೆ. ಯಾರೋ ಬರೆದಿಟ್ಟ ಗ್ರಂಥವನ್ನು ದೇವರೇ ಬರೆದಿದ್ದಾನೆಂದು ನಂಬುವುದು ಎರಡನೇ ಮೌಢ್ಯತೆಯಾಗಿದೆ. ಇಂತಹ ಮೌಢ್ಯತೆಗಳಿಂದಲೇ ಮೂಲಭೂತವಾದ ಬೆಳೆಯಲು ಪ್ರಾರಂಭಿಸುತ್ತದೆ. ನನ್ನ ಧರ್ಮ ಶ್ರೇಷ್ಠ ನನ್ನ ದೇವರು ಶ್ರೇಷ್ಠ ನಾನು ಶ್ರೇಷ್ಠ ಎಂಬ ಅಹಂಭಾವ ಬೆಳೆದು ನಿಂತಾಗ ಇತರ ಧರ್ಮೀಯರು ತೃಣ ಸಮಾನರಾಗಿ ಕಾಣುತ್ತಾರೆ. ಆಗ ನಾವೇನು ಕಡಿಮೆ ಎಂದು ಇತರರು ಕುಣಿಯತೊಡಗುತ್ತಾರೆ. ಹೀಗೆ ಬೆಳೆದು ನಿಂತ ಮೂಲಭೂತವಾದಿತನವು ಕೋಮುವಾದದ ದಳ್ಳುರಿಗೆ ಕಾರಣವಾಗುತ್ತದೆ. ಕೋಮು-ಕೋಮುಗಳಲ್ಲಿ, ಧರ್ಮ-ಧರ್ಮಗಳಲ್ಲಿ, ದೇಶ-ದೇಶಗಳಲ್ಲಿ ಇಂದು ದಳ್ಳುರಿ ಎದ್ದು ಉರಿಯುತ್ತಿರುವುದು ಇದೇ ಕಾರಣಕ್ಕಾಗಿ ಎಂಬುದನ್ನು ನಾವೆಲ್ಲರೂ ಮನಗಾಣಬೇಕಾಗಿದೆ.

## ಕನಸು

ಅಂದು ಗಾಢ ನಿದ್ರೆಯಲ್ಲಿದ್ದೆ  
ಬೆನ್ನ ಮೇಲೆ ಬಿದ್ದ  
ಹೊಡೆತ  
ಕಾದ ಕಬ್ಬಿಣದ ಮೇಲೆ  
ಸುತ್ತಿಗೆಯಿಂದ  
ಬಿದ್ದಂತೆ  
ತಕ್ಷಣ ಎಚ್ಚರವಾಯಿತು  
ಯಾರೂ ಕಾಣಲಿಲ್ಲ  
ಬಾಗಿಲಿಂದ  
'ಬಾ' ಎಂಬ ಕೂಗು  
ಎದ್ದು  
ಹೊರಟೆ ಹಿಂದೆ ಹಿಂದೆ  
ಕಾಂಪೌಂಡಿನ ಹತ್ತಿರ  
ಅಲ್ಲಿ  
ಕಪ್ಪು ಜನರ ಸಾಲು  
ಅವರಿಂದ  
ಹಿಂದೆ ನೋಡೆಂಬ ಪ್ರಶ್ನೆ  
ಹಿಂತಿರುಗಿದೆ ಕಿಟಕಿಯಿಂದ  
ಕರ್ಕಶ ಧ್ವನಿಯ ಕರೆ  
ಹೋದೆ  
ಒಳಗೆ  
'ಕೈ' ನೀಡೆಂಬ ಆಜ್ಞೆ  
ನೀಡಿದೆ  
ಮತ್ತೊಮ್ಮೆ ಹೊಡೆತ  
ಮಿಂಚಿನಂತೆ  
ಕೈ ಮೇಲೆ  
ರಂಗೋಲಿ ಚುಕ್ಕೆ  
ನೀಲಿ ವರ್ಣದ್ದು  
ಭಯದಿಂದ  
ಕಾಂಪೌಂಡಿನ ಕಡೆ  
ಓಡಿದೆ  
ಯಾರೂ ಕಾಣಲಿಲ್ಲ  
ಚೀರಿದೆ ನರಳಿದೆ  
ಯಾರೂ ಬರಲಿಲ್ಲ  
ಅಷ್ಟರಲಿ ಬಂದದ್ದು  
ಬಾಯಿತುಂಬ ನೊರೆ  
ಕಣ್ಣಿಗೆ  
ಕತ್ತಲು

ಕಮಲಂ ಅರಸು

ಎಲ್ಲ ಧರ್ಮಗಳು, ದೇವರುಗಳು ಈ ಅಹಂಭಾವವನ್ನು ತೊರೆಯಲು ಹೇಳಿದವು. ಪ್ರತಿಷ್ಠೆಯನ್ನು ದೂರವಿಡಲು ತಿಳಿಸಿದವು. ಮನುಷ್ಯ - ಮನುಷ್ಯರಲ್ಲಿ ದಯೆ - ಅಂತಃಕರಣಗಳನ್ನು ಬೆಳೆಸಿದವು. ಆದರೆ ಇಂದು ಆಗುತ್ತಿರುವುದೇನು ? ಅದೇ ಧರ್ಮ-ದೇವರುಗಳ ಹೆಸರಿನಲ್ಲಿ ಸುಲಿಗೆ ನಡೆದಿದೆ. ಶೋಷಣೆ ನಿರಂತರವಾಗಿದೆ. ಅಮಾಯಕರು ನಿತ್ಯವೂ ಸಾಯುತ್ತಿದ್ದಾರೆ.

ನನ್ನ ಧರ್ಮ ಶ್ರೇಷ್ಠ, ನಾನು ಶ್ರೇಷ್ಠ ಎಂದು ಮೂಲಭೂತವಾದಿಗಳು ಮಾತನಾಡಿದರೆ, ನಿನ್ನ ಧರ್ಮ ಕನಿಷ್ಠ, ನೀನು ಕನಿಷ್ಠ ಎಂದು ಕೋಮುವಾದಿಗಳು ಬೊಗಳೆ ಬಿಡುತ್ತಾರೆ. ಹೀಗೆ ಮೂಲಭೂತವಾದ ಮತ್ತು ಕೋಮುವಾದ ಕೂಡಿಕೊಂಡಾಗ ನಿತ್ಯವೂ ಗುಂಡಿನ ಮಳೆ ಸುರಿಯತೊಡಗುತ್ತದೆ. ಬೀದಿ-ಬೀದಿಗಳಲ್ಲಿ ರಕ್ತ ಹರಿಯತೊಡಗುತ್ತದೆ. ಧರ್ಮನಿರಪೇಕ್ಷತೆ, ಜಾತ್ಯತೀತತೆ ಎಂಬಂತಹ ಪದಗಳು ಇಂದು ಕೇವಲ ಹೇಳಲು ಮಾತ್ರ ಉಳಿದುಕೊಂಡಿವೆ. ಅಮಾಯಕರ ಮೌಢ್ಯತೆಯನ್ನು ಸ್ವಾರ್ಥಕ್ಕಾಗಿ ಬಳಸಿಕೊಳ್ಳುವ ರಾಜಕೀಯ ಪಕ್ಷಗಳು ಸಮುದಾಯ ಸಮುದಾಯಗಳ ನಡುವೆ ಯಾವಾಗಲೂ ಅಂತರವನ್ನುಳಿಸಲು ಪ್ರಯತ್ನಿಸುತ್ತವೆ. ರಿಸರ್ವೇಷನ್ ಹೆಸರಿನಲ್ಲಿ ಪ್ರಮುಖ ರಾಜಕೀಯ ಪಕ್ಷಗಳು ಅಸ್ಪೃಶ್ಯರನ್ನು, ಅಲ್ಪ ಸಂಖ್ಯಾತರನ್ನು ಮುಖ್ಯವಾಹಿನಿಯಿಂದ ದೂರ ಸರಿಸುತ್ತಲೇ ಬಂದಿವೆ. ಸ್ವಾರ್ಥ ರಾಜಕೀಯದ ಕಾರಣದಿಂದಾಗಿ ಇಂದು ಧರ್ಮ-ದೇವರು ಅರ್ಥಕಳೆದುಕೊಂಡಿವೆ. ಮಂದಿರ-ಮಸೀದಿ-ಚರ್ಚ್‌ಗಳನ್ನು ಕಟ್ಟಿಸಿಕೊಡುವುದರಿಂದ ಈ ದೇಶದ ಜನ ಉದ್ಧಾರವಾಗಲಾರರು. ಕೇವಲ ರಾಜಕೀಯ ಘೋಷಣೆಗಳಿಂದ ಈ ದೇಶ ಅಭಿವೃದ್ಧಿಯಾಗಲಾರದು. ಶಿಕ್ಷಣ, ಉದ್ಯೋಗ, ಅವಕಾಶಗಳನ್ನು ಕಲ್ಪಿಸಿಕೊಡುವುದರ ಮೂಲಕ ಈ ಜನರನ್ನು ಬೆಳೆಸಬೇಕಾಗುತ್ತದೆ. ನೆಲ-ಜಲ-ವಿದ್ಯುತ್ ಸಂಪನ್ಮೂಲಗಳನ್ನು ಹೆಚ್ಚಿಸಿಕೊಳ್ಳುವುದರ ಮೂಲಕ ನಾಡನ್ನು ಕಟ್ಟಬೇಕಾಗುತ್ತದೆ. ಬಡತನದ ಬೇಗುದಿಗೆ ಬೆಂದು, ಇಂದು ನಿರುದ್ಯೋಗಿ ಯುವಕರು ನಕ್ಸಲೈಟ್‌ಗಳಾಗುತ್ತಿದ್ದಾರೆ. ಮೌಢ್ಯತೆ ಮತ್ತು ಹಸಿವುಗಳಿಗೆ ತತ್ತರಿಸಿ ಇಂದು ಯುವಕರು ಭಯೋತ್ಪಾದಕರಾಗುತ್ತಿದ್ದಾರೆ. ಇವೆಲ್ಲಾ ನಾವೇ ಸೃಷ್ಟಿಸಿಕೊಂಡ ಭೂತಗಳಾಗಿವೆ. ಇದಕ್ಕೆಲ್ಲ ನಮ್ಮ ಸ್ವಾರ್ಥ ಮನಸೇ ಕಾರಣವಾಗಿದೆ.

ಮುಂಜಾನೆ ಎದ್ದ ಕೂಡಲೆ ಏಸುವನ್ನು ಪ್ರಾರ್ಥಿಸುವ ಅಮೆರಿಕಾ ಇಂಗ್ಲೆಂಡ್ ದೇಶಗಳ ರಾಜಕೀಯ ನಾಯಕರು ಯುದ್ಧೋತ್ಪಾದನೆಗೆ ತೊಡಗಿದರೆ, ನಮಾಜು ಮಾಡುತ್ತಲೇ ಬಂದೂಕು ಎತ್ತಿಕೊಳ್ಳುವ ಪೈಗಂಬರನ ವಾರಸುದಾರರು ಕೆಲವರು ಭಯೋತ್ಪಾದಕರಾಗಿದ್ದಾರೆ. ಇಂತಹ



ಯುದ್ಧೋತ್ಪಾದಕರು ಮತ್ತು ಭಯೋತ್ಪಾದಕರಿಂದ ಭಾರತ - ಪಾಕಿಸ್ತಾನದಂತಹ ಬಹುದೇಶಗಳು ತತ್ತರಿಸಿಹೋಗಿವೆ.

ಕ್ರಿಶ್ಚಿಯನ್ ಧರ್ಮದಲ್ಲಿರುವ ದಯೆ-ಅಂತಃಕರಣ ಹಾಗೂ ಇಸ್ಲಾಂ ಧರ್ಮದಲ್ಲಿರುವ ಸೋದರತ್ವ- ಸಮಾನತೆಯಂತಹ ಮೌಲ್ಯಗಳನ್ನು ಹೊಂದಿರದ ವೈದಿಕ-ಧರ್ಮ, ಈ ನಾಡಿನ ಅವೈದಿಕ ಧರ್ಮಗಳ ಮೇಲೆ ಆಧಿಪತ್ಯ ಸ್ಥಾಪಿಸಿ 'ಹಿಂದೂ ಧರ್ಮ' ವೆಂಬ ಹೊಸಪದವನ್ನು ಬಳಸಿ ಹಿಂದೂಸ್ತಾನದಲ್ಲಿರುವವರೆಲ್ಲ ಹಿಂದೂಗಳೆಂಬ ಹಸಿ ಸುಳ್ಳುಗಳನ್ನು ದೊಡ್ಡದಾಗಿ ಹೇಳುತ್ತ ಬಂದಿದೆ. ವೈದಿಕ ಧರ್ಮದ ಕಂದಾಚಾರಗಳನ್ನು ಮೌಢ್ಯತೆಯನ್ನು ಅಸಮಾನತೆಯನ್ನು ಭಾರತದ ಚಾರ್ವಾಕ ಧರ್ಮ, ಬೌದ್ಧ ಧರ್ಮ, ಜೈನ ಧರ್ಮ, ಲಿಂಗಾಯತ ಧರ್ಮಗಳು ಪ್ರತಿಭಟಿಸುತ್ತಲೇ ಬಂದಿವೆ. ಮತಾಂತರದ ಚರ್ಚೆ ಬಂದಾಗ ಈ ಅವೈದಿಕ ಧರ್ಮದಲ್ಲಿಯ ಸಂಪ್ರದಾಯವಾದಿಗಳು ತಾವೂ ಕೂಡ ಹಿಂದು ಧರ್ಮಕ್ಕೆ ಸೇರಿದವರೆಂಬ ಭ್ರಮೆಯಲ್ಲಿ ಉಳಿಯುತ್ತಾರೆ. ಹೀಗೆ ಶತಮಾನಗಳಿಂದ ಅನೇಕ ಭ್ರಮೆಗಳನ್ನು ಸೃಷ್ಟಿಸಿ, ಅಸ್ಪೃಶ್ಯತೆಗೆ, ಅಸಮಾನತೆಗೆ ಕಾರಣವಾಗಿರುವ ವೈದಿಕ ಧರ್ಮವು, ಮಹಾತ್ಮ ಬುದ್ಧನನ್ನೇ ಒಂಭತ್ತನೇ ಅವತಾರದಲ್ಲಿ ತೋರಿಸಿ ಈ ದೇಶದ ಮುಗ್ಧಜನತೆಯ ಮೇಲೆ ಬೌದ್ಧಿಕ ಸವಾರಿ ನಡೆಸಿದೆ.

ಹಾಗೆ ನೋಡಿದರೆ 'ಹಿಂದು' ಎಂಬ ಪದ ಹುಟ್ಟಿದ್ದೆ ಹದಿನಾರನೇ ಶತಮಾನದಲ್ಲಿ. ಪರ್ಶಿಯನ್ನರು ಈ ಪದವನ್ನು ಮೊದಲಿಗೆ ಬಳಸಿದರು. ವೈದಿಕ ಪುರೋಹಿತಶಾಹಿಗಳಿಗೆ ಈ 'ಹಿಂದೂ' ಎಂಬ ಪದ ದೊಡ್ಡ ಅಸ್ತ್ರವಾಗಿಬಿಟ್ಟಿತು. ಸಮಾನತೆಯ ವಿಷಯ ಬಂದಾಗ ದಲಿತರ ಸಮಸ್ಯೆ ಬಂದಾಗ ಮಾರುದ್ದ ಹಾರುವ ಈ ಮಡಿವಂತ ಪುರೋಹಿತಶಾಹಿಗಳು, ತಮಗೂ ತಮ್ಮ ಧರ್ಮಕ್ಕೂ ಕುತ್ತು ಬಂದಾಗ 'ನಾವೆಲ್ಲಾ ಹಿಂದೂಗಳು' ಎಂಬ ಪದ ಹಾಡಲು ಪ್ರಾರಂಭಿಸುತ್ತಾರೆ. ಈ ಧರ್ಮ ಸೂಕ್ಷ್ಮಗಳು ಜನಸಾಮಾನ್ಯರಿಗೆ ಅರ್ಥವಾಗುವುದಿಲ್ಲ. ಭಾವಾವೇಷಗೊಂಡ ಸಾಮಾನ್ಯ ಜನ ಇವರು ಹೇಳಿದಂತೆ ಕುಣಿಯತೊಡಗುತ್ತಾರೆ.

ಇದು ಈ ದೇಶದ ದೊಡ್ಡ ದುರಂತ. ಜನಸಮುದಾಯದ ಅನಕ್ಷರತೆ ಮೌಢ್ಯತೆ - ಮುಗ್ಧತೆಗಳ ದುರುಪಯೋಗವನ್ನು ಪುರೋಹಿತಶಾಹಿ ವ್ಯವಸ್ಥೆ ಈ ದೇಶದಲ್ಲಿ ಶತಮಾನಗಳಿಂದ ಮಾಡಿಕೊಳ್ಳುತ್ತಲೇ ಬಂದಿದೆ. ಒಂದೂ ಪ್ರದೇಶವನ್ನು ಒಂದೂ ಧರ್ಮವೆಂದು ಬಿಂಬಿಸುವುದು, ಬುದ್ಧನನ್ನು ಭಗವಂತನ ಅವತಾರವೆಂದು ಸಾರುವುದು ಈ ದೇಶದ ಪುರೋಹಿತಶಾಹಿ ವ್ಯವಸ್ಥೆಯ ಮುಖ್ಯ ಪ್ರಣಾಳಿಕೆಯಾಗಿದೆ. ಇಂತಹ ಪ್ರಣಾಳಿಕೆಯ ಮೂಲಕ ಈ ದೇಶದ ಅಮಾಯಕರನ್ನು ಕೂಲಿಕಾರ್ಮಿಕರನ್ನು ಮತ್ತು ಅಸ್ಪೃಶ್ಯರನ್ನು ಭಾವನಾತ್ಮಕವಾಗಿ ಪ್ರಚೋದಿಸಿ ಮುಸ್ಲಿಂರ ವಿರುದ್ಧ, ಮತಾಂತರದ ವಿರುದ್ಧ ಎತ್ತಿಕಟ್ಟಿ ಈ ದೇಶದಲ್ಲಿ ಕೋಮುಗಲಭೆ ನಡೆಯಲು ಈ ಪುರೋಹಿತಶಾಹಿ ವ್ಯವಸ್ಥೆಯೇ ಕಾರಣವಾಗಿದೆ. ಮತಾಂತರದ ಪ್ರಕ್ರಿಯೆಯನ್ನು ವಿರೋಧಿಸುವ ಈ ಮನಸ್ಸುಗಳು, ಮತಾಂತರದ ಕಾರಣಗಳನ್ನು ತಿಳಿದುಕೊಳ್ಳುವುದಿಲ್ಲ. ಮತಾಂತರಕ್ಕೆ ಕೇವಲ ಹಣದಾಸೆ, ರಕ್ಷಣೆ ಮಾತ್ರ ಕಾರಣವಾಗಿರದೆ, ಶತಮಾನಗಳಿಂದ ಅನುಭವಿಸಿದ ಅಸ್ಪೃಶ್ಯತೆಯ ನೋವು, ಯಾತನೆಗಳು ಮುಖ್ಯ ಕಾರಣಗಳಾಗುತ್ತವೆ.

ಬುದ್ಧ-ಬಸವ-ಗಾಂಧಿ-ಅಂಬೇಡ್ಕರ್ ಜನಿಸಿದ ಈ ದೇಶದಲ್ಲಿ ಇಂದು ಭಯೋತ್ಪಾದಕರು, ಮೂಲಭೂತವಾದಿಗಳು, ಕೋಮುವಾದಿಗಳು ಕಾಣಿಸಿಕೊಳ್ಳುತ್ತಿದ್ದಾರೆ. ಸಮಾನತೆಯ ದಾರಿ ತೋರಿದ ಈ ಮಹಾತ್ಮರನ್ನು ಮರೆತು, ಗೊಡ್ಡು ಆಚರಣೆಗಳಿಗೆ ಜನಸಾಮಾನ್ಯರನ್ನು ತಕ್ಕ ಸೋದರ-ಸೋದರರ ನಡುವೆಯೇ ರಕ್ತಪಾತ ಹರಿಯಲು ಈ ಅಸಮಾನತೆಯ ವ್ಯವಸ್ಥೆ ಮುಖ್ಯಕಾರಣವಾಗಿದೆ.

ಈ ಮತ-ಧರ್ಮದಾಚರಣೆಗಳನ್ನು ಮನೆಯೊಳಗಡೆ ಮಾತ್ರ ಸೀಮಿತಗೊಳಿಸಿಕೊಂಡು ಭಾರತದ ಸಂವಿಧಾನವೇ ನಮ್ಮ ಧರ್ಮ, ಭಾರತದೇಶವೇ ನನ್ನ ದೇವರು ಎಂದು ಭಾವಿಸಿಕೊಂಡಾಗ ಮಾತ್ರ ಈ ಸಮಸ್ಯೆಗೆ ಪರಿಹಾರ ಸಿಗುತ್ತದೆ. ಮಾನವೀಯತೆ - ಅಂತಃಕರಣಗಳಂತಹ ಮೌಲ್ಯಗಳನ್ನು ಹುಟ್ಟುಹಾಕಿದಾಗ ಮಾತ್ರ ಹೊಸ ಬೆಳಕು ಕಾಣಿಸಿಕೊಳ್ಳುತ್ತದೆ.

ಡಾ|| ಬಸವರಾಜ ಸಬರದ
ಪ್ರಾಧ್ಯಾಪಕರು ಮತ್ತು ಅಧ್ಯಕ್ಷರು, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ, ವಿಶ್ವವಿದ್ಯಾಲಯ, ಗುಲಬರ್ಗಾ

# ಸುಳ್ಳಿಂದ ಕಾಯ...

ಗುಂಡುರಾವ್ ದೇಸಾಯಿ. ಮಸ್ಕಿ

'ಇದ್ದಿದ್ದನ್ನು ಇದ್ದಂಗ ಹೇಳಿದ್ರ ಎದ್ದು ಬಂದು ಎದಿಗೆ ಒದ್ದಂಗಾಗುತ್ತೆ' ಅಂತ ಗಾದೆ ಇದೆಯಲ್ಲ, ಸತ್ಯ ಹೇಳೋದರಿಂದ ಆಗುವ ಪ್ರತಿಫಲ ಅದು. ಸತ್ಯನ ಅಂತಹುದು. ಅರಗಿಸಿಕೊಳ್ಳಲಾಗದಂತಹ ದ್ರವ್ಯ ಅಷ್ಟು ಕಹಿಯಾಗಿರುತ್ತೆ, ಏಕದಂ ಉಲ್ಟಿ ಹೊಡಿಯುತ್ತೆ. ಆದರೆ ಸುಳ್ಳು ಹಾಗಲ್ಲ ಅದು ರಂಜಿಸುತ್ತೆ, ಗೆಲುವಿನಲ್ಲಿ ಖುಷಿಯಲ್ಲಿ ತೇಲಿಸುತ್ತೆ. ಆಪದ್ಬಾಂಧವನಂತೆ ಕೆಲವೊಮ್ಮೆ ರಕ್ಷಿಸುತ್ತೆ. ಸುಳ್ಳಿನಿಂದ ಬೆಟ್ಟದ ಕಷ್ಟ ಕಾರ್ಯಗಳು ಸರಳವಾಗಿ ಬಿಡುತ್ತೆ. ಉಪಕಾರಿ ಈ ಸುಳ್ಳಿನ ಮಹತ್ವನ ತಿಳಿಸೋಗೋಸ್ಕರ ಸುಳ್ಳಿಂದ ಕಾಯ... ಅಂತ ಟೈಟಲ್ ಕೊಟ್ಟಿದ್ದು ಸಮಂಜಸ ಅಂತ ತಮಗ ಅನಿಸುತ್ತೆ ತಾನೆ ?

ಬಾಲ್ಯದಲ್ಲಿ ನಾವೇನಾದ್ರು ಸುಳ್ಳು ಬಾಳ ಹೇಳಿದ್ರ ''ನೀ ಬಳ್ಳಾರಿ ರಾಮಣ್ಣನ ಸೋದರಳಿಯ ಖರೇನ ಲೇ'' ಅಂತ ಅಪ್ಪ ಅಂತಿದ್ದ. ಅದಕ್ಕೂ ಕಾರಣ ಇಲ್ಲದಿದ್ದಿಲ್ಲ. ನಮ್ಮ ಮಾವ ಸುಳ್ಳನ್ನು ಎಷ್ಟು ರಂಜನೀಯವಾಗಿ ಹೇಳಿ ನಂಬಸ್ತಿದ್ದನಂದ್ರೆ ಭಾರಿ ಮಳೆಯಾಗಿದೆ ಎಂಬಲ್ಲಿ ಕೆಸರು ಸಹಿತ ಇರತಿರಲಿಲ್ಲ, ಅಪಘಾತವಾಗಿದೆ ಎಂಬಲ್ಲಿ ಗಾಜಿನ ಹರಳು ಸಹಿತ ಸಿಗತಿರಲಿಲ್ಲ. ಸಮಯನೋಡಿ



ಸಿಕ್ಕವರನ್ನು ಹೊಗಳಿ ಅಟ್ಟಕ್ಕೇರಿಸಿ ಯಾವುದಾದರೊಂದು ಸಂಕಟ ತೋಡಿಕೊಂಡು ಜನರಲ್ಲಿ ಸಾಂತ್ವನ ಗಿಟ್ಟಿಸಿ ಹಣ ಕೀಳುತ್ತಿದ್ದನಾದ್ದರಿಂದ 'ಸುಳ್ಳು ರಾಮಣ್ಣ'ನೆಂದೆ ಹೆಸರಾಗಿದ್ದ. ಮೋಹದ ಅವನ ಮಾತಿನ ಬಲೆಗೆ ಎಲ್ಲರೂ ಬೀಳೋರೆ. ಇಂತಹ ಸುಳ್ಳನ್ನು ಕಾಯಕ ಮಾಡಿಕೊಂಡವರು ಎಷ್ಟು ಮಂದಿ ಸಿಗಲ್ಲ. ಹೇಳಿ.

ಇಂದು ಸುಳ್ಳಿನೊಂದಿಗೆ ಎಂತಹ ಸಾಂಗತ್ಯ ಬೆಳಸಿಕೊಂಡಿವಿ ಅಂದ್ರ ಸತ್ಯ ಹೇಳಿದ್ರು ಅದು ಸುಳ್ಳು ಅನ್ನೊ ತೀರ್ಮಾನಕ್ಕೆ ಬರತಿವಿ. ''ನಮಗ ಮೆಟ್ರಿಕ್‌ಲಿ ಕಾಪಿ ಮಾಡಾಕ ಆಸ್ಪದನ ಇರಲಿಲ್ಲಲೇ ಅನ್ನೋ ಜಿಲ್ಲಾಧಿಕಾರಿಯೋರ್ವ ನಮಗ ಗಂಟಬಿದ್ದಿದ್ರು'' ಅಂತ ನಮ್ಮ ಹುಡುಗುರೆದುರಿಗಿ ಹೇಳತಿದ್ರೆ ನಮ್ಮ ಭಯಕ್ಕೆ ಎದುರಿಗೆ ''ಹೌದೇನ್ರಿ ಸಾರ್'' ಅಂತ ಅಚ್ಚರಿ ಪಟ್ಟು, ಹಿಂದಿನಿಂದ ''ಲೇ, ನಮ್ಮ ಸಾರ್ ಸುಳ್ಳು ಹೇಳತಾರ್ಲೆ'' ಅಂತಿರುತ್ತಾರೆ. ''ನಮ್ಮಪ್ಪ ಮೇಷ್ಟ್ರಿದ್ರು. ತಮ್ಮ ಒಡಹುಟ್ಟಿದವರಿಗೆ ತೋರಿಸಿದ ಉದಾರತನಕ್ಕೆ ನಮಗ ಕರೆಂಟ್ ಇಲ್ಲದ ಮನೆಯಲ್ಲಿ ಇರೋ ಪ್ರಸಂಗ ಬಂತು, ಅದರಾಗ ಓದು ಮುಗಿಸಿದಿವೆ'' ಅಂತ ನನ್ನ ಮಗಳಿಗೆ ಹೇಳತಿದ್ರೆ ''ನೀನು ಸುಳ್ಳನ್ನು ಭಾರಿ ಚೆಂದ ಹೇಳ್ತಿಪಾ'' ಅಂತಿರತಾಳೆ. ''ಇದುವರೆಗೂ ಮಾವನಿಂದ ನಾ ಏನನ್ನು ಎಕ್ಸ್‌ಪೆಕ್ಟ್ ಮಾಡಿಲ್ಲ. ಹಾಗೆ ಮದುವೆ ಸಮಯದಲ್ಲಿ'' ಅಂತ ಸ್ನೇಹಿತರಿಗೆ ಹೇಳತಿದ್ರೆ ''ರೀಲ್ ಬಿಡಬ್ಯಾಡಪ'' ಅಂತಿರುತಾರ. ''ಬೆತ್ತಲೆ ಜಗತ್ತಿನಾಗ ಬಟ್ಟಿ ಹಾಕ್ಕೊಂಡವ ಮೂರ್ಖ'' ಅನ್ನೊ ಹಾಂಗ ಸುಳ್ಳಿಂದ ನಡಿಯೋ ಕಾಲದಲ್ಲಿ ಸತ್ಯದ ಕಥೀನ ಹಾಂಗೆನೆ. ಗಾದೆನ ಇದೆಯಲ್ಲ ''ಹೆಣ್ಣಿನ ವಯಸ್ಸು ಗಂಡಿನ ಪಗಾರ ಕೇಳಬಾರದಂತ''. ಇವರ‍್ಯಾರು ಇದ್ದ ವಿಷಯ ಹೇಳಲ್ಲ ಅಂತ ತಾನೆ.

'ಸತ್ಯಕ್ಕೆ ಸಾವಿಲ್ಲ ಸುಳ್ಳಿಗೆ ಸುಖವಿಲ್ಲ' ಅನ್ನೊ ಗಾದೆಗೆ 'ಸತ್ಯಕ್ಕೆ ಸುಖವಿಲ್ಲ ಸುಳ್ಳಿಗೆ ಗೆಲುವಿದೆ' ಅನ್ನೊ ತಗಾದೆ ರೂಪಿಸಬಹುದೇನೋ ? ಸತ್ಯ ಹೇಳಿದ್ರ ನಡಿಯುವಂತಹ ಕಾಲ ಅಲ್ರಿ ಇದು ಅಂತ ಮೊದಲೇ ಹೇಳಿಲ್ಲವೆ ? ಒಂದು ಕೊಲೆಯನ್ನು ನೋಡಿದವ ಇಂಥವನೆ ಮಾಡಿದ್ದು ಅಂತ ಹೇಳಿದ್ರ ಬದುಕಿನ್ಯಾಗ ಹೇಳಿದವನಿಗಂತೂ ಸುಖ ಇರುತ್ತೆ ಅಂದ್ಕೊಂಡ್ರಾ ! ದಾರಿಲಿ ಹೋಗೋ ಮಾರಿನ ಮನ್ಯಾಗ ಹೊಗಿಸ್ಕೊಂಡ್ಹಂಗ ಆಗತ್ರಿ. ಸುಳ್ಳಿನ ಬಲದಿಂದ ಎಷ್ಟು ಸುಖವಾಗಿರಬಹುದು ಅನ್ನೋಕೆ ನಮ್ಮ ರಾಜಕಾರಣಿಗಳಿಗಿಂತ ಬೇರೆ ಸಾಕ್ಷಿ ಬೇಕೆ ? ಬಡತನ ನಿರ್ಮೂಲನೆ ಮಾಡ್ತಿವಿ ಅಂತ ಸ್ವಾತಂತ್ರ್ಯ ಬಂದಾಗಿನಿಂದ ಎಲ್ಲಾ ಸರ್ಕಾರಗಳು ಹೇಳತಾನ ಬಂದಾವ. ಆದರ ಅಧಿಕಾರ ನಡೆಸಿದವರ ಸಿರಿತನ ಮಾತ್ರ ಹೆಚ್ಚಾಗ್ಯಾದ ಅಷ್ಟ. ಸುಳ್ಳಿನಿಂದ ಎಂತಹ ಐಷಾರಾಮಿ ಬದುಕು ನಡೆಸಬಹುದು ಅನ್ನೋಕೆ ಲಾಲೂ ಅವರಿಗಿಂತ ಬೇರೆ ಉದಾಹರಣೆ ಬೇಕೆ ? 'ನಾನು ಮೇವಿನ ಹಣ ತಿಂದಿನಿ' ಅಂತ ಸತ್ಯ ನುಡಿದಿದ್ರ ಇವತ್ತು ಮಿನಿಸ್ಟ್ರಾಗಿ ಮೆರೆಯಬಹುದಿತ್ತೆ ? ಸತ್ಯ ಮತ್ತು ರಾಜಕೀಯ ಎರಡು ವಿರೋಧಾರ್ಥಕ ಶಬ್ದಗಳೇ. ಅಂತಹ ಧರ್ಮರಾಯನಿಗೆ ಸುಳ್ಳು ಹೇಳೋದು ತಪ್ಪಲಿಲ್ಲ 'ಅಶ್ವತ್ಥಾಮೋ ಹತಃ ಕುಂಜರಃ' ಅಂತ ಕುರುಕ್ಷೇತ್ರ ಯುದ್ಧದಾಗ ಕೂಗದೆ ಹೋಗಿದ್ರೆ ದ್ರೋಣಾಚಾರ್ಯರನ್ನ ಕೊಲ್ಲಕಾಗುತ್ತಿತ್ತೆ ? ಪಾಂಡವರಿಗೆ ಗೆಲ್ಲಕಾಗುತ್ತಿತ್ತೆ ! ರಾಜಕಾರಣದಲ್ಲಿ ಬದುಕಲು, ಈಜಲು ಸುಳ್ಳು ಅನಿವಾರ್ಯ. ಇನ್ನೂ ನ್ಯಾಯಾಲಯದಲ್ಲಿ ನಾವು ಅಪರಾಧಿಗಳಿಗೆ ಪವಿತ್ರ ಗ್ರಂಥಗಳನ್ನು ಮುಟ್ಟಿಸಿ ಅಪಚಾರವೆಸಗುತ್ತಿರುವೆವೇನೋ ? ಯಾಕಂದ್ರ ಅವನ್ನ ಮುಟ್ಟಿದೋರೆಲ್ಲ ಸತ್ಯ ಬಿಟ್ಟು ಎಲ್ಲ ಹೇಳಿರತಾರ. ಅಜ್ಜ ಹಾಕಿದ ಆಲದ ಮರಕ್ಕ ಜೋತು ಬೀಳೋದು ಎಷ್ಟು ದಿನ ? ಸತ್ಯದ ಜಮಾನ ಇಲ್ಲ ಅಂದಮ್ಯಾಲೆ ಏನ ಮುಟ್ಟಿದರ ಏನ ಪ್ರಯೋಜನ. ಕಾಸಿದ ಕಬ್ಬಿಣ ಹಿಡಿದು ಮುಟ್ಟಿ ಹೇಳಂದ್ರ ಈಗಿನ ಕಾಲಕ್ಕ ಸತ್ಯ ಹೊರಗ ಬರಬಹುದೇನೋ ?

ಮದುವೆ ವಿಚಾರದಾಗ ಸುಳ್ಳು ಮುಂದ ಮಾಡಲಿಕ್ಕ ಲೋಕದಾಗ ಕಲ್ಯಾಣ ಕಾರ್ಯಗಳು ನಡಿಯೋದೆ ಇಲ್ಲ ಅನ್ನಿ. ಮಗ ಸಕಲ ಕಲಾವಲ್ಲಭ, ಚಟ ಚಕ್ರಾಧೀಶ್ವರನಾಗಿದ್ರೂ ಸರ್ವಗುಣ ಸಂಪನ್ನನೆಂದೇ ಬಣ್ಣಿಸಬೇಕು. ನಮ್ಮ ಹುಡುಗ/ಹುಡುಗಿಗೆ ಇಂತಹ ವೀಕನೆಸ್ ಅದ ಅಂತ ಹೇಳಿ ಸಂಬಂಧ ಹುಡುಕಾಕ ಪ್ರಯತ್ನಿಸಲಿಕ್ಕೆ ಒಬ್ಬರರ ಮುಂದ ಬರತಾರೇನು ? ಸಾಧ್ಯನ ಇಲ್ಲ. ನನ್ನ ಮಿತ್ರ ಪಾಣಿ ಭೋಜನ ಪ್ರೀಯ. ನೌಕರಿಗಿಂತ ಭಲೋ ಅಡಿಗೆ ಮಾಡಕ ಬರೋ ಕನ್ಯಾ ಬೇಕೆಂದು ಹುಡುಕುತಿದ್ದ, ಅದರ ದುರ್ದೈವಕ್ಕೆ ಕನ್ಯಾ ನೋಡೋ ಸಮಯದಾಗ ಭಾವಿ ಮಾವ ಹೊಟೇಲ್‌ನಿಂದ ತರಿಸಿದ ತಿಂಡಿಗಳನ್ನು ಮಗಳು ಮಾಡಿದ್ದು ಎಂದು ಹೇಳಿದ ಸುಳ್ಳಿಗೆ ಬಲಿಬಿದ್ದ. ಮನಿಗೆ ಹೋದಾಗಲೆಲ್ಲ 'ಪ್ರತ್ಯಕ್ಷ ಕಂಡ್ರು ಪ್ರಮಾಣಿಸಿ ನೋಡಬೇಕು ಅಂತ ಸುಮ್ನ ಹೇಳಿಲ್ಲ ಕಣೋ ದೇಸಾಯಿ' ಅಂತ ಹಾಡಿ ಹಾಡಿ ಅಳತಾ ಈರುಳ್ಳಿ ಹೆಚ್ಚುತಿರುತ್ತಾನೆ. ಮದುವೆ ಅಂದ್ರನೆ ಸುಳ್ಳಿನ ವೈಭವಿಕರಣ, ಸಾವಿರ ಸುಳ್ಳು ಹೇಳಿಯಾದ್ರೂ ಒಂದು ಮದುವೆ ಮಾಡಿ ಅಂತ ಸುಳ್ಳು ಹೆಳ್ಯಾರೇನು ?

ಸಂಸಾರದಾಗು ಎಲ್ಲ ಸತ್ಯ ಹೇಳಕೋತ ಕೂತ್ರ ಅದರಾಗ ಸಾರವ ಉಳಿಯೊದಿಲ್ಲ. ಅವಳು ಅಡಿಗೆ ಹ್ಯಾಂಗರ ಮಾಡಿದ್ರು ಚೆನ್ನಾಗಿದೆ ಅಂತನ ವರ್ಣಿಸಬೇಕು. ಇದ್ದಂಗ ಹೇಳಿ ''ನಿಮ್ಮ ಹಣೆಬರಹನ ಇಷ್ಟು ಹೆಸರಿಡೋದ ಆಯ್ತು. ನಾ ಮಾಡದ ಹಿಂಗ, ಬೇಕಿದ್ರ ತಿನ್ನಿ'' ಅಂತ ಬೈಯಿಸಿಕೊಳ್ಳದಲ್ಲದ ಮರುದಿನ ಇನ್ನೂ ಕೆಟ್ಟದಾಗಿರೋ ಅಡಗಿ ತಿನ್ನಬೇಕಾಗುತ್ತೆ. ನೀವು ಕುಡಿದು ಬಂದ ವಿಚಾರ ಇದ್ದಾಂಗ ಹೇಳಿದ್ರ, ಪಕ್ಕದ ಮನಿಯಾಕಿ ಬಗ್ಗೆ ಹೊಗಳಿದ್ರ, ಕದ್ದು ಮುಚ್ಚಿ ಹೆತ್ತವರಿಗೆ, ಒಡಹುಟ್ಟಿದವರಿಗೆ ಸಹಾಯ ಮಾಡಿದ್ದು ಬಾಯಿಬಿಟ್ರ ನಿಮ್ಮ ಕಾಲಮ್ಯಾಲೆ ನೀವ ಚಪ್ಪಡಿಕಲ್ಲು ಹಾಕಿಕೊಂಡಾಂಗ ಆಗತ್ತ, ಅಷ್ಟ.

ನನಗನಸ್ತದ, ಸುಳ್ಳಿಗೆ ಸಂಜೀವಿನಿ ಗುಣ ಇದೆಯೋ ಏನೋ ? ನೋವು ನಿವಾರಕ ಶಕ್ತಿ ಮಾನಸಿಕ ಬಲ ನೀಡುವ ಶಕ್ತಿ ಖಂಡಿತ ಅದ ಅನಸ್ತೆ. ಮಕ್ಕಳು ದಡ್ಡರಿದ್ದರೂ ನೀನು ಶ್ಯಾಣೆ ಇದ್ದಿ, ನಿನ್ನಿಂದ ಇದು ಸಾಧ್ಯ ಆಗತ್ತ ಅಂತ ಒಂದು ಸುಳ್ಳು ಹೇಳಿ ಅವ ಖಂಡಿತ ಸುಧಾರಸ್ತಾನ. ನಿಮ್ಮ ಹೆಂಡತಿಯರಲ್ಲಿ ಏನೇ ದೋಷಗಳಿದ್ದರೂ

ನಾಲ್ಕು ಜನದಾಗ ಒಳ್ಳೆಯವಳು ಅಂತ ಸರ್ಟಿಫಿಕೇಟ ಕೊಡಿ, ನಿಜವಾಗಲೂ ಅವಳು ಬದಲಾಗುತ್ತಾಳೆ. ಮರಣ ಶಯ್ಯದಲ್ಲಿರೋ ವ್ಯಕ್ತಿಗೆ ವೈದ್ಯರು ನಿನಗೇನು ಆಗಿಲ್ಲ, ಖಂಡಿತ ಆರಾಮ ಆಗ್ತಿರಿ ಅಂತ ಹೇಳಿದ್ರ ಸಾಕು ಅವ ನಾಲ್ಕು ದಿನ ಹೆಚ್ಚಿಗೆ ಬದುಕತಾನ, ಅದೇ ಸುಳ್ಳೆಂಬ ಟಾನಿಕ್‌ನಿಂದ. ಅದು ಬಿಟ್ಟು ಇನ್ನು ಎರಡು ತಾಸಿಗೆ ಗೊಟಕ್ ಅಂತಿಯಾ ಅಂತ ಅನ್ನಲಿ, ಅದ ಚಿಂತ್ಯಾಗ ಅರ್ಧ ಗಂಟ್ಯಾಗ ಸತ್ತು ಹೊಗ್ತಾನ, ಅಲ್ವೇ? ಇವೆಲ್ಲ ನೋಡಿದ್ರ ನನ್ನ ವಿಚಾರ ತಪ್ಪ ಅಂತಿರಾ!

ಸುಳ್ಳಿಗೆ ಏನೆಲ್ಲ ಸಂಜೀವಿನಿ ಗುಣ ಅದಂತ ಹೇಳಿದ್ರು ಜೋತಿಷ್ಯ, ವಾಸ್ತು ಶಾಸ್ತ್ರಕ್ಕೆ ಬಂದಾಗ ಆ ಸುಳ್ಳಿನ ಭಯನ ಹೋಗಲಾಡಿಸೋ ಶಕ್ತಿ ಅದಕ್ಕಿಲ್ಲ ಅಂತನಸ್ತದ. ನಮ್ಮ ಸುಖ ದುಃಖಗಳಿಗೆ ನಾವೇ ಕಾರಣರಾಗಿರತಿವಿ ಅನ್ನೊ ವಿಚಾರ ಮರೆತು ಎಲ್ಲೊ ಇರುವ ದೇವ್ರ ಗ್ರಹಗಳ ಮೇಲಿ ಗೂಬೆ ಕೂರಸ್ತಿವಿ. ಇವತ್ತು ಜ್ಯೋತಿಷಿಗಳು ಎಷ್ಟು ಮಾಡರ್ನ್ ಆಗಿ ಬಿಟ್ಟಾರ ಅಂದ್ರ ಜಾತಕ ನೋಡಿ ಇವರ ಭವಿಷ್ಯದಾಗ ಡಾಕ್ಟರು, ಸಾಫ್ಟ್‌ವೇರ್ ಇಂಜಿನಿಯರ್ರು, ಬಯೋ ಕೆಮಿಸ್ಟು, ಮುಂತಾಗಿ ಆಗುವ ಯೋಗ ಅವ ಅಂತ ಹೇಳತಿರತಾರೆ. ನನ್ನ ಜೋತಿಷ್ಯ ಮಿತ್ರನ ಕೇಳಿದೆ ''ಟೆಕನಿಕಲ್ ಸಾಫ್ಟ್‌ವೇರ್, ಬಯೋ ಕೆಮಿಸ್ಟು ಮೊದಲಾದ ಪದಗಳು ನಿಮ್ಮ ಶಾಸ್ತ್ರದಾಗ ಯಾವಾಗ ಹೊಕ್ಕಂಡವ್ರೋ'' ಎಂದು. ''ಉದರ ನಿಮಿತ್ತಂ ಬಹುಕೃತ ವೇಷಃ' ಕಣಯ್ಯ. ಕಾಲ ಬದಲಾದಂಗ ನಾವು ಬದಲಾಗೋದ ಬೇಡವೆ? ಹಳೆ ಕಂತೆ ಪುರಾಣ ಹೇಳಿದ್ರೆ ಬದುಕು ನಡಿತ್ತೇನಯ್ಯ'' ಎಂದ. ಇವತ್ತು ಸುಳ್ಳು ಜ್ಯೋತಿಷ್ಯ ನಂಬಿ ಅದರ ಹಾದಿಗುಂಟ ನಡೆದು ಇಲ್ಲದ ಕಷ್ಟಗಳನ್ನು ಮ್ಯಾಲೆ ಎಳದುಕೊಳ್ಳತಿವಿ ಅನಸ್ತದ. ದಶಕಗಳ ಹಿಂದಿನ ೧೯೯೯ರಾಗ ಪ್ರಳಯ ಆಗ್ತದ ಅಂದ್ರು. ಮಾಧ್ಯಮಗಳು ವೈಭವಿಕರಿಸಿದ್ದೂ ಆಯ್ತು. ಸುಳ್ಳು ಅಂಬೋದು ಸ್ವಾಮಿಗಳಿಗೆ ಜೋತಿಷಿಗಳಿಗೆ ಬದುಕಾಕ ಹಾದಿ ಆಗ್ಯಾದ. ತಿಂಗಳಾನುಗಟ್ಟಲೆ ಮಳೆ ಬಿದ್ದಿರಲ್ಲ, ಆವಾಗ ಯಾವ ಜೋತಿಷಿ, ಸ್ವಾಮಿಗಳು ಕುಂಯಿಕ್ ಅನ್ನಲ್ಲ, ಅದ ಮಳೆ ಬಂದ ಮ್ಯಾಲೆ ಅಂತವರು ಭವಿಷ್ಯ ಆಗಲೇ ನುಡಿದ್ರು ಇಂತವರು ನುಡಿದಿದ್ರು ಅಂತ ಗುಲ್ಲು ಎಬ್ಬಸ್ತಾರ.

ನಮ್ಮ ಮನುಷ್ಯನ ಗುಣ ಎಂತಹುದು ಅಂದ್ರ ಸತ್ಯನ ಬೇಗ ನಂಬದಿದ್ರು ಸುಳ್ಳನ ಕೂಡಲೇ ನಂಬುತಿವಿ. ಬಲಿಗೆ ಬಿಳತಿವಿ. ಜಾಹಿರಾತುಗಳನ್ನು ನೊಡಿ, ಆರೇ ವಾರಗಳಲ್ಲಿ ನಿಮ್ಮ ಮೈಕಾಂತಿ ಬದಲಾಗುತ್ತೆ ಅಂತ ಸಾಬೂನು, ಸ್ನೋ, ಪೌಡರುಗಳ ಅಡವಿಟೈಜ್‌ಮೆಂಟ್ ಬರತಾವೆ. ಹತ್ತು ವರ್ಷಗಳಿಂದ ನನ್ನವ್ವ ಬಳಿಸ್ತಾನೆ ಇದ್ದಾಳ ಅವೆಲ್ಲವನ್ನು. ಆದರ ಅವಳ ಕಲರ್ ಮಾತ್ರ ಚೆಂಜ್ ಆಗೆ ಇಲ್ಲ. ಅವಳು ಸುಳ್ಳು ಹೇಳತಾ 'ಆ ಕ್ರಿಮ್ ಭಲೋ ಈ ಕ್ರಿಮ್ ಭಲೋ' ಅಂತ ಜೇಬ ಖಾಲಿ ಮಾಡತಾನ ಇರತಾಳ. ಸುಳ್ಳಿನ ಸ್ಫೋಟ ಬಾಂಬಗಿಂತಲೂ ಬಲಶಾಲಿ. ಕ್ಷಣಾರ್ಧದಾಗ ದೇಶವ್ಯಾಪಿ ಪಸರಿಸುತ್ತೆ. ಗಣಪ ಹಾಲು ಕುಡಿತಾನ ಅಂತ ಸುಳ್ಳು ಸುದ್ದಿ ನಂಬಿ ಕ್ಯೂ ನಿಂತು ಗಣಪನಿಗೆ ಹಾಲು ಕುಡಿಸಿ ನನ್ನದು ಕುಡುದ ಅಂತ ಸಂಭ್ರಮಿಸಿದ್ದು ನೆನಪಾದ ತಾನೆ? ಅದು ಯಾಕ್ರಿ, ಕಳೆದ ತಿಂಗಳು ಸಂಭವಿಸಿದ ಗ್ರಹಣದಿಂದ ಮಕ್ಕಳಿಗೆ ಬಲ ಇಲ್ಲ, ಮಲಗಬಾರದು. ಭೂಕಂಪ ಆಗತ್ತ ಅಂತ ಫೋನ್ ಬಂದು ರಾತ್ರಿಯಲ್ಲ ನಿದ್ದಿಗೆಟ್ಟಿದ್ದು ಆಯ್ತಲ್ಲ. ಸಾಯಿಬಾಬಾ ಕಣ್ಣು ತೆರೆದಾನ ಅಂತ ಬೆಂಗಳೂರಿನ ನಗರದ ಮನೆಯೊಂದರಲ್ಲಿ ಸಿಡಿದ ಸುಳ್ಳಿನ ಸ್ಫೋಟಕ ಜನ ನೋಡಾಕ ಮುಗಿಬಿಳಲಿಲ್ಲವೇನು?

ಇರಲಿ ವಿಷಯಾಂತ್ರ ಯಾಕ ಮಾಡೋದು. ಇದುವರೆಗೂ ಸುಳ್ಳಿನ ಸ್ವಾರಸ್ಯಗಳ ಬಗ್ಗೆ ನೋಡಿದಾಯ್ತು.

ಸತ್ಯದಿಂದ ಕಾಪು... ಅಂತ ನಂಬಿಕೊಂಡ್ರೆ ಕೆಲವೊಂದು ವಿಷಯದಾಗ ಆಗುವಂತ ಅನಾಹುತಗಳ ಬಗ್ಗೆ ಪ್ರಸ್ತಾಪಿಸದೆ ಇದ್ರ ನನ್ನ ಪ್ರಬಂಧಕ್ಕ ಸಾರ್ಥಕತೆ ಬರುವುದಿಲ್ಲ ಅನಕೊಂಡಿನಿ.

ನಮ್ಮ ಬಾಸ್ ಒಬ್ಬರಿದ್ರು ಬರಿ ಹೊಗಳಿಸಬೇಕು ಎಂಬ ಬಯಕೆ ಉಳ್ಳೋರು. ಒಮ್ಮೆ ನನ್ನ ಕರದು ''ನನ್ನ ಬಗ್ಗೆ ನನ್ನ ಆಡಳಿತದ ಬಗ್ಗೆ ಏನನಸ್ತದ ಅಂಬೋದನ್ನ ಮುಚ್ಚು ಮರಿಯಿಲ್ಲದ ಹೇಳಬೇಕು, ತಪ್ಪಿದ್ರ ತಿದ್ದುಕೊಂಡು ಇನ್ನು ಆದರ್ಶವ್ಯಕ್ತಿ ಆಗ್ತಿನಿ'' ಅಂದ್ರು. ನಾನು ಸುತ್ತಿ ಬಳಸಿ ಹೇಳಿದೆ ಗುಣಗಾನ ಮಾಡಿದೆ. ''ನೋ ದೇಸಾಯಿ, ನಿಜ ಹೊರಬೇಕು ನ್ಯಾಲಿನ ಮಾತಲ್ಲ'' ಎಂದ್ರು. ಅದ ಕ್ಯಾಸೆಟ್ ಪ್ಲೇ ಮಾಡಿದ್ರ ತಗ್ತಿತ್ತು. ಆದ್ರ ಬುದ್ಧ ಕಲಿಸಾಕ ಸಮೊಬದ ಮಾರ್ಗ ಅದು ''ಸಾರ್, ತಾವು ಮುಂಗೋಪಿಗಳು, ಯಾರನ್ನೂ ವಿಶ್ವಾಸಕ್ಕೆ ತೆಗೆದುಕೊಳ್ಳದವರು, ಇನ್ನೊಬ್ಬರ ವಿಚಾರವನ್ನು ಕೇಳದವರು, ಕೆಲಸ ಮಾಡದ ಹೆಸರು ಪಡಿಬೇಕೆನ್ನೋರು'' ಅಂತ ಇದ್ದ ಅಭಿಪ್ರಾಯ ಹೇಳಿದಾಗ ನೋಡಿ ನಖಶಿಖಾಂತ ಉರಿದು ಹೋಗಿಬಿಟ್ರು. ಬಾಸು ಅವರು ಇರೋತನಕ ಆಫಿಸಿನಾಗ ಉಸಿರಾಡದಂತಹ ವಾತಾವರಣ ನನ್ನ ಪಾಲಿಗೆ ನಿರ್ಮಾಣ ಆಗಿಬಿಟ್ಟಿತ್ತು.

ಬಾಲ್ಯದಾಗಿನ ಕಥಿ ಕೇಳ್ರಿ. ಗೆಳೆಯನೋರ್ವನ ಹಣವನ್ನು ಒಬ್ಬ ಕದ್ದಿದ್ದ, ನಾನು ನೋಡಿದ್ದೆ. ಮೇಷ್ಟ್ರು ಹತ್ತಿರ ಕಂಪ್ಲೇಂಟ ಹೋಯ್ತು. ಅವರು ಬಂದು ವಿಚಾರಿಸಿದ್ರು. ಸತ್ಯ ಹೊರಬರಲಿಲ್ಲ. ಕೊನೆಗೆ ಸತ್ಯದ ಮಹತ್ವ ತಿಳಿಸಿಕೊಟ್ಟು ''ಕದ್ದಿದ್ದನ್ನು ನೋಡಿದವರ್‍ಯಾರಾದರೂ ಇದ್ರೆ ಹೇಳಿ ಗೊತ್ತಿದ್ದೂ ಹಾಗೆ ಕೂಡುವುದು ಅಪರಾಧ'' ಎಂದು ನುಡಿದಾಗ ಏನೋ ಧೈರ್ಯ ಬಂದಂತಾಗಿ ಎದ್ದು ನಿಂತು ಸತ್ಯ ಹೇಳಿದೆ. ಆ ಮೇಷ್ಟ್ರು ಕಾಲರ್ ಪಟ್ಟಿ ಹಿಡಿದು ಎಳೆದು ''ಲೇ ಮಗನ, ಇಷ್ಟೋತ್ತನ ಹೇಳಲೇ ಅಂತ ಹೊಯ್ಕೋತಿದೆ, ನಿನಗ ಗೊತ್ತಿದ್ದೂ ಕಲ್ಲು ಕುಂತಂಗ ಕುಂತಿದ್ಯಾ. ಮೊದಲ ಹೇಳಾಕ ಏನಾಗಿತ್ತೊ ಕೆಟ್ಟಬ್ಯಾನಿ'' ಅಂತ ಜಗಿದು ಗುಮ್ಮಿದ ಆ ಹೊಡೆತ ಇನ್ನು ನೆನಪದ. ಶಾಲಿಬಿಟ್ಟ ಮ್ಯಾಲೆ ಕಳವು ಮಾಡಿದವ ಪ್ರತ್ಯೇಕ ಯೋಗಕ್ಷೇಮ ವಿಚಾರಿಸಿದ್ದು ಸ್ಮರಣೆಯಲ್ಲಿ ಹಾಂಗ ಅದ.

ಒಮ್ಮೆ ಯಾವುದೊ ಕೆಲಸಕ್ಕ ಕಂದಾಯ ಇಲಾಖೆಗೆ ಹೋಗಿದ್ದೆ. ಆ ಇಲಾಖೆಸ ಅಂತಹದ್ದು, ಪ್ರತಿ ಟೇಬಲ್ಲಿಗೂ ಕಂದಾಯ ಕಟ್ಟದಿದ್ರ ನಡಿಯೋದೆ ಇಲ್ಲ, ಕೆಲಸ ಬೇಗ ಆಗಬೇಕಿತ್ತು, ಗುಮಾಸ್ತ ಇಷ್ಟಂತ ಡಿಮ್ಯಾಂಡು ಮಾಡಿದ. ಫೈಲ್ ಮೂವ್ ಮಾಡಕ. ಚೌಕಾಸಿ ಮಾಡಿ ಒಂದು ರೇಟು ಫಿಕ್ಸ ಮಾಡಿದೆ. 'ಈ ವಿಷಯನ್ನ ಸಾಹೇಬ್ರ ಮುಂದೆ ಹೇಳಬ್ಯಾಡ್ರಿ, ಹೇಳಿದ್ರು ಕಡಿಮಿ ಹೇಳಿ' ಎಂದ. ಇದ್ದ ವಿಷಯನ ಹೇಳಕ ಮುಚ್ಚು ಮರಿಯಾಕ ಅಂತ ಅಧಿಕಾರಿ ಟೇಬಲ್ಲಿಗೆ ಹೋದಾಗ ಅವರು ಕೇಳಿದೊಡನೆ ಹೇಳಿದೆ. ಅವರು ಅದರ ಹತ್ತುಪಟ್ಟು ಡಿಮ್ಯಾಂಡು ಮಾಡಿದ್ರು, ನನ್ನ ಯಾವ ವಿನಂತಿಗೂ ಜಗ್ಗಲಿಲ್ಲ, ತೆತ್ತು ಬೆವರು ವರಿಸಿಕೊಂಡು ಹೊರಗೆ ಬಂದಾಗ ಆ ಗುಮಾಸ್ತ ನನ್ನ ನೋಡಿ ಮುಸಿ ಮುಸಿ ನಗುತ್ತಿದ್ದ.

ಇವೆಲ್ಲ ನೋಡಿದ್ರ ಸಾಂಧರ್ಭಿಕವಾಗಿ ಸುಳ್ಳು ಹೇಳಿದ್ರ ತಪ್ಪಿಲ್ಲ ಅಂತ ಅನಸತ್ತೆ! ಈ ಕಲಿಯುಗದಾಗ 'ನಾನು ಸತ್ಯಸಂಧ' ಅಂತ ಎದೆತಟ್ಟಿಕೊಂಡು ಹೇಳುವವರಿಂದಲೂ ಸುಳ್ಳು ನುಡಿಸಾಕ ವಿಶ್ವಾಮಿತ್ರ ನೆಂಬ ಮೊಬೈಲನ ಪ್ರವೇಶ ಆಗ್ಯಾದ. ಮೊಬೈಲನಲ್ಲಿ ಪ್ರತಿಶತ ನಾವು ಮಾತಾಡೋದು ಏನು? ಮನೆಯಲ್ಲಿದ್ರು ಮೀಟಂಗ್‌ನಲ್ಲಾಂತನೊ, ಊರಲ್ಲಿದ್ರು ಬೇರೆ ಊರಲ್ಲಿ ಅಂತಾನೊ, ಹೀಗೆ ಸುಳ್ಳು ಹೇಳಿ ತಪ್ಪಿಸಿಕೊಳ್ಳಾಕ ಸಾಧನ ಆಗಿದೆ ತಾನೆ. ಮೊಬೈಲನಲ್ಲಿ ನಡಿಯೋ ಸುಳ್ಳಿನ ಅವಾಂತರನ ನೋಡಿ ''ಆ ಕಾಲಕ್ಕ ಹರಿಶ್ಚಂದ್ರನ ತಡುವಿಕೊಂಡ ಕೆಟ್ಟನೇನೊ'' ಅಂತ ವಿಶ್ವಾಮಿತ್ರ ಕೈ ಕೈ ಹಿಚಗೊಂಡಿತಿರಬಹುದೇನೋ? ಅಲ್ವೆ!

'ಸತ್ಯಂ ಬ್ರೂಯಾತ್ ಪ್ರಿಯಂಬ್ರೂಯಾತ್ ನ ಬ್ರೂಯಾತ್ ಸತ್ಯಮಪ್ರಿಯಮ್' ಅಂತ ಸೂಕ್ತಿಯೊಂದಿದೆ. ವಾಲ್ಮೀಕೀದು. ಸತ್ಯವನ್ನು ಹೇಳಬೇಕು ಅಂತ ಮುಂತಾಗಿ ಹೇಳತಾ ಸತ್ಯವಾದರೂ ಅಪ್ರಿಯವಾದದ್ದನ್ನು ಹೇಳಬಾರದು ಎಂದಿದೆ. ಇದರರ್ಥ ಪ್ರಿಯವಾದ ಸುಳ್ಳನ್ನು ಹೇಳಬೇಕು ಎಂದು ಕಲ್ಪಿಸಿಕೊಳ್ಳಬಹುದಲ್ಲವೆ. ಊಹ್ಞುಂ ಎಂತಾನೆ ವಾಲ್ಮೀಕಿ. ನಾವ್ಯಾರು ಸುಳ್ಳನ್ನು ಆರಾಧಿಸಬೇಕೆಂದು ಇಷ್ಟಪಟ್ಟರೋಲ್ಲ, ಯಾರೋ ಕೆಲಸ ಹೇಳಿರತಾರೆ. ಮಾಡಿರಲ್ಲ ಅಥವಾ ಬೇಜಾರು ಪಟ್ಟುಕೊಂಡಾರು ಅಂತಾನೆ ಅವರಿಗೆ ತೃಪ್ತಿಪಡಿಸಲು ಪ್ರಿಯವಾದ ಸುಳ್ಳನ್ನು ಹೇಳತಿವಷ್ಟೆ. ಸುಳ್ಳಿನ ಉಗಮ ಆಗೋದೆ ಹೀಗೆ. ಸುಳ್ಳು ನೋವಿಗೆ ಉಪಶಮಿಸುವ ಮದ್ದಾಗಬೇಕೆ ಹೊರತು ಅದೇ ಆಹಾರವಾಗಬಾರದು. ಅತಿಯಾದ್ರ ಅಮೃತ ಕೂಡ ವಿಷವಂತೆ. ''ಹುಲಿ ಬಂತು'' ಅಂತ ಸುಳ್ಳೆ ಬೊಬ್ಬೆಹಾಕಿ ಕೂಗಿ ಜನರನ್ನು ಮೂರ್ಖರನ್ನಾಗಿಸುತ್ತಿದ್ದ ಕುರಿಗಾಹಿಯ ಕಥೆ ಕೇಳಬೇಕಲ್ಲ, ಅತಿಯಾದ್ರ ಕುರಿಗಾಹಿ ಹುಲಿಗೆ ಬಲಿಯಾದಂತೆ ನಾವುಗಳು ಬುರುಡೆ ಬಸಣ್ಣ, ರೈಲು ಬಿಡೋ ರಾಮಣ್ಣ ಅನ್ನೋ ಮೊದಲಾದ ನಿಕ್‌ನೇಮಗಳನ್ನು ಪಡಿಯಬೇಕಾಗುತ್ತೆ. ಇತ್ತೀಚಿಗೆ ವಕ್ರತುಂಡೋಕ್ತಿಯೊಂದನ್ನು ಓದಿದೆ. 'ಜಗತ್ತಿನಲ್ಲಿ ಸತ್ಯದಷ್ಟು ಅಮೂಲ್ಯ, ಅಪರೂಪವಾದದ್ದು ಮತ್ತೊಂದಿಲ್ಲ. ಅದಕ ಅದನ್ನು ಮಿತವಾಗಿ ಬಳಸಿ' ಅಂತ. ಖರೆವನ ಅದರಂಗ ನಡಕೊತಿವಿ ಅಲ್ವೆ? ಈ ಪ್ರಬಂಧ ಓದತಾ ಸುಳ್ಳಿನ ಈ ಸತ್ಯವನ್ನು ಸುಳ್ಳೆಂದು ಸುಮ್ಮನ ಕೈಬಿಡಲ್ಲಾ ತಾನೆ?

ಗುಂಡುರಾವ್ ದೇಸಾಯಿ ಮಸ್ಕಿ
ಕೇರಿನ ಹತ್ತಿರ, ಮಸ್ಕಿ - ೫೮೪೧೨೪ ಜಿ: ರಾಯಚೂರು

# ದಯಾನಂದನ ರಸಾಯಣ

**ಈ**ಗ ಅವನೆಲ್ಲಿದ್ದಾನೋ, ಗೊತ್ತಿಲ್ಲ. ನನ್ನ ನೆನಪಲ್ಲಿ ಮಾತ್ರ ಬಟ್ಟೆ ಮೇಲಿನ ಕರೆಯಂತೆ ಅಂಟಿಹೋಗಿದ್ದಾನೆ. ಮತ್ತೆ ನೋಡಲೆಂದೇ ನಾನು ಹಲವು ಸಲ ಅವನನ್ನು ಹುಡುಕಿಕೊಂಡು ಆ ಊರಿಗೆ ಹೋಗಿದ್ದಿದೆ. ಅವನಾಗಲಿ, ಅವನ ಕೆಂಪಂಚಿನ ಮನೆಯ ತಲೆಯಾಗಲಿ, ಎರಡೂ ನನಗೆ ಸಿಗಲಿಲ್ಲ. ಈಗ ಮೂವತ್ಮೂರು ವರ್ಷಗಳೇ ಸದ್ದಿಲ್ಲದೆ ಸರಿದುಹೋಗಿವೆ. ಊರು ಹಳೆ ಮುಖ ಬಿಚ್ಚಿಟ್ಟು ಹೊಸ ಥರವಾಗಿದೆ. ಆ ಮಣ್ಣಿನ ರಸ್ತೆಗಳ ಒರೆ-ಕೋರೆಗಳ ತಿದ್ದಿ ಯಾರೋ ರಿಪೇರಿ ಮಾಡಿ ಟಾರು ಸುರಿದಿದ್ದಾರೆ. ಈಗಿನ ಕಪ್ಪುದಾರಿ ಹಿಡಿದು ಹೋದರೆ ಅವನ ಮನೆ ನನಗೆ ಸಿಗುವುದೇ ಇಲ್ಲ. ಹಳೆಯ ಸಣ್ಣ ದಾರಿಗಳೆಲ್ಲಾ ಪೂರ್ತಿ ಅಳಿಸಿಹೋಗಿವೆ. ಹೀಗಾಗಿ, ಅವನ ನೆನಪಲ್ಲೇ ಮತ್ತೆ ಬೇಸರದಿಂದ ಹಿಂತಿರುಗುತ್ತಿದ್ದೇನೆ.



ಅವನ ಮನೆ ಹಿಂದೆ ರೈಲು ನಿಲ್ದಾಣವಿದೆ. ಅದೊಂದು ದೊಡ್ಡ ರೈಲ್ವೆ ಜಂಕ್ಷನ್. ದಿನಾ ರಾತ್ರಿ ಅಲ್ಲಿ ಬಿಡುವಿಲ್ಲದೆ ರೈಲುಗಳು ಓಡಾಡುತ್ತಿವೆ. ನಾನು ಬಹಳ ಸಲ ಇದೇ ದಾರಿಯಲ್ಲಿ ತಿರುಗಾಡಿದ್ದೇನೆ. ಇವತ್ತಿಗೂ ಬೀರೂರು ಬಂತೆಂದರೆ ನನ್ನ ಕಣ್ಣುಗಳು ಅವನಿದ್ದ ಮನೆಯ ಕಡೆಗೆ ಓಡುತ್ತವೆ. ಎಷ್ಟೋ ಸಲ ಹಸಿವಿನಿಂದ ಕಂಗಾಲಾದ ನಾವು ಅದೇ ರೈಲು ನಿಲ್ದಾಣದ ನಲ್ಲಿಯಲ್ಲಿ ನೀರು ಕುಡಿದು ಆಟವಾಡಿದ್ದೇವೆ. ಸ್ಟೇಶನ್ ಮಾಸ್ಟರರಿಂದ ನೂರಕ್ಕೂ ಹೆಚ್ಚು ಸಲ ಬೈಗುಳ, ಹೊಡೆತ ತಿಂದಿದ್ದೇವೆ. ಯಾರು ಎಷ್ಟೇ ಬೈದರೂ, ಕ್ಲಾಸಿಗೆ ಚಕ್ಕರ್ ಕುಕ್ಕಿದಾಗ ನಾವಲ್ಲಿ ಹಾಜರಾಗಿದ್ದಿದೆ. ರೈಲಿನಲ್ಲಿ ಓಡಾಡುವ ಶ್ರೀಮಂತ ಜನ ಅರ್ಧಂಬರ್ಧ ತಿಂದು ಬಿಸಾಡಿದ ತಿಂಡಿ ಕವರುಗಳ ಆಯ್ದು ಹಂಚಿಕೊಂಡು ತಿಂದಿದ್ದೇ ಹಬ್ಬ. ಎಕ್ಸ್‌ಪ್ರೆಸ್ ರೈಲು ಬಂದಾಗ ಇಂಥ ತಿಂಡಿಗಳು ಖಾಯಂ ಆಗಿ ಸಿಗುವುವು. ಲೋಕಲ್ ರೈಲಿನ ಜನರ ಹತ್ತಿರ ಹೋಗಿ, ಅವರು ತಿನ್ನುವುದನ್ನೇ, ಬಹಳ ಹೊತ್ತು ದುರುಗುಟ್ಟಿಕೊಂಡು ನೋಡಿದಾಗ ಮಾತ್ರ ಅವರು ಕರುಣಿಸಿ ಅಷ್ಟಿಷ್ಟು ಕೊಟ್ಟಿದ್ದಿದೆ. ಇದೆಲ್ಲಾ ಅಲ್ಲಿ ನಿಂತಾಗ ಇಂದಿಗೂ ನೆನಪಾಗುವುದು. ಕೊನೆಗೊಂದು ಬೇಸರದ ನಿಟ್ಟುಸಿರು ಬಿಸಾಡಿ, ಅಲ್ಲಿಂದ ಹಿಂತಿರುಗುತ್ತೇನೆ. ಕ್ಷಣಕಾಲ ಸುಮ್ಮನಾಗುತ್ತೇನೆ. ಅವನು ನೆನಪಿಂದ ಮರೆಯಲಾಗುತ್ತಿಲ್ಲ. ಅವನ ಮರೆಯಲಾಗುತ್ತಿಲ್ಲ. ಯಾಕೆ ಹೀಗೆ ಕಾಡಿಸಿ ಕೊಲ್ಲುತ್ತಾನೋ ಗೊತ್ತಿಲ್ಲ. ಅವನೇ ನನ್ನ ಬಾಲ್ಯದ ಗೆಳೆಯ ದಯಾನಂದ.

ಎಳೆದು ಹಿಂಡಿದ ಗಿಣಿ ಮೂಗು. ಅದನ್ನು ಒತ್ತುವರಿ ಮಾಡಿಕೊಂಡ ತೆರೆದ ಕಾಲುವೆಯಾಕಾರದ ಎರಡು ಭಯಾನಕ ಬಂದೂಕಿನ ನಳಿಕೆಗಳು. ಅವನ ಮೂಗು ಅದು ತಾನು ಜನಿಸಿದಾರಂಭ ಕಾಲದಿಂದಲೂ ಸೋರುತ್ತಲೇ ಹುಟ್ಟಿದಂತಿತ್ತು. ಅದು ಯಾವತ್ತೂ ಬಂದ್ ಆಗಿದ್ದಾಗಲೀ, ನಮ್ಮ ಜೇಸಿಗೆ ನಾಲೆಗಳಂತೆ ಒಣಗಿದ್ದಾಗಲೀ ನಾನಂತೂ ನೋಡಲಿಲ್ಲ. ಅದು, ತನಗಾಗಿ ಅವರೆಕಾಯಿ ಹಸಿರುಹುಳದ ಗಾತ್ರದ ಎರಡು ಚೈತನ್ಯಶೀಲ ಸರಿದಾಡುವ

ಕಲೀಮ ಉಲ್ಲಾ

ರಸಾಯಣಗಳನ್ನು ಸಾಕಿಕೊಂಡಿತ್ತು. ದಯಾ ತನ್ನ ಪ್ರತೀ ಮಾತಿನ ನಡುವೆ ಮಾತು ನಿಲ್ಲಿಸಿ, ಮೌನವಾಗಿ ಅವನ ಅನುಮತಿ ಮೀರಿ, ಭೂಮಿಕಡೆಗೆ ಚಲಿಸುವ ಆ ರಸಾಯಣಗಳನ್ನು ಹಿಡಿದುಹಾಕುತ್ತಿದ್ದ. ಮತ್ತೆ ತನ್ನ ಮೂಗಿನ ತೆಕ್ಕೆಯೊಳಗೆ ಸೇರಿಕೊಳ್ಳಲು ಆಜ್ಞಾಪಿಸುತ್ತಿದ್ದ. ಆದರವು, ಇವನ ಕಟ್ಟಾಜ್ಞೆಗಳಿಂದ ತಪ್ಪಿಸಿಕೊಂಡು ಸರ್ವ ಸ್ವತಂತ್ರವಾಗಿದ್ದವು. ಒಂಥರ ಪೂರಾ ಕಂಟ್ರೋಲು ತಪ್ಪಿದ್ದವು ಅಂದುಕೊಳ್ಳಿ. ಇಲ್ಲ, ಅವುಗಳ ಮೇಲೆ ತನಗೆ ಸಂಪೂರ್ಣ ಹಿಡಿತವಿದೆ ಎಂದು ತೋರಿಸಿಕೊಳ್ಳುವ ವ್ಯರ್ಥಪ್ರಯತ್ನವೊಂದನ್ನು ದಯಾ ನಮ್ಮೆಲ್ಲರೆದುರು ಮಾಡುತ್ತಿದ್ದ ಎಂದಾದರೂ ಭಾವಿಸಿಕೊಳ್ಳಿ.

ನಮ್ಮದು ಪಕ್ಕಾ ಸರ್ಕಾರಿ ಶಾಲೆ. ಹೀಗಾಗಿ, ಕ್ಲಾಸಿಗೆ ಸಂಬಂಧಪಟ್ಟ ಟೀಚರ್‌ಗಳ್ಯಾರೂ, ತಮ್ಮ ಟೈಮಿಗೆ ತಾವು ಸರಿಯಾಗಿ ಬರುತ್ತಿದ್ದುದೇ ಅಪರೂಪ. ಅವರಿಗೆ ಏನೇನು ಕೆಲಸಗಳಿರುತ್ತಿದ್ದವೋ, ಏನೋ ? ದಿನಾ ಲೇಟಾಗಿ ಬಂದು ಒಬ್ಬರಲ್ಲ ಒಬ್ಬರು ಹೆಡ್ಮೇಷ್ಟ್ರು ಹತ್ರ ಬರೋಬ್ಬರಿ ಒಂದು ಗಂಟೆ ಜಗಳವಾಡುತ್ತಿದ್ದರು. ಮೇಲಾಗಿ ಅವರು ಕರೆಕ್ಟ್ ಟೈಮಿಗೆ ಬರುವುದು ನಮಗೂ ಸುತರಾಂ ಇಷ್ಟವಿರುತ್ತಿರಲಿಲ್ಲ. ಅದೇ ಸುಸಂದರ್ಭವೆಂದು ನಾವೆಲ್ಲ ಯರ್‍ರಾಬಿರ್‍ರಿ ಕುಣಿದಾಡಿ, ಎಳೆದಾಡಿ, ಹೊಡೆದಾಡಿ, ಅಬ್ಬಬ್ಬೋ, ಎಂದು ಕಂಠ ಕಿತ್ತುಬರುವಷ್ಟು ಜೋರಾಗಿ ಹೂಳಿಡುತ್ತಿದ್ದವು. ನಮ್ಮ ಗೌರವಾನ್ವಿತ ಗಂಟಲ ಅರಚಾಟಕ್ಕೆ ಶಾಲೆಯ ಕೆಂಪು ಹಂಚುಗಳು ಎದ್ದೆದ್ದು ಕುಣಿಯುತ್ತಿದ್ದವು. ಅಲ್ಲಿಂದ ಸದ್ದು ಕಿತ್ತುಕೊಂಡು ಓಡಿ ಹೋಗಿ, ಹೆಡ್ಮೇಷ್ಟ್ರ ಕಿವಿಯ ತಮಟೆಯ ಮೇಲೆ ಬಿದ್ದು ಚಾಡಿಯಾಗಿ ಬೀಳುತ್ತಿತ್ತು.

ಆಗವರು ಕುಂತಲ್ಲಿಂದಲೇ ಸುಲಿದಾಡಿ ತಮ್ಮ ಬಾಂಡ್ಲಿ ತಲೆಯನ್ನು ರಪರಪ ಕೆರೆದುಕೊಂಡು ಕಂಗಾಲಾಗಿ ಊಳಿಡುತ್ತಿದ್ದರು. ತಕ್ಷಣಕ್ಕೆ ಎದ್ದುಬರುವ ಚೈತನ್ಯವನ್ನು ಕಳೆದುಕೊಂಡಿದ್ದ ಅವರ ವಯಸ್ಸಾದ ದೇಹ ಕುರ್ಚಿಯಲ್ಲೇ ಒದ್ದಾಡುತ್ತಿತ್ತು. ಅವರು ತಮ್ಮ ಆಫೀಸ್ ರೂಮು ಬಿಟ್ಟು ಎದ್ದು ಓಡಾಡಿದನ್ನು ನಾವೆಲ್ಲ ನೋಡಿದ್ದೇ ಕಡಿಮೆ. ಬಂದವರು ಕುರ್ಚಿಗೆ ಅಂಟಿಕೊಂಡರೆ ಎದ್ದು ಹೋಗುತ್ತಿದ್ದದ್ದು ಪ್ರಾಯಶಃ ಕೊನೇ ಬೆಲ್ಲು ಕುಕ್ಕಿದಾಗಲೇ ಇರಬೇಕು. ಆ ಕೊನೇ ಬೆಲ್ಲಿನ ತನಕ ನಾನು ದಯಾ ಇರುತ್ತಲೇ ಇರಲಿಲ್ಲ. ಬೆಳಗ್ಗೆ ನಾವು ಬರುವ ಮೊದಲೇ ಅವರು ಬಂದಿರುತ್ತಿದ್ದರು. ಮಾಮೂಲಿಯಾಗಿ ನಮಗಿಬ್ಬರಿಗೂ ಏಟು, ಲೇಟಾಗಿ ಬಂದಿದ್ದಕ್ಕೆ. ರೂಲು ದೊಣ್ಣೆಯಲ್ಲಿ ಆಫೀಸ್ ರೂಮಿಗೇ ಕರೆಸಿ ಔಟ್-ಬೈಸ್ ತೆಗೆಸುತ್ತಿದ್ದರು. ಹೀಗಾಗಿ, ಅವರು ಎದ್ದು ದೈಹಿಕವಾಗಿ ಓಡಾಡಿದ್ದನ್ನು ಅಕ್ಷರಶಃ ನೋಡದೇ ಇದ್ದ ನಾನು ದಯಾ ಅವರು ಅಲ್ಲೇ ಹುಟ್ಟಿ, ಅದೇ ಕುರ್ಚಿಗೆ ಅಂಟಿಕೊಂಡೇ ಬೆಳೆದು, ಅಲ್ಲೇ ಹಣ್ಣಾಗಿದ್ದಾರೆ, ಅವರನ್ನ ಅಲ್ಲಿಂದ ಬಿಡಿಸೋಕ್ಕೆ ದೇವರೇ ಬಂದ್ರೂ ಆಗಲ್ಲ ಕಣೋ ಎಂದು ಮಾತಾಡಿಕೊಳ್ಳುತ್ತಿದ್ದೆವು. ಈ ರಹಸ್ಯ ಕಂಡುಹಿಡಿದ ನಾವು 'ಯಾರಿಗೂ ಹೇಳಬೇಡಿ ಕಣ್ರೋ' ಎಂದು ಅಂಗೈ

ಪ್ರಾಮಿಸ್ ಪಡೆದುಕೊಂಡು ನಮ್ಮ ಬೆಂಚಿನ ಎಲ್ಲಾ ಹುಡುಗರಿಗೂ ಹೇಳಿಕೊಂಡಿದ್ದೆವು. ಹೆಡ್ಮೇಷ್ಟ್ರೆಂದರೆ ಹೆದರಿ ಉಚ್ಚೆ ಹುಯ್ಯಿಕೊಳ್ಳುತ್ತಿದ್ದ ನಮ್ಮ ಬೆಂಚಿನ ಹುಡುಗರ್ಯಾರೂ ಈ ಬಗ್ಗೆ ಎಲ್ಲಿಯೂ ಕುಟಿ ಪಿಟಿಕ್ ಎನ್ನಲಿಲ್ಲ.

ಆ ಕ್ಲಾಸಿನ ಕೂಗಾಟ ನಡೆಯುವ ಕ್ಷಣ ಅವರ ಅಸ್ತಮಕ್ಕೆ ಜೀವ ಬಂದು ಅದೂ, ಗುಬ್ ಗುಬ್ ಎಂದು ಮುಲುಕಿಕೊಳ್ಳುವುದು. ಅದೇ ಜೋಸರದಲ್ಲಿ ಬೆಲ್ಲಿನ ಹಣೆ ಮೇಲೆ ಕುಕ್ಕಿ, ''ಲೋ ಆ ಗೊಣ್ಣೆ ದಯಾನಂದನ ಕ್ಲಾಸಲ್ಲಿ ಇರೋ ಎಲ್ಲಾ ಮುಂಡೇವು ಬೊಂಬಾಡ ಬಡ್ಕೋತಾ ಆದಾವೆ. ಯಾವ ಮೇಷ್ಟ್ರು ಇಲ್ಲವೇನಯ್ಯ ಅಲ್ಲಿ. ಆ ಸೂ... ಮಕ್ಕಳ ಬಾಯಿಗೆ ಬೀಗ ಜಡಿಯೋಕೆ? ಆ ಸೆಕ್ಷನ್ನೋರು ಯಾರಾದ್ರು ಬರ್ರೋ ಬೇಗ, ಲೇ ಹಡಬೆ ನನ ಮಕ್ಕಳಾ! ಥೂ... ಎಲ್ಲಾ ಸತ್‌ಗಿತ್ ಹೋದ್ರೇನೋ? ಈ ರೈಲ್ವೆ ಹಳಿ ಪಕ್ಕ ಅದ್ಯಾವ್ ತಲೆ ಕೆಟ್ಟ ಇಂಗ್ಲೀಷ್ ನನ್ಮಗ ಶಾಲೆ ಕಟ್ಟಸಿದ್ನೋ ಏನೋ? ಆ ಕಡೆ ರೈಲ್ವೆ ಇಂಜಿನ್ ಶಬ್ದ, ಈ ಕಡೆ ಈ ಕತ್ತೆ ನನ್ಮಕ್ಕಳ ಅರಚಾಟ'' ಎಂದು ಗೊಣಗಿಕೊಳ್ಳುವರು. ನಮ್ಮ ಸೆಕ್ಷನ್ನಿನಲ್ಲಿ ಗಲಾಟೆ ಆದಾಗೆಲ್ಲಾ, ಅದು ಮೂರನೇ ಕ್ಲಾಸ್ ಬಿ ಸೆಕ್ಷನ್ ಗಲಾಟೆ ಅನ್ನುವ ಬದಲಿಗೆ, ಆ ಗೊಣ್ಣೆ ದಯಾನಂದನ ಕ್ಲಾಸ್‌ನಲ್ಲಿ ಗಲಾಟೆ ಆಗ್ತಿದೆ ನೋಡ್ರೋ ಅಂತ ಕರೆಸಿಕೊಳ್ಳೋ ಮಟ್ಟಿಗೆ ನಮ್ಮ ಸೆಕ್ಷನ್ ಪ್ರಸಿದ್ಧವಾಗಿತ್ತು. ನಮ್ಮ ದಯಾನಂದ ತನ್ನ ಗೊಣ್ಣೆ ಸಾಕಾಣಿಕೆ ಕಾರಣದಿಂದಲೇ ಹೀಗೆ ಕುಪ್ರಸಿದ್ಧನಾಗಿದ್ದ. ಪ್ರಪಂಚದಲ್ಲಿ ಜನ ಸುಪ್ರಸಿದ್ಧರಾಗಲು ಏನೇನೋ ಸಾಹಸ ಮಾಡ್ತಾರೆ. ಆದರೆ ಇಂಥ ಯಾವ ಶ್ರಮ ಸಾಹಸಗಳೂ ಇಲ್ಲದೆ, ದಯಾ ತನ್ನ ಮೂಗಿನ ಪ್ರಾಕೃತಿಕ ನಡವಳಿಕೆಯಿಂದಲೇ ಯಶಸ್ಸಿನ ಶೃಂಗವನ್ನೇರಿದ್ದ. ಅಷ್ಟೇ ಜನಪ್ರಿಯನಾಗಿದ್ದ.

ಹೆಡ್ಮೇಷ್ಟ್ರು ನರ ಕಿತ್ತುಹೋಗುವಂತೆ ''ಯಾರಾದ್ರು ಬರ್ರೋ ಬೇಗ'' ಅನ್ನೋದೊಂದು ಶಬ್ದ ಕಿವಿಗೆ ಬಿದ್ದ ತಕ್ಷಣಕ್ಕೆ ಎದ್ದು ನೆಗರಿ ನೆಗರಿ ಓಡಿಹೋಗಲು ಸಜ್ಜನರ ಮಕ್ಕಳ ಗುಂಪೊಂದು ನಮ್ಮ ಸೆಕ್ಷನ್ನಿನಲ್ಲಿ ಸದಾ ರೆಡಿಯಾಗಿರುತ್ತಿತ್ತು. ಇವೆಲ್ಲಾ ಸದಾ ಹೆಡ್ಮೇಷ್ಟ್ರು ದನಿ ಬರುವ ದಿಕ್ಕಿನ ಕಡೆಗೇ ಕಿವಿಗಳ ನಾಟ ಮಾಡಿಕೊಂಡು ಬಾಗಿಲ ಬಳಿಯಲ್ಲಿ ಹಾವು ಹೊಡೆದಿರುತ್ತಿದ್ದವು. ಅವರಿಗೆ ಹೀಗೆ ಹೆಡ್ಮೇಷ್ಟ್ರು ಆಗಾಗ ಕರೆಯುವುದು, ಇವರಲ್ಲಿ ಪ್ರತ್ಯಕ್ಷರಾಗಿ ಅಲ್ಲಿನ ರಾಜಾಜ್ಞೆಯನ್ನು ಕ್ಲಾಸಿನಲ್ಲಿ ತಂದು ಅಷ್ಟೇ ಅಧಿಕಾರ ವಾಣಿಯಿಂದ ಬಿತ್ತರಿಸುವುದು ನಡೆಯುತ್ತಲೇ ಇತ್ತು. ಅವರಿಗೆ ಬಹಳವೇ ಪ್ರತಿಷ್ಠೆಯ ಕೆಲಸವೂ ಎನಿಸಿತ್ತು.

ಮಾನವಂತರ ಮಕ್ಕಳಾದ ಇವು ದಿನಾ ತಪ್ಪದೆ ಒಗೆದ ಬಟ್ಟೆಗಳ ಇಕ್ಕಿಕೊಂಡು, ದಿನಾ ಸ್ನಾನ ಮಾಡಿ, ಗರಿಗರಿಯಾಗಿ ಬರುತ್ತಿದ್ದವು. ಹೀಗಾಗಿ, ಅವರಿಗೇ ವಿಶೇಷವಾದ ಮಾನ, ಮರ್ಯಾದೆ, ಗೌರವಗಳು ಪ್ರಾಪ್ತವಾಗಿದ್ದವು. ಇವರು ನಮಗಿಂತ ಓದಿನಲ್ಲಿ, ಕಂಠಪಾಠದಲ್ಲಿ, ಮಗ್ಗಿ ಒಪ್ಪಿಸುವುದರಲ್ಲಿ ಗಟ್ಟಿಮುಟ್ಟಾಗಿದ್ದವಷ್ಟೇ ಹೊರತು ರಟ್ಟೆ-ಮುಷ್ಟಿಗಳಲ್ಲಿ ಹುಲ್ಲು ಎಂದರೂ, ಏನೂ ಇರಲಿಲ್ಲ. ಬಿದ್ದು ಮಂಡಿ-ಮೂಗು ಕಿತ್ತುಕೊಳ್ಳುವುದರಲ್ಲಿ, ಅವಕಾಶ ಸಿಕ್ಕಾಗ ಸರಿಯಾಗಿ ನಾಲ್ಕು ತದುಕಿ ಪರಾರಿಯಾಗುವಲ್ಲಿ ಅವು ನಮ್ಮಷ್ಟು ಪಳಗಿರಲಿಲ್ಲ. ಬೈಗುಳಗಳ ಬಿತ್ತರದಲ್ಲೂ ಅಂಥ ಬಿರುಸಾಗಲಿ, ಶಬ್ದ ಚಾತುರ್ಯದಿಂದ ಅಂಥ ಹೇಳಿಕೊಳ್ಳುವಂಥ ಲೆವೆಲ್ಲಿನ ಕನಿಷ್ಠ ವಾಗ್ಮಿತೆಯೂ ಅವಕ್ಕಿರಲಿಲ್ಲ. ನಮ್ಮ ಗುಂಪಿನ ಸದಸ್ಯನೊಬ್ಬ ಮೇಷ್ಟ್ರು ಶಾಂತಪ್ಪರಿಗೆ ಬೈದ ಕೆಟ್ಟ ಮಾತಿಗೆ ಕಂಗಾಲಾಗಿ, ತತ್ತರಿಸಿಹೋದ ಆ ಹುಡುಗರು ಮಾರನೆಯ ದಿನ ಬೆಳಿಜ್ಜರವೇ ಬಂದು ಶಾಲೆಗೆ ರಜೆ ಹಾಕಿದ್ದರು. ''ಇಂಥ ಹಲ್ಕಾ ಬೈಗುಳ ನಾನ್ಯೆಲ್ಲೂ ಕೇಳಿಲ್ಲ ಬಿಡ್ರಿ. ಎನ್ರೀ ಕೇಳಿದ್ರೆ ಕಿವೀನೇ ತೂತ್ ಬಿದ್ದೋಗುತ್ತಲ್ರಿ. ಇಂಥ ಕರ್ಮದ ಹುಡುಗರಿಗೆ ಪಾಠ ಮಾಡೋ ಸಂಕಟ ತಂದಿಟ್ಟನಲ್ಲರೀ ಆ ದೇವ್ರು'' ಅಂತ ಎಲ್ಲರ ಹತ್ರ ಹೇಳ್ಕೊಂಡು ತಲೆತಲೆ ಚಚ್ಚಿಕೊಂಡಿದ್ದರು. ಹಿಂಗಾಗಿ ಅವರ್ಯಾರೂ ಅಷ್ಟು ಸುಲಭವಾಗಿ ನಮ್ಮ ತಂಟೆಗೆ ಬರುತ್ತಿರಲಿಲ್ಲ. ನಾವೇ ಮೈಮೇಲೆ ಬಿದ್ದು ಕ್ಯಾತೆ ಕೆರ್ಕೊಂಡು ಹೋಗಿ ಕೆಣಕಿದರೂ, ನಮ್ಮ ಕಡೆ ತಿರುಗಿಯೂ ನೋಡಲು ಅವು ಅಂಜಿಕೊಳ್ಳುತ್ತಿದ್ದವು.

ಮೇಲಾಗಿ, ಅವರ ಮೂಗು ತಲೆಗಳು ನಮ್ಮಷ್ಟು



ಸಂಪದ್ಭರಿತವಲ್ಲ. ಅವು ದಿನವೂ ತೀರಾ ನೀಟಾಗಿ ಬಾಚಿಕೊಂಡು ಬರುತ್ತಿದ್ದವು. ಹೀಗಾಗಿ ಅವುಗಳಲ್ಲಿ ಒಂದು ವೈವಿಧ್ಯತೆಯಾಗಲಿ, ಪ್ರಾಕೃತಿಕ ಚೆಲುವಾಗಲಿ, ಕಲಾವಂತಿಕೆಯಾಗಲಿ ಇರುತ್ತಿದ್ದುದು ನಮ್ಮ ಪ್ರಕಾರ ಕಡಿಮೆನೆ. ಅಕೇಶಿಯಾ ಪ್ಲಾಂಟೇಶನ್ನಿನ ಥರ ಅಂದಹೀನವಾಗಿದ್ದವು. ನಮ್ಮ ತಲೆಗಳು ಮಲೆನಾಡಿನ ನಿತ್ಯ ಹರಿದ್ವರ್ಣದ ಕಾಡಿನಂತೆ ಸಂಪನ್ನವೂ, ಸಂಪದ್ಭರಿತವೂ, ಆಗಿದ್ದವು. ಕ್ರಿಮಿ ಕೀಟಾದಿಗಳ ಉಗಮ ವಿಕಾಸವೂ, ಡಾರ್ವಿನ್ ಸಿದ್ಧಾಂತದ ಪ್ರಯೋಗಶಾಲೆಯೂ ಆಗಿದ್ದ ನಮ್ಮ ತಲೆಗಳ ರಹಸ್ಯ ಪ್ರಪಂಚ ನಮ್ಮ ಅರಿವಿಗೆ ನಿಲುಕದಷ್ಟು ಎತ್ತರೆತ್ತರಕ್ಕೆ ಬೆಳೆದುಹೋಗಿತ್ತು.

ನಮ್ಮ ಗೆಳೆಯರ ಬಹಳಷ್ಟು ಜನರ ತಲೆಗಳು ಹುಟ್ಟಿದಾಗಲೇ ಧರ್ಮಸ್ಥಳಕ್ಕೆ, ಇಲ್ಲವೆ ಬಾಬಾಬುಡನ್‌ಗಿರಿಗೆ ಬುಕ್ ಆಗಿರುತ್ತಿದ್ದವು. ಕಟಿಂಗ್ ಶಾಪಿನ ಕತ್ತರಿ ಧಾಳಿಗೆ ಸಿಲುಕದ ಈ ತಲೆಗಳು ಸ್ಮಾರಕಗಳಂತೆ ಸುರಕ್ಷವಾಗಿದ್ದವು. ನಮ್ಮ ಬೆಂಚಿನ ಎಲ್ಲರೂ ಬಡವರ ಮನೆಯ ಮಕ್ಕಳಾಗಿದ್ದ ಕಾರಣ, ಅವರವರ ಮನೆಗಳವರು ತಮ್ಮ ಸಂಸಾರದ ಕೋಟಿ ಜಂಜಾಟಗಳಲ್ಲಿ ಈ ಬುರುಡೆಗಳ ಮೇಲಿನ ದೇವರ ಹರಕೆಗಳನ್ನು ತೀರಿಸುವುದನ್ನು ಮರೆತೇ ಬಿಟ್ಟಿರುತ್ತಿದ್ದರು. ಆಗಾಗ ನೆನಪಿಸಿಕೊಂಡರೂ ''ಈ ವರ್ಷ ದುಡ್ಡಾಗಲಿಲ್ಲ, ಮುಂದಿನ ವರ್ಷ ಸಾಲ ಮಾಡಾದ್ರೂ, ಹೋಗಾನಂತೆ ತಗೋ'' ಅಂತ ಈ ಮುಂಡಾಮೋಚುವ ಕಾರ್ಯಕ್ರಮವನ್ನೇ, ವರ್ಷಗಟ್ಟಲೇ ಮುಂದಕ್ಕೆ ಎಸೆಯುತ್ತಿದ್ದರು. ಹೀಗಾಗಿ, ವರ್ಷ ವರ್ಷಗಳು ಸದ್ದಿಲ್ಲದೆ ಮುಂದಕ್ಕೆ ಸಾಗುತ್ತಾ ಬರಲಾಗಿದ್ದ ಕಾರಣ ನನ್ನ ಗೆಳೆಯರ ತಲೆಗಳು ನನ್ನಂತೆಯೇ ಮಂಡಕ್ಕಿ ಮೂಟೆಗಳಂತೆ ಎದ್ದು ಕಾಣುತ್ತಿದ್ದವು. ನಂತರದ ದಿನಗಳಲ್ಲಿ, ಅವು ಕಟಾವಿಗೆ ಎದ್ದು ನಿಂತ ಹುಲುಸಾದರಾಗಿ ಹೊಲಗಳಂತಾಗಿ, ಮತ್ತೆ ಇನ್ನೂ ಮೇಲೇರಿ ನಿಲ್ಲಲು ದಮ್ಮಾಗದೇ ಇತ್ತ ಆಧಾರವೂ ಸಿಗದೆ, ಆಲದ ಬಿಳಿ ಲೋಪಾದಿಯಲ್ಲಿ ನಾಚಿ ಬಾಗಿ ಭೂಮಂಡಲದೆಡೆಗೆ ಚಲಿಸ ತೊಡಗಿರುತ್ತಿದ್ದವು.

ಹೀಗೆ, ದೊಡ್ಡ ಕೂದಲ ಕಾಡೇ ತಲೆ ಮೇಲೆ ಹತ್ತಿ ನಿಂತಿದ್ದವು. ಅದರಿಂದ ತೀರಾ ಕಂಗಾಲಾಗಿದ್ದ ನನ್ನ ಗೆಳೆಯರು ಅವುಗಳನ್ನು ಕಂಟ್ರೋಲಿನಲ್ಲಿಟ್ಟುಕೊಳ್ಳುವ ರೀತಿ ಗೊತ್ತಾಗದೆ ಭಾರಿ ಸಂಕಟಪಡುತ್ತಿದ್ದರು. ಅನಂತರ ಅವರವರ ಅಮ್ಮಂದಿರು ಅವರಿಗೆ ದಿನಾ ಜಡೆ ಹಾಕಿ ಕಳಿಸುವ ಪದ್ಧತಿಯನ್ನು ರೂಢಿಗೆ ತಂದರು. ಅವರಲ್ಲಿ ಕೆಲವರು ವಾರಕ್ಕೊಂದು ಸಲ ಮಾತ್ರ ಎಣ್ಣೆಹಾಕಿ ಬಾಚುತ್ತಿದ್ದರು. ಕೆಲವರು ಎಣ್ಣೆಯೂ ಹಾಕದೆ, ಸ್ನಾನವೂ ಮಾಡದೆ ಹಾಗೇ

ಉಳಿಯುತ್ತಿದ್ದರು. ಇವರೆಲ್ಲಾ ಆಗಾಗ ಕಣ್ಣಿನ ರೆಪ್ಪೆಗಳನ್ನು ಮೇಲೆ ಮಡಚಿಕೊಂಡು 'ಹ್ಲೂ ನಾನು ರಾಕ್ಷಸ' ಎಂದು ನಮಗೆಲ್ಲಾ ವಿಚಿತ್ರವಾಗಿ ಹೆದರಿಸುತ್ತಿದ್ದರು. ಎಣ್ಣೆ ಹಾಕಿದ ನಂತರ ಎಷ್ಟೋ ದಿನ ನೀರೇ ಕಾಣದ ತಲೆಗಳು ಒಂಥರ ವಿಚಿತ್ರ ವಾಸನೆ ಹೊಡೀತಿದ್ದವು. ನಮಗೆಲ್ಲಾ ಆ ವಾಸನೆ ಅಭ್ಯಾಸವಾಗಿ ಇದ್ದದ್ದರಿಂದ, ಏನೇನೂ ಅನ್ನಿಸುತ್ತಿರಲಿಲ್ಲ. ಆದರೆ ಮುಂದಿನ ಸಾಲಿನವು ಮಾತ್ರ ಬೇಕಂತಲೇ ಹತ್ತಿರ ಬಂದು ಮೂಸಿ ನೋಡಿ 'ಥೂ ಗಲೀಜು' ಎಂದು ಹಂಗಿಸಿ ಮೂಗು ಮುರಿಯುತ್ತಿದ್ದವು. ಈ ಜಡೆಗಳಂತೂ ಜಗಳದ ಸಮಯದಲ್ಲಿ ಸರಿಯಾಗೇ ಕೈಕೊಡುತ್ತಿದ್ದವು. ಹೊಡೆದಾಟದಲ್ಲಿ ಶತ್ರು ಹುಡುಗರ ಕೈಗೆ ಒಮ್ಮೊಮ್ಮೆ ಸಿಕ್ಕಿಬಿಟ್ಟರಂತೂ ಮುಗಿದೇಹೋಯಿತು. ತಪ್ಪಿಸಿಕೊಂಡು ಓಡಿ ಹೋಗಲು ಛಾನ್ಸೇ ಇಲ್ಲವಾಗಿ ತಾರಾಮಾರಿ ಹೊಡೆತ ತಿಂದಿರುತ್ತಿದ್ದವು.

ನಮ್ಮದು ಪಕ್ಕಾ ಬಾಯ್ಸ್ ಸ್ಕೂಲ್. ನಮ್ಮ ನಡುವೆ ಒಂದಿಷ್ಟು ಜನ ಹುಡುಗರು ಮಾತ್ರ ಜಡೆ ಹಾಕಿಕೊಂಡು ಬರೋದು ಸಹಜವಾಗೇ ನಮಗೆಲ್ಲಾ ತೀರಾ ವಿಚಿತ್ರದಂತೆ ಕಾಣಿಸುತ್ತಿತ್ತು. ಹೀಗೆ ಜಡೆ ಹೆಣೆದುಕೊಂಡ, ಕೊನೇ ಮಣೆಯ ನನ್ನ ಗೆಳೆಯರ ಗೌರವ ಘನತೆಗಳು ಶಾಲೆಯಲ್ಲಿ ಹೆಚ್ಚಾಗುವ ಬದಲು ಅಪಹಾಸ್ಯಕ್ಕೆ ಗುರಿಯಾಗ ತೊಡಗಿದವು. ಅದರಲ್ಲೂ, ಕೆಲ ಹುಡುಗರ ತಾಯಂದಿರ ಪ್ರೀತಿ ಒಂದೊಂದು ದಿನ ತೀರಾ ಜಾಸ್ತಿಯಾಗಿಬಿಡುತ್ತಿತ್ತು. ಅವರೆಲ್ಲಾ ಮಗನ ಬಾಚಿದ ತಲೆಗೆ ಮಲ್ಲಿಗೆ ಹೂವನ್ನೋ ಇಲ್ಲ ದಾಸವಾಳದ ಹೂವೊ ಮುಡಿಸಿಯೇ ಶಾಲೆಗೆ ಗದುಮತೊಡಗಿದರು. ಈ ಮೇಕಪ್ಪಿನಿಂದ ಆ ಹುಡುಗರ ಅಂದ-ಚೆಂದ ಹೆಚ್ಚಾಯಿತಾದರೂ, ಮುಂದಿನ ಮಣೆಯ ನೀಟು ಬಟ್ಟೆಯ ಹುಡುಗರು ಮಾತ್ರ ಹಾಡು ಕಟ್ಟಿ ದಿನಾ ಹಾಡತೊಡಗಿದರು. ಇದರಿಂದ ನಮ್ಮ ಮಾನ ಮರ್ಯಾದೆಯೂ ಕೆಲ ದಿನ ಹರಾಜಿಗೆ ನಿಂತವು.

'ಏಯ್ ಜಡೆ– ಹಿಡಿ ಕೊಡೆ,
ಕರಿ ತಲೆ ಹೇನ್ ಬಲೆ
ಕತ್ತೆ ಬಾಲ ಕೊಳೆ ಸಾಲ
ಕುದುರೆ ಜುಟ್ಟು ಬೊಂಡಾ ಕಟ್ಟು
ಥೂ... ಥೂ... ಥೂ...
ಥೂ... ಥೂ... ಥೂ... ಎಂದು ಕೂಗಿ ಅಣಕಿಸತೊಡಗಿದವು.

ಒಂದು ದಿನವಂತೂ ದಯಾನ ವಿಷಯದಲ್ಲಿ ಒಂದು ದೊಡ್ಡ ರಾದ್ಧಾಂತವೇ ನಡೆದುಹೋಯಿತು. ದಯಾ ಹುಡುಗಿಯರುಟ್ಟುಕೊಳ್ಳುವ ಲಂಗಾ ದಾವಣಿ ಹಾಕಿಕೊಂಡು ಭರ್ಜರಿ ಕನಕಾಂಬರ ಹೂಗಳನ್ನೂ ಇಡಿಸಿಕೊಂಡು ಲಿಪ್ಟಿಕ್ ಪೌಡರ್ ಸಮೇತ ಶಾಲೆಗೆ ಬಂದುಬಿಟ್ಟ. ಅದಕ್ಕೊಂದು ಕಾರಣವಿತ್ತು. ದಯಾನ ತಂದೆ–ತಾಯಿಗೆ ಹೆಣ್ಣು ಮಕ್ಕಳಿರಲಿಲ್ಲ. ಇದ್ದವ ಇವನೊಬ್ಬನೇ ಸುಪುತ್ರ. ಹೀಗಾಗಿ, ಆಗಾಗ ದಯಾನಿಗೆ ಹುಡುಗಿಯ ಶೃಂಗಾರ ಮಾಡಿ, ನೋಡಿ, ಅವರ ತಾಯಿ ಸಂತೋಷ ಪಡುತ್ತಿದ್ದರು. ದಯಾನ ಮನೆಯಲ್ಲಿ ಇದೇ ಭಂಗಿಯಲ್ಲಿ ತೆಗೆದ ಹಲವಾರು ಫೋಟೊಗಳು ಸಹ ನೇತಾಡುತ್ತಿದ್ದುದ್ದನ್ನು ನಾವೆಲ್ಲ ನೋಡಿದ್ದುಂಟು. ಅವರ ತಾಯಿಗೆ ಇಂಥದ್ದೊಂದು ವೇಷಭೂಷಣ ಮಾಡುವ ಪುರುಸೊತ್ತಿದ್ದಾಗ ತಿಂಗಳಿಗೊಂದು ಸರ್ತಿ ಹೀಗೆ ಮಾಡುತ್ತಿದ್ದರು. ಆ ಒಂದು ದಿನ ದಯಾ, ಅವರ ಬೀದಿಯಲ್ಲಷ್ಟೇ ತಿರುಗಾಡುವ ಪರ್ಮಿಷನ್ ಪಡೆದಿರುತ್ತಿದ್ದ. ಆದರೆ, ಈ ಸಲ ಅವರಮ್ಮ ಈ ಸೌಲಭ್ಯವನ್ನು ನಮ್ಮ ಶಾಲೆಯ ತನಕವೂ ವಿಸ್ತರಿಸಿಬಿಟ್ಟಿದ್ದರು ! !

ಹಾಗೇ ಹೋಗುವಾಗ ನಮಗೆಲ್ಲಾ ಎಚ್ಚರಿಸಿ 'ಅವನ ಸುದ್ದಿಗೆ ಯಾರಾದ್ರು ಹೋದ್ರೆ ಹುಶಾರ್. ಲಂಗಾಗಿಂಗಾ ಎಳೆಯೋದು, ಚುಡಾಯಿಸೋದು ಮಾಡಿದ್ರೇ ನಿಮ್ಮ ಮೇಷ್ಟ್ರು ಎದುರಗೇ ಬಂದು ಬಾರಸ್ತೀನಿ ನೋಡ್ತೀರ್ರಿ,' ಎಂದು ಧಮಕಿ ಬೇರೆ ಹಾಕಿ ಹೋದರು. ಹುಡುಗಿಯರನ್ನು ಹೇಗೆ ಚುಡಾಯಿಸಬೇಕು ? ಯಾಕೆ ಚುಡಾಯಿಸಬೇಕು ? ಇದರ ಪ್ರಾಥಮಿಕ ತಿಳುವಳಿಕೆಯೂ ಇಲ್ಲದ ನಾವು ಪಿಳಿಪಿಳಿ ಕಣ್ಣು ಬಿಟ್ಟಿದ್ದೆವು.

ದಯಾ ಯಾವತ್ತೂ ನನ್ನ ಪಕ್ಕದಲ್ಲೇ ಹಿಂದಿನ ಬೆಂಚಿನಲ್ಲಿ ಕೂರುತ್ತಿದ್ದ ಆಸಾಮಿ. ಆದರೆ ಅವತ್ತು ಮಾತ್ರ ವಿಚಿತ್ರವಾದ ನಾಚಿಕೆಯೊಂದು ಅವನನ್ನು ಆಕ್ರಮಿಸಿಕೊಂಡುಬಿಟ್ಟಿತ್ತು. ಅದರಂತೆ, ವಿಶೇಷವಾಗಿ ನುಲಿದಾಡಿಕೊಂಡು ಕ್ಲಾಸಿನ ಒಳಗೆ ಬಂದವನೇ ದಿಢೀರಂತ ಮುಂದಿನ ಮಣೆಗಳಲ್ಲೇ ಕೂತುಬಿಟ್ಟ! ಆ ದಿನದ ಅವನ ಡ್ರೆಸ್ಸಿನಿಂದ ಅವನಿಗೇ ತೀರಾ ತಡೆದುಕೊಳ್ಳಲಾಗದಂಥ ಒಂದು ಚಡಪಡಿಕೆಯ ಲಜ್ಜೆ ಲಭಿಸಿಹೋಗಿತ್ತು. ಹೀಗಾಗಿ, ಅವನು ನಮ್ಮ ಕೊನೇ ಮಣೆಗಳ ತನಕ ನಡೆದು ಬರುವಷ್ಟು ಧೈರ್ಯವನ್ನೂ ತೋರಿಸಲಿಲ್ಲ. ಮೇಲಾಗಿ, ಅವರಮ್ಮ ನಮ್ಮನ್ನೆಲ್ಲಾ ಉದ್ದೇಶಿಸಿ ಅವನ ಶೀಲದ ಬಗ್ಗೆ ಎಚ್ಚರಿಕೆ ಬೇರೆ ಕೊಟ್ಟಿದ್ದರಿಂದ ಅವನಲ್ಲೇ ಕುಕ್ಕರುಬಡಿಯಲಿ ಎಂದೇ ನಾವೆಲ್ಲ ಮನಸ್ಸಿನಲ್ಲಿ ನಿರ್ಧರಿಸಿಕೊಂಡಿದ್ದೆವು. ನಾಚಿಕೆಯಲ್ಲಿ ತುಟಕಚ್ಚುತ್ತಾ ಅವನೂ ಅಲ್ಲೇ ಕೂತುಬಿಟ್ಟ. ಅವನ ಈ ಧಿಡೀರ್ ಹೆಣ್ತನದಿಂದ ಅಚ್ಚರಿಗೊಂಡ ಕ್ಲಾಸಿನ ಹುಡುಗರೆಲ್ಲಾ ಹೋ ಎಂದು ಅಬ್ಬರಿಸಿಕೊಂಡವು. ಅಷ್ಟರಲ್ಲಿ ತಮ್ಮ ಮಾಮೂಲಿ ಜಾಗ ದಯಾ ಆಕ್ರಮಿಸಿಕೊಂಡಿದ್ದಾನೆಂದು ಸಿಟ್ಟಾದ ಮುಂದಿನ ಸಾಲಿನ ಶುಭ್ರ ಹುಡುಗರು ಯಾವ ಮುಲಾಜು ಇಲ್ಲದೆ, ಅವನ ದರದರಾಂತ ಎಳೆದು ತಂದು ನನ್ನ ಪಕ್ಕ ಬಿಸಾಕಿ ಹೋದರು. ಅವರು ಎಳೆದು ತಂದ ರಭಸಕ್ಕೆ ಅವನ ಕೆಳಗಿನ ಲಂಗ ಕಿತ್ತೇಹೋಯಿತು. ಮೊದಲೇ ಆ ಶುಭ್ರ ಹುಡುಗರಿಗೆ ನಮ್ಮನ್ನು ಕಂಡರಾಗುತ್ತಿರಲಿಲ್ಲ. ಅಂಥದ್ದರಲ್ಲಿ ದಯನ ಈ ಹೊಸ ವೇಷವನ್ನ ಪಾಪ ಅವರಾದರೂ ಹೇಂಗೆ ಸಹಿಸಿಯಾರು !

ಅವನು ಬರೀ ಜಡೆಯಲ್ಲಿ ಕೂರುತ್ತಿದ್ದಾಗ ಏನೂ ಅನ್ನಿಸದ ನನಗೆ ಅವನ ಲಂಗಾ ದಾವಣಿ ಹಾಕಿ ಬಂದ ಆ ದಿನ ಏನೋ ಒಂಥರ ರೋಮಾಂಚನ ಆಗತೊಡಗಿತು. ಅಲ್ಲೀ ತನಕ ತೀರಾ ಒಡ್ಡನಾಗಿ ಕಾಣುತ್ತಿದ್ದ ಅವನ ಆ ದಿನದ ವೇಷ ನೋಡಿದ ತಕ್ಷಣವೇ ಅನುಮಾನವೊಂದು ಶುರುವಾಯಿತು. ಇವನೇನಾದರೂ ನಿಜವಾಗಿಯೂ ಹುಡುಗಿಯೇ ಇರಬಹುದಾಗಿದ್ದರೆ ಹುಡುಗೀನ ನಮ್ಮ ಶಾಲೆಗೆ ಸೇರಿಸಿಕೊಳ್ಳಂಗೇ ಇಲ್ವಲ್ಲ? ಇಲ್ಲ ಅವರಮ್ಮ ನಮ್ಮ ಹೆಡ್ಮೇಷ್ಟ್ರಿಗೆ ಏನಾದ್ರೂ ಮೋಸಮಾಡಿ ಗೊತ್ತಾಗದ ಹಾಗೆ ಸೇರಿಸಿಬಿಟ್ಟಿದ್ದರೆ? ಛೇ ಇಷ್ಟು ದಿನವಾದರೂ ದಯಾ ಗಂಡೋ ಹೆಣ್ಣೋ ಅನ್ನೋದು ಗೊತ್ತು ಮಾಡಿಕೊಳ್ಳದೆ ಅವನ ಪಕ್ಕದಲ್ಲೇ ಕೂತಿರುತೀನಲ್ಲ! ನಾನೆಂಥ ದಡ್ಡ? ಹೆಂಗಾದರಾಗಲೀ ಎಂದು ನಾವೆಲ್ಲ ಅವನಿಂದ ಒಂದಿಷ್ಟು ಸರಿದೇ ಕುಂತೆವು. ದಯಾ ಗಂಡೋ, ಹೆಣ್ಣೋ, ಅನ್ನೊ ಅಸಲಿತನವನ್ನು, ರೀಸಸ್ ಪಿರಿಯೆಡ್ ಬಿಟ್ಟಾಗ ಪತ್ತೆ ಹಚ್ಚಬೇಕೆಂದು ಹಿಂದಿನ ಬೆಂಚಿನ ನಾವೆಲ್ಲಾ ಮಗುಮ್ಮಾಗಿ ನಿಶ್ಚಯಿಸಿಕೊಂಡೆವು.

ದಯಾ ಹೀಗೆ ಅನುಮತಿ ಇಲ್ಲದೆ ಹುಡುಗರ ಶಾಲೆಯಲ್ಲಿ ಹುಡುಗಿಯಾಗಿ ಪ್ರತ್ಯಕ್ಷವಾಗಿದ್ದು, ಆಗ ಹುಡುಗರು ಗಲಭೆ ಎಬ್ಬಿಸಿದ್ದು, ನಮ್ಮ ಪಾಣಿಪಂಚೆ ನಾರಾಯಣಪ್ಪ ಹೆಡ್ಮೇಷ್ಟ್ರಿಗೆ ತಿಕ್ಕಲು ಹತ್ತಿಸುವಷ್ಟು ರೋಷ ತರಿಸಿತು. ಕುರ್ಚಿಯ ಮೇಲೇ ಹುಟ್ಟಿ ಅಲ್ಲೇ ಬೆಳೆದು, ಅಲ್ಲೇ ದೊಡ್ಡವರಾಗಿ, ಯಾವತ್ತೂ ಅಲ್ಲೇ ಇರುತ್ತಾರೆಂದು ನಾನು ದಯಾ ಭಾವಿಸಿಕೊಂಡಿದ್ದ ಹೆಡ್ಮೇಷ್ಟ್ರು ಇವತ್ತು ಸೀದಾ ಎದ್ದುಬಂದರು. ಬಂದವರೇ ದಯನ ನಿಲ್ಲಿಸಿ, ನಮ್ಮೆಲ್ಲರೆದುರಿಗೇ ಅವನ ಲಂಗವನ್ನು ಫರ್ ಫರ್ ಎಂದು ಹಲವು ಕಡೆ ಹರಿದುಬಿಟ್ಟರು. ಆಗ ಒಂದು ಪವಾಡವೇ ಜರುಗಿಹೋಯಿತು! ದಯಾ ನಿಂತ ಜಾಗದಲ್ಲೇ ಮಾಯಾವಿಯಂತೆ ರೂಪ ಬದಲಿಸಿದ ಆಧುನಿಕ ಕ್ಲಬ್ ಡ್ಯಾನ್ಸರ್ ಆಗಿಬಿಟ್ಟ. ಹೀಗೆ, ಅನಾಮತ್ತಾಗಿ ನುಗ್ಗಿ, ಯಾವ ಮುನ್ಸೂಚನೆಯೂ ಕೊಡದೆ, ಒಮ್ಮೆಗೇ ಅವನ ಲಂಗ ದಾವಣಿಯನ್ನು ಟೇಪುಗಳ ರೀತಿ ಉದ್ದುದ್ದ ಹರಿದು, ರಂಪ ಮಾಡಿದ್ದರಿಂದ ದಯಾನಿಗೆ ಹೆಡ್ಮೇಷ್ಟ್ರು ಮೇಲೆ ಕೆಂಡದಂಥ ಕೋಪವೊಂದು ಕಿತ್ತುಕೊಂಡುಬಂದಿತು.

ಹೀಗೆ, ಸಡನ್ನಾಗಿ ಸಿಟ್ಟು ಬಂದಾಗ ದಯಾ ಯಾರ ಮುಖ ಮುಲಾಜುಗಳನ್ನೂ ನೋಡುತ್ತಿರಲಿಲ್ಲ. ಎದುರಿಗಿರುವ ವ್ಯಕ್ತಿ ಯಾವನೇ ಇರಲಿ, ಎಷ್ಟೇ ದೊಡ್ಡವನಿರಲಿ, ಬಾಯಿಗೆ ಬರುವ ಎಲ್ಲಾ ಹಲ್ಕಾ ಮಾತುಗಳನ್ನ ಕಿತ್ತಿಡುವುದು ಅವನ ಜಾಯಮಾನವಾಗಿತ್ತು. ಹೀಗಾಗಿ, ಅವನು ಅದೇ ಧಾಟಿ, ಅದೇ ಲಯದಲ್ಲೇ, ಎಲ್ಲರಿಗೂ ಬೈದುಬಿಡುತ್ತಿದ್ದ. ಅದೇ ಥರ ಇವತ್ತೂ ಆಗಿ ಹೋಯಿತು. ಇವರು ನಮ್ಮ ಹೆಡ್ಮೇಷ್ಟ್ರು, ದೊಡ್ಡ ಗುರುಗಳು ಅನ್ನೋ ಶಿಷ್ಯಭಕ್ತಿಯನ್ನೇ ಆ ಕ್ಷಣದಲ್ಲಿ ಮರೆತು ಸಡನ್ನಾಗಿ ''ಲೇ ಹುಚ್ಚ ಸೂ... ಮಗನೇ...'' ಎಂದು ಆರಂಭಿಸಿ ನುರಿತ ಪದಗುಚ್ಛಗಳನ್ನು ಕೂಡಿಸಿ, ಏನೇನೋ ಪೋಣಿಸಿ, ಝಾಡಿಸಿಯೇ ಬಿಟ್ಟ. ರೋಯ್ಯೋ ಎಂದು ಬಂದ ಅಡ್ನಾಡಿ ಮಳೆಯೊಂದು ಅಡ್ಡಾದಿಡ್ಡಿ ಚಚ್ಚಿ ಚಿಂದಿ ಮಾಡಿಟ್ಟಂತೆ ಹೆಡ್ಮೇಷ್ಟ್ರ ಸ್ಥಿತಿಯಾಯಿತು.

ಅವರ ಇಡೀ ಸರ್ವಿಸ್‌ನಲ್ಲೇ ಇಂಥದೊಂದು ಭಾರಿ ಬೈಗುಳ ಸರಮಾಲೆಯನ್ನೇ ಕೇಳಿರಲಿಲ್ಲವೆಂದು ಕಾಣುತ್ತದೆ. ಸಾಕ್ಷಾತ್ ಸಿಡಿಲು ಹೊಡೆಸಿಕೊಂಡವರಂತೆ ಹೆಡ್ಮೇಷ್ಟ್ರು ಸೀಜಾಗಿ ನಿಂತಲ್ಲೇ ನಿಂತುಬಿಟ್ಟರು. ಅವರಿಗೆ ಬೈದ ದಯಾ ಮಾತ್ರ ಬಹಳ ನಿರಾಳವಾಗಿದ್ದಂತೆ ಕಾಣುತ್ತಿತ್ತು. ಅವರು ಮತ್ತೆ ಮುಂದುವರೆದು ಹೊಡೆತ-ಗಿಡತ ಅಂತೇನಾದರೂ ಕೈ ಎತ್ತಿದರೆ, ಅದಕ್ಕೆ ಪ್ರತಿಯಾಗಿ, ಬೈಯ್ಯಬಹುದಾದ, ಭಾರೀ ಬೈಗುಳವೊಂದನ್ನು ತನ್ನ ಖಾತೆಯಿಂದ ಹೆಕ್ಕಿಕೊಂಡು, ಕ್ರಿಕೆಟ್‌ನ ಫಾಸ್ಟ್ ಬೌಲರ್ ಥರ ಅವನೂ ಸಜ್ಜಾಗಿಯೇ ನಿಂತಿದ್ದ. ಅವನೆದುರು ಪಂಕ್ಚರ್ ಆದ ಟೈರಿನಂತೆ, ಕ್ಲೀನ್ ಬೋಲ್ಡಾಗಿ ನಿಂತಿದ್ದ ನಾರಾಯಣಪ್ಪ ದಿಕ್ಕೇ ತೋಚದೆ ಅಳುವ ಧ್ವನಿಯಲ್ಲಿ ''ಎಲ್ಲಿದ್ದೀರಿ ಬರ್ರೋ... ನನ್ನ ಮಕ್ಕಳಾ, ನನ್ ಮಾನಾ ಮರ್ಯಾದಿ ಹೋಗ್ತಾ ಐತೆ'' ಅಂತ ಸಹಾಯಕ್ಕಾಗಿ ಸಹೋದ್ಯೋಗಿಗಳನ್ನ ಅಂಗಲಾಚುತ್ತಾ ಕೂಗಿಕೊಂಡರು. ಅಲ್ಲಿಂದ ಮುಂದೆ ನಿಜವಾದ ಕುರುಕ್ಷೇತ್ರ ಯುದ್ಧವೇ

ನಡೆದುಹೋಯಿತು. !

ಏನೋ ಅನಾಹುತವಾಗಿದೆ ಎಂದರಿತ ಶಾಲೆಯ ಉಳಿದೆಲ್ಲಾ ಮೇಷ್ಟುಗಳೂ ಕ್ಲಾಸುಗಳ ಪಾಠವನ್ನು ಅಷ್ಟಕ್ಕಷ್ಟೇ ನಿಲ್ಲಿಸಿ, ಎದ್ದೂ-ಬಿದ್ದು ಓಡಿಬಂದರು. ಅವರಿಗೆ ಹೆಡ್ಮೇಷ್ಟ್ರು ಏನೋ ಅಪಾಯದಲ್ಲಿದ್ದಾರೆ ಎಂಬುದಷ್ಟು ಗೊತ್ತಾಯಿತೇ ಹೊರತು ಯಾವ ಥರದ ತೊಂದರೆಯಲ್ಲಿದ್ದಾರೆಂಬುದು ತಕ್ಷಣಕ್ಕೆ ಅರ್ಥವಾಗಲಿಲ್ಲ. ವಿಷಯವನ್ನು ಬಲು ದುಃಖದಿಂದ ಸಣ್ಣ ಮಕ್ಕಳು ಹೇಳುವಂತೆ ಎರಡೆರಡು ಸಲ ತಮ್ಮ ಸಹದ್ಯೋಗಿಗಳಿಗೆ ಸವಿಸ್ತಾರವಾಗಿ ಹೇಳಿಕೊಂಡರು. ದಯಾ ಅಚಲವಾಗಿ ನಿಂತೇ ಇದ್ದ.

ಈ ಕತೆ ಕೇಳಿ, ಪಾಣಿಪಂಚೆ ನಾರಾಯಣಪ್ಪ ಹೆಡ್ಮೇಷ್ಟ್ರರ ತಲೆಯೇ ಕಂಡರಾಗದ ಪೂರ್ವ ಅವಮಾನಿತ ಕೆಲ ಮೇಷ್ಟುಗಳ ಹೃದಯಗಳು ಅಲ್ಲಲ್ಲೇ ಪುಲಕ ಗೊಂಡವು. ಸದರಿ ಅವರ ಕಣ್ಣುಗಳು ದಯಾನ ಮುಖವನ್ನು ಹೆಮ್ಮೆಯಿಂದ ದಿಟ್ಟಿಸಿ, ಭಪ್ಪರೇ ಮಗನೇ, ಭಾರಿ ಚಲೋ ಕೆಲಸ್ನೇ ಮಾಡೀಯ ಎಂದು ಮನದಲ್ಲೇ ಕೃತಜ್ಞತೆಗಳ ಸುರಿಮಳೆ ಸುರಿಸಿದವು. ಒಂದಿಬ್ಬರು ದಯಾನ ಯಾಕಲೇ ಅಂತ ವಿಚಾರಣೆ ಶುರುಮಾಡ ಬೇಕೆಂದು ಅಂದುಕೊಂಡರಾದರೂ, ಹೆಡ್ಮೇಷ್ಟ್ರಿಗೇ ಹೆದರದವನು ತಿರುಗಿ ನಮಗೆ ಬೈದರೆ ಏನು ಗತಿಯೆಂದು ಯೋಚಿಸಿಯೇ ಸುಮ್ಮನಾಗಿಬಿಟ್ಟರು.

ಆದರೆ, ಹೆಡ್ಮೇಷ್ಟ್ರರ ಆಪ್ತರಾದ ರಸೂಲ್ ಮೇಷ್ಟ್ರು ಮಾತ್ರ ಆ ತಕ್ಷಣದಲ್ಲೇ ಕೆಂಡಾಮಂಡಲವಾದರು. ''ಹಾಕ್ರೀ ಆ ನನ್ಮಗನಿಗೆ ನಾಲ್ಕು. ಎಳಕೊಳ್ರೀ ಈ ಕಡೆ'' ಎಂದು ಬಾಯಿಮಾತಿನ ಆದೇಶವಿತ್ತರು. ಆದರೆ, ಆ ಎಳೆದು ಕೊಳ್ಳುವ ಕೆಲಸ ಯಾರು ಮೊದಲು ಮಾಡಬೇಕೆಂದು ಯಾರಿಗೂ ಖಚಿತವಾಗಲಿಲ್ಲ. ಮೇಲಾಗಿ ಯಾರಿಗಿಷ್ಟ ವಿರಲೀ ಬಿಡಲಿ ತೀರಾ ಹೆಡ್ಮೇಷ್ಟ್ರಿಗೆ ಇಷ್ಟುಂದ ಮೇಲೆ ಇವನನ್ನು ಸುಮ್ಮನೆ ಬಿಡಲಾದೀತೆ ? ಸರಿ, ಈ ತಕ್ಷಣವೇ ಬೆತ್ತದೌತಣ ನಡೆಯಲಿ, ಅದು ಸೆಕ್ಷನ್ನಿನಲ್ಲೇ ಎಲ್ಲಾ ಹುಡುಗರ ಸಮಕ್ಷಮದಲ್ಲೇ ವಿಜೃಂಭಣೆಯಿಂದ ಜರುಗಲಿ. ಮುಂದೆ ಹೀಗೆ ಬೈಯ್ಯಬಹುದಾದ ಭಾವಿ ಹುಡುಗರಿಗಿದು ಪಾಠವೂ ಆಗಲಿ, ಎಂದೇ ತೀರ್ಮಾನ ಹೊರಬಿತ್ತು. ಇವರ ಈ ಚರ್ಚೆಯನ್ನೆಲ್ಲಾ, ದಯಾನ ಕಣ್ಣುಗಳು ತದೇಕ ಚಿತ್ತದಿಂದ, ಲೋಕಸಭೆಯ ಸ್ಪೀಕರ್ ರೀತಿ ಗಮನಿಸುತ್ತಿದ್ದವು.

ತಾವೇ ಯಾವತ್ತೋ ಮಾಡಬೇಕಾದ ಈ ಕರ್ತವ್ಯವ ತಮ್ಮ ಶಿಷ್ಯೋತ್ತಮ ಇಷ್ಟೊಂದು ಅಚ್ಚುಕಟ್ಟಾಗಿ ಮಾಡಿ ಮುಗಿಸಿದ್ದಾನೆ. ಅಂಥ ಪುಣ್ಯಾತ್ಮನಿಗೆ, ಯಾಕೆ ಹೊಡಿಯ ಬೇಕು ಎಂದು ಒಳಗೊಳಗೇ ಮಾನಸಿಕ ಸಿಹಿ ಚಪ್ಪರಿಸುತ್ತಿದ್ದ ಒಂದಿಬ್ಬರು ಮಾತ್ರ ''ಹಂಗೆಲ್ಲಾ ಹೊಡಿಯೋದು ಬಡಿಯೋದು ತಪ್ಪಲ್ವ ಸಾರ್'' ಅಂತ ತಕರಾರು ತೆಗೆದರು. ''ವಾರ್ನ್ ಮಾಡಿ ಬಿಟ್ಟರೆ ಆದೀತಲ್ಲವ ? ಹೊಡೆಯುವಾಗ ಹುಡುಗನಿಗೆ ಎಲ್ಲಾದರೂ ತಾಗಿ, ಏನಾದರೂ ಹೆಚ್ಚು – ಕಮ್ಮಿಯಾದರೆ ಯಾರು ಜವಾಬ್ದಾರಿ ?'' ಎಂಬ ಅದ್ಧ ತರ್ಕವನ್ನು ಬೇಕಂತಲೇ ಉದ್ದುದ್ದ ತಂದಿಟ್ಟರು. ಮತ್ತೊಮ್ಮೆ ಹೆಡ್ಮೇಷ್ಟ್ರಿಗೆ ಉರಿಸಲು ''ಆದ್ಹಂಗೆ ಅವನಾಡ್ದಾ ಕೆಟ್ಟ ಮಾತಾದ್ರೂ ಯಾವುದು ತಿರಗ ಒಂದ್ ಸಲ ಹೇಳಿ ಸಾರ್'' ಎಂದು ಹಲವು ಸಲ ಅವರ ಬಾಯಿಂದಲೇ ಆ ಆಂತು ಕೇಳಿ ಪುಲಕ ಗೊಂಡರು. ಅದಿರಲಿ, ಹೆಡ್ಮೇಷ್ಟ್ರು ಅಂದರೆ, ಇಡೀ ಶಾಲೆಯ ಮಾನ-ಪ್ರಾಣ ಇದ್ದಂಗೆ. ಅಂತವರಿಗೇ ಬೈದಿದ್ದು ಸರಿಯಲ್ಲ, ಹೊಡೆತದ ಕಾರ್ಯಕ್ರಮ ತಕ್ಷಣವೇ ಪ್ರಾರಂಭಿಸಬೇಕು. ಈ ವಿಷಯದಲ್ಲಿ ಉದಾಸೀನ ಮಾಡಬಾರದೆಂಬುದು ಎಲ್ಲರಿಂದ ಒಮ್ಮತಗೊಂಡು ಬಂದು, ಯಾವ ಕಾರಣಕ್ಕೂ ದಯನಿಗೆ ದಯೆ ತೋರಿಸ ಬಾರದೆಂಬುದು ಆಖೈರಾಗಿ ನಿರ್ಣಯವಾಯಿತು.

ಹೆಡ್ಮೇಷ್ಟ್ರಿಗೆ ಭಯಂಕರ ಕುತೂಹಲ. ತನ್ನ ಪರವಾಗಿ ಯಾರು ಮೊದಲಿಗೆ ರಣರಂಗಕ್ಕೆ ಧುಮುಕುತ್ತಾರೋ ಅನ್ನುವ ತವಕ. ಎಲ್ಲರೂ ಕೆಂಡವನ್ನು ಕಣ್ಣುಗಳಲ್ಲಿ ಬಳಿದುಕೊಂಡು ಒಮ್ಮೆಗೇ ಉರಿದು ದಯಾನ ಮೇಲೆ ಮುಗಿಬಿದ್ದು ಅವನ ಹಣ್ಣುಗಾಯಿ ನೀರುಗಾಯಿ ಮಾಡೇ ಬಿಡ್ತಾರೆ ಅನ್ನೋ ಭರವಸೆ. ಹೀಗಾಗಿಯೇ ಅವರು ಮತ್ತೊಮ್ಮೆ ಶುರುವಾಗಲಿ ಎಂದು ಹೇಳಿದ್ದು.

ಆರೋಪಿ ತಪ್ಪಿಸಿಕೊಂಡಾನೆಂದು ಮೊದಲಲ್ಲೇ ಹೆದರಿ ಬಾಗಿಲಿನ ಚಿಲಕ ಭದ್ರಪಡಿಸಿಕೊಂಡರು. ಯಾವಾಗ ಈ ಪ್ರಕ್ರಿಯೆ ಚಾಲೂ ಆಯಿತೋ ಆಗ



ನಮ್ಮ ರೈತರಿಗೆ ಇದೊಂದು ಭರವಸೆ ಭಾಕಿ ಇತ್ತು ಅಲ್ವೆ?! ಅದನ್ನೂ ಹೇಳಿ ಮುಗಿಸಿದ್ದಾರೆ!

ದಯಾ ಎಚ್ಚೆತ್ತುಕೊಂಡು ಒಮ್ಮೆ ಕರ್ಣಕಠೋರವಾಗಿ ಸಿಡಿಲಿನೋಪಾದಿಯಲ್ಲಿ ಕಿರುಚಿದ. ಆ ಸ್ಯಾಂಪಲ್ಲಿಗೇ ಸಭೆಯ ಎಲ್ಲಾ ಮೇಷ್ಟ್ರುಗಳೊಮ್ಮೆ ನಡುಗಿಹೋದರು. ಅದು ಯಥಾಪ್ರಕಾರವಾಗಿ ಸಭೆಯ ಪ್ರಾರ್ಥನೆಯೇ ಇದು ಎಂಬಂತಾಗಿಹೋಯಿತು.

ಅದೇ ಸಂದರ್ಭದಲ್ಲಿ ನಮ್ಮ ಗಣಿತದ ಗುಂಡಪ್ಪ ಮೇಷ್ಟ್ರು ಮುಂದೆ ಬಂದು ನಿಂತರು. ''ಆಗ್ಗಿದ್ದಾಗ್ಲಿ, ಇವನಿಗೆ ನಾನೇ ನಾಲ್ಕು ಬಾರ್ಸಿ ಬುದ್ಧಿ ಕಲಿಸ್ತೀನಿ. ಕೊಡ್ರಿ ಇಲ್ಲಿ ಕೋಲು'' ಎಂದು ಬೆತ್ತವನ್ನು ಮುಂದೆ ನಿಂತಿದ್ದವರಿಂದ ಕಸಿದುಕೊಂಡರು. ಹತ್ತಿರ ಹೋದರು. ದಯಾನೊಮ್ಮೆ ದಿಟ್ಟಿಸಿ ನೋಡಿದರು. ಅನಾದಿ ಕಾಲದಿಂದಲೂ ತಪ್ಪದೆ, ಕುಡಿದೂ, ಕುಡಿದೂ, ತುಂಬಾ ವೀಕ್ ಆಗಿದ್ದ ಅವರು ಯಾರಿಗೂ ಎಂದೂ ಹೊಡೆದವರೇ ಅಲ್ಲ, ಬೈದವರು ಹೌದಷ್ಟೆ. ಮೇಲಾಗಿ ಅವರು ಬಹಳ ಎಡವಟ್ಟು ಗಿರಾಕಿ. ಯಾವಾಗ ಏನು ಮಾತಾಡ್ತಾರೆ ಅನ್ನೋದು ಯಾರೂ ಊಹಿಸಲಾಗದಂಥ ಆಸಾಮಿ. ಸುಮ್ಮನಿದ್ದುಬಿಟ್ಟರೆ, ದಿನ-ವಾರಗಟ್ಟಲೇ ಮಹಾಮೌನಿ. ಮಾತು ಶುರು ಹಚ್ಚಿದರೆ ಅದು ಗುಡ್ಡಕ್ಕೆ ಬೆಂಕಿ ಬಿದ್ದಂತೆ. ಅವರ ವಿಶೇಷತೆಯೆಂದರೆ ಅವರ ಒಂದು ಮಾತಿಗೂ, ಇನ್ನೊಂದು ಮಾತಿಗೂ ಸಂಬಂಧವೇ ಏರ್ಪಡದಿರುವುದು. ಅವರ ಮಾತು ಹತ್ತು ನಿಮಿಷ ಕೇಳಿದವನು ಇಪ್ಪತ್ತು ಸಲ ಹುಚ್ಚನಾಗಬಲ್ಲಷ್ಟು ಪವರ್ ಅವರ ಮಾತಿನಲ್ಲಿತ್ತು. ಅಂಥ ಪೈಕಿ ಅದು.

ಒಂದು ಸಲ ಇವರ ಮೇಲಿನ ಇದೇ ಆರೋಪ ಗಳಿಗೆ, ತನಿಖೆ ಮಾಡಲೆಂದು ನೇಮಕಗೊಂಡ ಸ್ಕೂಲ್ ಇನ್ಸ್‌ಪೆಕ್ಟರೊಬ್ಬರು ಬಂದಿದ್ದರಂತೆ. ಅರ್ಧ ಗಂಟೆ ಗುಂಡಪ್ಪ ಆಡಿದ ಮಾತು ಕೇಳಿ ತಲೆ ತಿರುಗಿ ಬಿದ್ದವರು ಅರ್ಧ ಗಂಟೆ ಮೇಲೆ ಮತ್ತೆ ಎದ್ದು ಕುಳಿತರಂತೆ. ಆಮೇಲೆ ಹೆಡ್ಮೇಷ್ಟ್ರರ ಕಡೆ ತಿರುಗಿ ''ಅಪ್ಪಾ ಸ್ವಾಮಿ, ಇಂಥ ಮನುಷ್ಯನ್ನ ಅದೆಂಗೆ ಸಹಿಸಿಕೊಂಡಿದ್ದೀರಪ್ಪ. ನಾನು ಈ ಮನುಸ್ಯ ರಿಟೈರ್ಡ್ ಆಗೋ ತನಕ ಈ ಶಾಲೆ ಕಡೆ ತಲೆ ಕೂಡ ಹಾಕಿ ಮಲಗಲ್ಲ ನನ್ನ ಬಿಟ್ ಬಿಡ್ರಯ್ಯ'' ಅಂತೇಳಿ, ಹೇಳದೆ ಕೇಳದೆ ಓಟ ಕಿತ್ತಿದ್ದರಂತೆ. ಇವರ ಎಡವಟ್ಟು ಮಾತುಗಳ ಪರಿಣಾಮವೇ ಹಾಗೆ. ಎಲ್ಲೋ ಮಾತನ್ನು ಶುರುಮಾಡಿ, ನಡುವೆ ಏನೋ ತಂದು, ಅಲ್ಲೇ ಏನೇನೋ ಹೇಳಿ, ಕೊನೆಗೆ ಮತ್ತೆಲ್ಲೋ ಮುಗಿಸಿ ದಿಢೀರಂತ ಸುಮ್ಮನಾಗಿಬಿಡುವ ಮಹಾ ಸಮಸ್ಯೆಯ ಮನುಷ್ಯರವರು. ಈಗ ಅವರೇ ಇಂಥದ್ದೊಂದು ಮುಖ್ಯ ಕೇಸಿನ ಮೊದಲ ತನಿಖಾಧಿಕಾರಿಯಾಗಿ ತಾವೇ ಸ್ವಯಂ ನೇಮಕವಾಗಿದ್ದು ಕಂಡು, ಹೆಡ್ಮೇಷ್ಟ್ರ ಪಿತ್ತ ಇನ್ನಷ್ಟು ಕೆರಳಿತು. ಆಗ ಹೆಡ್ಮೇಷ್ಟ್ರರು ತಮ್ಮ ಆಪ್ತರಾದ ರಸೂಲ್ ಮೇಷ್ಟ್ರು ಕಡೆ ಸನ್ನೆ ಮಾಡಿ ''ರ್ರೀ ಅವನ್ನ ಹಿಂದೆ ಕರ್ಕೊಳ್ರೀ'' ಎಂದು ಗೋಗರೆದುಕೊಂಡರು. ಹಾಗೆ ಮಾಡಲು ರಸೂಲ್ ಸಾಹೇಬರು ಒಂದು ಕ್ಷಣ ಹಿಂದೇಟು ಹಾಕಿದರು. ಎಲ್ಲರೆದುರು ಗುಂಡಪ್ಪರಿಗೆ ಹಾಗೆ ಯಾರೂ, ಏನೂ ಹೇಳುವಂತಿಲ್ಲ. ಜೋರು ಕೂಡ ಮಾಡುವಂತಿಲ್ಲ. ಮೇಲಾಗಿ, ಗುಂಡಪ್ಪ ಯಾರ ಮಾತನ್ನೂ ಕೇಳುವ ಮನುಷ್ಯರಲ್ಲ. ಅಲ್ಲದೆ ಅವರು ಮಾತನಾಡುವಾಗ ಮಧ್ಯ ಕೂಡ ಯಾರೂ ತುಟಿ ಪಿಟಿಕ್ ಅನ್ನುವಂತಿಲ್ಲ. ಅದು ಇಡೀ ಶಾಲೆಗೇ ಗೊತ್ತಿರುವ ಮುಖ್ಯವಿಷಯ. ಅಂಥ ಅಸಾಮಾನ್ಯರೇ ಸ್ವಯಂ ಸ್ಫೂರ್ತಿಯಿಂದ ಹೊಡೆಯಲು ಮುಂದೆ ಬಂದ ಕೂಡಲೇ, ದಯಾನಿಗಂತೂ ಹೋದ ಜೀವವೇ ವಾಪಸ್ಸು ಬಂದಷ್ಟೇ ಖುಷಿಯಾಯಿತು.

ಕೋಲಿನೊಂದಿಗೆ ಹೊಡೆಯುವ ಭಂಗಿಯಲ್ಲಿ ಹತ್ತಿರ ಬಂದು ನಿಂತರು. ಎಲ್ಲರಿಗೂ ಆಶ್ಚರ್ಯ! ಇನ್ನೇನು ಹೊಡೆತ ಬಿದ್ದವು ಎಂದು ಎಲ್ಲರಿಗೂ ಅಂದುಕೊಳ್ಳುವ ಹೊತ್ತಿನಲ್ಲಿ ಇದ್ದಕ್ಕಿದ್ದಂತೆ ಯಥಾಪ್ರಕಾರ ಅವರ ವರಸೆಯೇ ಬದಲಾಗಿಹೋಯಿತು. ಬೆತ್ತವನ್ನು ಒಮ್ಮೆಗೇ ಮೂಲೆಗೆ ಬಿಸಾಕಿ ದಯನಿಗೆ ನೀತಿ ಪಾಠ ಶುರು ಮಾಡಿಕೊಂಡರು. ''ಲೇ ಕತ್ತೆ, ಹಂಗೆಲ್ಲಾ ಮಾಡಬಾರದು ಕಣೋ. ಈ ಶಾಲೆ ಒಂದು ಬಿಂದು ಅಷ್ಟೆ. ಇನ್ನೊಂದು ಬಿಂದು ಎಲ್ಲೋ ಇರುತ್ತೆ. ಇವೆರಡೂ ಸೇರಿ ಒಂದು ಸರಳ ರೇಖೆ ಆಗುತ್ತೆ. ನೀನು ಲಂಬ ಕೋನ ಥರ ಇರಬೇಡ. ಈ ಜೀವನ ಒಂದು ತ್ರಿಭುಜ ಇದ್ದಂಗೆ. ನಿನ್ನ ಎರಡು ಭುಜ, ಈ ದೇಶ ಕಟ್ಟೋ ಸೈನಿಕ ಇದ್ದಂಗೆ. ನೀನು ಈ ದೇಶದ ಪ್ರಜೆ ಆಗಬೇಕಾದ್ರೆ, ಮೊದಲು ಒಳ್ಳೆ ಅಂಗಿ-ಚಡ್ಡಿ ಇಕ್ಕೊಂಡು ಮಾನ ಮರ್ಯಾದೆಯಿಂದ ಬರೋದು ಕಲಿ. ಇರೋ ಲಂಗ ದಾವಣಿಯೆಲ್ಲಾ ನೀನೆ

ಉಟ್ಕೊಂಡ್ರೆ ಹೆಂಗೋ ಮಂಗಮುಂಡೆ ಗಂಡ. ಎಲ್ಲಾ ಕಡೆ ಹುಶಾರಾಗಿರಬೇಕು. ಇಲ್ಲ ಬಡತನ ಬಂದ್ ಬಿಡುತ್ತೆ. ಆಗ, ಬರೋ ಸಂಬಳ ಯಾತಕ್ಕೂ ಸಾಕಾಗಲ್ಲ. ಸಾರಾಯಿ ಅಂಗಡಿ ಬಾಗಿಲು ಹಾಕ್ತಾರೆ. ಆಗ ಯಾರೂ ಏನೂ ಮಾಡಕಾಗಲ್ಲ. ಇದು ನ್ಯಾಯಾ ಅಲ್ಲ. ಎಲ್ಲಾ ನಂಗೊತ್ತು. ಐ ನೋ ಇಟ್. ಅದ್ಕೆ ನಾನು ಹೇಳೋದು ಏನಪ್ಪಂದ್ರೆ, ಹೆಡ್ಮೇಷ್ಟ್ರು ಒಂದ್ ಮಾತ್ ನಿಂಗ್ ಬೈದಿದ್ದಾರೆ. ಬೈಲಿ ಬಿಡು. ಅವುರು ದೊಡ್ಡವರು ಕಣೋ, ದೊಡ್ಡ ಜನ. ಹಲ್ಕಾ ಮಾತೇ ಬೈತಾರಪ್ಪ. ಬ್ಯಾಡ ಅನ್ನಕೆ ಸಂವಿಧಾನ ಐತಾ ? ಕಾನೂನು ಐತಾ ? ಇಲ್ಲ. ಅವುರು ಬೇಕುಬೇಕಾದಾಗ ಬೆಲ್ಲು ಹೊಡೀಬಹುದು. ಬೆಲ್ಲು ಸುತ್ತಿಗೆ ಎಲ್ಲಾ ಅವರ ಕೈಲಿ ಐತೆ. ಅದೆಲ್ಲಾ ನೀನು ಕೇಳ ಬಾರದು. ಅದನ್ನವರು ಕೊಡಲ್ಲ. ಅದೆಲ್ಲಾ ಶಾಲೆ ಪ್ರಾಪರ್ಟಿ. ಅವುರೂ ಲೆಕ್ಕ ಕೊಡಬೇಕಾಗುತ್ತೆ. ಅಂಥ ಮಾತನ್ನ ನೀನು ಕೇಳಬಾರದು. ತಪ್ಪಾಗಿಲ್ವ, ಬಿಟ್ ಬಿಡು. ಗಾಂಧಿ ಹುಟ್ಟಿದ ದೇಶ ನಮ್ಮದು. ನಾಳೆ ಮಂಗಳವಾರ ಎಲ್ಲಾ ಒಳ್ಳೆದಾಗುತ್ತೆ. ಅದಕ್ಕೆ ನೀನು ಬೇಜಾರಾಗಬೇಡ. ಇಷ್ಟೇ ಜೀವನ. ವಕ್ರ ರೇಖೆ ಲಂಬಕೋನ ತ್ರಿಭುಜ. ಇನ್ನ ಮೇಲೆ ಒಳ್ಳೆ ಚಡ್ಡಿ ಇಕ್ಕೊಂಡ್ ಬಾ. ಅಷ್ಟೇ ನಾನ್ ಹೇಳೋದು. ನೀನು ಈ ದೇಶದ ಸೈನಿಕ. ನಿನ್ನಂಥವನ ಬಾಯಲ್ಲಿ ಪಾಠ ಬರಬೇಕು. ಹತ್ತರ ಮಗ್ಗಿ ಬರಬೇಕು. ವೆರಿ ಗುಡ್ ಬಾಯ್. ಈಗ ಲಾಂಗ್ ಬೆಲ್ ಹೊಡೀರಿ'' ಎನ್ನುತ್ತಾ... ದಯಾನ ಬೆನ್ನು ಚಪ್ಪರಿಸಿ ಬಿರುಗಾಳಿಯಂತೆ ಹೊರಟು ಹೋಗೇಬಿಟ್ಟರು.

ಗುಂಡಪ್ಪ ಮೇಷ್ಟ್ರ ಈ ಪುರಾಣ ಮುಗಿಯುವ ಹೊತ್ತಿಗೆ ಎಲ್ಲರೂ ಗುಡುಗು-ಸಿಡಿಲುಗಳಿಂದ ಚುಚ್ಚಿಸಿಕೊಂಡ ಆಕಾಶದಂತೆ ಬಾಯಿ ಬಿಟ್ಟುಕೊಂಡು ದಂಗಾಗಿ ನಿಂತಿದ್ದರು ಅವರೆಲ್ಲರು. ಅವರೆಲ್ಲರ ತಲೆಯಲ್ಲಿ ಸತ್ತು ಸುಣ್ಣವಾಗಿದ್ದ ಹುಳಗಳೆಲ್ಲಾ, ಮತ್ತೆ ಜೀವ ತಳೆದು ಎದ್ದು ಬಂದು ತಲೆಯಲ್ಲಿ ಬೆಂಕಿ ಬಿದ್ದಂತೆ ಭಾಸವಾಗತೊಡಗಿತು. ಬಂದವರಿಗೆ ನಾವು ಯಾಕ ಬಂದಿದ್ದೀವಿ, ಏನು ಕಾರ್ಯಕ್ರಮ ಅನ್ನೋದೇ ಪೂರ್ಣವಾಗಿ ಮರೆತುಹೋಗಿತ್ತು.

ಅಲ್ಲಿ, ದಯಾ ನಿಧಾನಕ್ಕೆ ಹತ್ತರ ಮಗ್ಗಿ ಹೇಳತೊಡಗಿದ್ದ. ಜೊತೆಗೆ ಅವನ ಮೂಗಿನಿಂದ ನಿರುಪದ್ರವಿಗಳಾಗಿ ಇಳೀತಿದ್ದ ಎರಡು ಗಟ್ಟಿ ಜಲಪಾತಗಳನ್ನು ನಿಭಾಯಿಸುತ್ತಿದ್ದ. ಕ್ಲಾಸಿನ ಹುಡುಗರೆಲ್ಲಾ ಸೈಲೆಂಟಾಗಿಬಿಟ್ಟಿದ್ದರು. ಒಬ್ಬೊಬ್ಬರೇ ಮೇಷ್ಟ್ರುಗಳು ಸುಸ್ತಾದವರಂತಾಗಿ, ನಿಧಾನವಾಗಿ ಜಾಗ ಖಾಲಿ ಮಾಡತೊಡಗಿದರು. ಆಗ ಹೆಡ್ಮೇಷ್ಟ್ರು ನರ ನಾಡಿಗಳೆಲ್ಲಾ ಬಿಗಿಯಾಗಿ ಸಿಟ್ಟು ತಕಪಕ ಎದ್ದು, ಹೊಗೆಯಾಡತೊಡಗಿತು.

ಹೆಡ್ಮೇಷ್ಟ್ರು ಏದುಸಿರು ಬಿಡುತ್ತಾ, ''ನಂಗೊತ್ತು, ಬರ್ರಯ್ಯ. ಎಲ್ಲಾ ನಿಮ್ ನಾಟಕ. ಅವನಂದಿದ್ದು ನನಗಲ್ವ. ನಿಮ್ ತೆವಲು ಅಲ್ವಲ್ಲ. ನಿಮಗೆಲ್ಲಾ ಒಳಗೊಳಗೇ ಹಾಲು- ತುಪ್ಪ ಕುಡ್ದಂಗೇ ಆಗಿರುತ್ತೆ. ಈ ಶಾಲೆ ಮುಖ್ಯಸ್ಥನಿಗೆ ಮರ್ಯಾದಿ ಇಲ್ಲದಂಗೆ ಒಬ್ಬ ಚೋಟುದ್ದ ಹುಡುಗ ಬೈದ ಅಂದ್ರೂ ಏನೂ ಕಿಸೀದೆ ಇರೋರು ನೀವು ಮೇಷ್ಟ್ರುಗಳಾ ? ಅದರ ಜಾತಿಗೇ ಅವಮಾನ ನೀವು. ಆ ಗುಂಡ ಹುಚ್ಚನನ್ಮಗ ಬಾಯಿಗೆ ಬಂದಿದ್ದೇ ವದರಿ ಎಲ್ಲಾ ಎಕ್ಕಡ ಮಾಡಿಟ್ಟು ಹೋದ. ನೀವೆಲ್ಲಾ ಅವನಪ್ಪಂದಿರು. ಏಯ್ ನಸಗುನ್ನಿಗಳಾ ನೋಡ್ ಬರ್ರಲೇ, ಬೆರಿಕಿ ಹುಡುಗ್ರಿಗೆ ಶಿಕ್ಷೆ ಕೊಡೋದು ಹೆಂಗೇಂತ ನಾನು ತೋರುಸ್ತೀನಿ. ಈ ತಲೆ ಕೂದಲು ಬಿಸಿಲಾಗೆ ಒಣಗಿ ಬೆಳ್ಳಗಾದವಲ್ಲ. ಎಕ್ಸಪೀರಿಯನ್ಸ್ ಕಂಡ್ರಲೇ, ನೋಡ್ರಿ ಈ ಹೆಡ್ಮೇಷ್ಟ್ರ ತಾಕತ್ತು'' ಎನ್ನುತ್ತಲೇ, ದಯಾನನ್ನ ಅನಾಮತ್ತಾಗಿ ಹಿಡಿದೆಳೆದು, ಎತ್ತಿ ಮೇಜಿನ ಮೇಲೆ ಕುಕ್ಕಿಸಿಕೊಂಡರು. ದಯಾ ತಡಬಡಾಯಿಸಿ ಹೋದ. ಅಯ್ಯೋ ಮತ್ತೆ, ಏನಾಗುವುದೋ ಎಂದು ವಾಪಸ್ಸು ಹೋಗುತ್ತಿದ್ದ ಗುರು ವೃಂದ ತಟಕ್ಕನೆ ಮತ್ತೆ ಬಂದು ನಿಂತಿತು.

ಹೆಡ್ಮೇಷ್ಟ್ರು ಅವನನ್ನ ಮೇಜಿನ ಮೇಲೆ ನಿಲ್ಲಿಸಿಕೊಂಡ ಮೇಲೆ, ಅವನು ಅವರ ಮುಖಕ್ಕೆ ಸರಿಯಾಗಿ ಬರುತ್ತಾನಾ ಅಂತ ಲೆವೆಲ್ ಚಕ್ ಮಾಡಿಕೊಂಡರು. 'ಜೀವನದಲ್ಲಿ ಮನುಷ್ಯನಿಗೆ ಲೆವೆಲ್ ಇರಬೇಕು, ಏನು ? ಲೆವೆಲ್' ಎಂದು ತಮ್ಮಷ್ಟಕ್ಕೆ ತಾವೇ ಹೇಳಿ ಕೊಂಡರು. ಆಗ, ಇಬ್ಬರ ಎತ್ತರಗಳೂ, ಸಮಾನವಾಗಿದ್ದವು. ದಯಾನಂದನ ಎದುರು ಹೆಡ್ಮೇಷ್ಟ್ರಾದ ತಾವು ಬಗ್ಗಿ ನಿಂತುಕೊಂಡು ತನಿಖೆ ಮಾಡುವುದು ತಮ್ಮ ಘನತೆಗೆ ತಕ್ಕುದಲ್ಲ ಎಂದರಿತ ಅವರೇ, ಆರೋಪಿಯನ್ನ ಹೀಗೆತ್ತಿ ಸಮಾನಾಂತರವಾಗಿ, ನಿಲ್ಲಿಸಿಕೊಂಡಿದ್ದರು.

''ಬಾಯಿ ಬಿಡೋ ನಾಯಿ ನನ್ಮಗನೇ..., ಏನೋ ಬೊಗಳಿದೆ..., ಎಲ್ಲರೆದುರಿಗೆ ಹೇಳೋ ಇನ್ನೊಂದು ಸಲ. ಸಿಗಿದ್ ಹಾಕಿ ಬಿಡ್ತೀನಿ ಭಡವಾ ರ್ಯಾಸ್ಕಲ್. ಈ ವಯಸ್ಸಿಗೆ, ಅಮ್ಮ-ಅಕ್ಕ ಎಲ್ಲಾ ಬೈಗುಳ ಕಲಿತಿದ್ದೀಯ ಈಡಿಯಟ್'' ಎಂದು ಕಿರಿಚಾಡಿದವರೇ ಎದುರಿಗೆ ಬ್ರೆಡ್ಡಿನ ತುಂಡುಗಳಂತೆ ಎದ್ದು ಕಾಣಿಸುತ್ತಿದ್ದ ಅವನ ಕೆನ್ನೆಗಳೆರಡಕ್ಕೂ ಫಟಾರ್ ಫಟಾರಂತ, ಧಿಮ್ಮನಾಗಿ ನಾಲ್ಕು ಬಾರಿಸಿದರು. ಇಂಥ ಯಾವುದೇ ಪರಕೀಯ ಹೊಡೆತ ಬಿದ್ದ ತಕ್ಷಣವೇ ಅನಾಮತ್ತಾಗಿ ತನ್ನ ಶಬ್ದಕೋಶ ಬಿಚ್ಚುತ್ತಿದ್ದ ದಯಾ, ಈಗ ನಿಜವಾಗಿಯೂ ಹೆದರಿಹೋಗಿದ್ದ. ಅವನಿಗೆ ಈ ಹೊಡೆತಗಳಿಗೆ ಎದುರಾಗಿ ಮತ್ತೆ ಬೈಯುವ ಧೈರ್ಯ ಅದ್ಯಾಕೋ ಬರಲೇ ಇಲ್ಲ. ಆದರೂ ಸಾಧ್ಯವಾದಷ್ಟು ತುಟಿಗಳಲ್ಲೇ ಗೊಣಗಾಡುತ್ತಿದ್ದ. ಅದನ್ನು ದಯಾನ ಕಣ್ಣುಗಳು ನೋಡೇ ಗುರ್ತಿಸಬಹುದಾಗಿತ್ತು. ಅವನು ಚೂಪು ದೃಷ್ಟಿ ಮಾಡಿಕೊಂಡು, ಒಂದೇ ಗುರಿ ಫಿಕ್ಸ್ ಮಾಡಿಕೊಂಡು, ಅದೇ ದಿಕ್ಕಿನಲ್ಲಿ ದುರುಗುಟ್ಟಿತ್ತಿದ್ದಾನೆಂದರೆ, ಮಗಾ... ಮನಸ್ಸಿನಲ್ಲೇ ಭಾರಿ ಬೈಗುಳ ಹೊಸಿಯುತ್ತಿದ್ದಾನೆಂದೇ ಅರ್ಥ ಮಾಡಿಕೊಳ್ಳಬೇಕು... ಆದರಿವತ್ತು, ಗುಂಡಪ್ಪ ಮೇಷ್ಟ್ರು ಮಾಡಿದ ಅಸಂಬದ್ಧ ಭಾಷಣದಿಂದ ಎಲ್ಲರಂತೆ ಅವನೂ ಕಂಗಾಲಾಗಿದ್ದ. ಇವತ್ತಿನ ಈ ಹುಡುಗಿ ಡ್ರೆಸ್ಸು, ಹೆಡ್ಮೇಷ್ಟ್ರು ಹೊಡೆತ, ಕ್ಲಾಸಿನ ಎಲ್ಲಾ ಗೆಳೆಯರ ಸಮ್ಮುಖದಲ್ಲೇ ಹೆಡ್ಮೇಷ್ಟ್ರು ಕಡೆಯಿಂದ ಆದ ಮಾನಾಪಹರಣ, ಇವೆಲ್ಲವೂ ದಯಾನಂದನ ಬಾಯಿಂದ ಉಸಿರ ನಿಲ್ಲಿಸಿದ್ದವು. ಕಣ್ಣಿಂದ ಧಾರಾಕಾರ ನೀರಷ್ಟೇ ಸುರಿಯತೊಡಗಿತು.

ಹೆಡ್ಮೇಷ್ಟ್ರು ಬೊಗಳೋ, ಬೊಗಳೋ, ಎಂದು ಅವನನ್ನು ಪೀಡಿಸುತ್ತಿದ್ದರು. ಅವರ ಮುಖವನ್ನ ಇನ್ನೂ ಅವನ ಹತ್ತಿರಕ್ಕೆ ತಂದುಕೊಂಡು ಕಣ್ಣುಗಳ ರಕ್ತ ಮಾಡಿಕೊಂಡು ದುರುಗುಟ್ಟುತ್ತಿದ್ದರು. ಕಣ್ಣ ನೀರಿನಷ್ಟೇ ವೇಗವಾಗಿ ಕೆಳಗೂ ಮೇಲೂ ಸುರ್ ಸುರ್ ಸರಿದಾಡುತ್ತಿದ್ದ ದಯಾನಂದನ ಮೂಗಿನ ಎರಡು ರಸಾಯಣಗಳು ಮಾತ್ರ ಹೆಡ್ಮೇಸ್ಟ್ರಿಗೆ ಅಂಜದೆ ಚಲಿಸುತ್ತಿದ್ದವು. ಇವರಿಬ್ಬರ ಈ ದೃಷ್ಟಿ ಯುದ್ಧ ನಡೆಯುವಾಗ, ಆಕಸ್ಮಿಕ ಅನಾಹುತವೊಂದು ಅಲ್ಲಿ ಜರುಗಿಯೇಬಿಟ್ಟಿತು. ನಿಂತಿದ್ದ ಎಲ್ಲರೂ ಆ ಶಬ್ದಕ್ಕೆ ಗಾಬರಿಯಾಗಿಹೋದರು.

ದಯಾನಂದನ ಮೂಗಿನ ಎರಡು ರಸಾಯಣಗಳು ಹೀಗೆ ಒಳಗೇ ಹೊರಗೇ ಓಡಾಡುವಾಗ ಅಕಸ್ಮಾತ್ ಆಗಿ ದಪ್ಪ ನೊಣವೊಂದು ಹಾರಿ ಬಂದಿದ್ದೇ ಹುಳದಂತೆ ಥಳಥಳ ಹೊಳೆಯುತ್ತಿದ್ದ ಒಂದರ ಮೇಲೆ ಆಸೆಯಿಂದ ಕೂತೇ ಬಿಟ್ಟಿತು. ಎದುರು ದುರುಗುಟ್ಟಿ ನೋಡುತ್ತಿರುವ ಹೆಡ್ಮೇಷ್ಟ್ರು ಹೆದರಿಕೆಯಲ್ಲಿ ನಲುಗುತ್ತಿದ್ದ ದಯಾನಂದನಿಗೆ, ಆ ದರಿದ್ರ ನೊಣವನ್ನು ಓಡಿಸಿಕೊಳ್ಳಲು ಅವಕಾಶವೇ ಸಿಗಲಿಲ್ಲ. ಸರಿ, ಮತ್ತೇನು ಮಾಡುವುದು ? ಇನ್ನೇನು. ಅದನ್ನು ಸೇರಿಸಿಯೇ ಅನಾಮತ್ತಾಗಿ ಮೂಗಿನೊಳಗೆ ಸುರ್ ಎಂದು ಒಳಗೆ ಸೆಳೆದುಕೊಂಡೇಬಿಟ್ಟ. ಹೀಗೆ, ದಿಢೀರಂತ, ಬೆಳಕಿನ ಲೋಕದಿಂದ ಕತ್ತಲ ಗೂಡಿಗೆ ಎಸೆಯಲ್ಪಟ್ಟ ನೊಣ, ಮೂಗಿನೊಳಗೆ ಸೇರಿದ್ದೇ ಉಸಿರುಗಟ್ಟಿ ವಿಲವಿಲ ಒದ್ದಾಡತೊಡಗಿತು. ಸಹಾಯಕ್ಕಾಗಿ ಅಂಗಲಾಚಿತು. ಆಗ, ದಯಾನಂದನಿಗೂ ಅಸಾಧ್ಯ ಸಂಕಟ ಶುರುವಾಗಿಹೋಯಿತು. ಅವನು ಸೀನಲು ಒಂದಿಷ್ಟು ಬಾಯಿ ತೆರೆದು ಹದ ಮಾಡಿಕೊಳ್ಳತೊಡಗಿದ. ಎದುರಿಗೆ, ಮುಖಕ್ಕೆ ಮುಖವಿಕ್ಕಿ ''ಬೋಗಳೋ, ಬೋಗಳೋ ಲೇ ಭಾಂಚಾತ್ ಈಗ ಬಾಯ್ ಬಿಡ್ತಿದ್ದೀಯಾ ಬಿಡು'' ಎಂದು ಪೀಡಿಸುತ್ತಿದ್ದರು. ಆಗ ಹೆಡ್ಮೇಷ್ಟ್ರು ತಮ್ಮ ಜೋರು ಫಲಿಸಿತೆಂದೂ ದಯಾ ಈಗ ಹೆದರಿ ಬಾಯಿ ಬಿಡುತ್ತಿದ್ದಾನೆಂದೂ ಖುಶಿಯಲ್ಲಿ ಬೀಗುತ್ತಿದ್ದರು. ಆ ನಿರೀಕ್ಷೆಯಲ್ಲೇ ಹೆಡ್ಮೇಷ್ಟ್ರು ತಮ್ಮ ತವಕದಿಂದ ಅವನಿಗೆ ಮತ್ತಷ್ಟೂ ಹತ್ತಿರವಾದರು. ಮೇಲಾಗಿ, ಹ್ಲಾ..., ಹ್ಲೂ... ಬಾಯಿ ಬಿಡು, ಎಂದು ಗದರಿಸತೊಡಗಿದ್ದರು. ದಯನಿಗೆ ಪಾಪ ಏನೂ ತೋಚಲೇ ಇಲ್ಲ. ತಲೆಯನ್ನೊಮ್ಮೆ ಆಗಸದ ಕಡೆಗೆತ್ತಿ, ಥಕ್ಕಂತ ಕೆಳಗಿಳಿಸಿದವನೇ, ಫಟಾರಂತ ಬಲವಾದ ಸೀನೊಂದನ್ನು ಝಾಡಿಸಿಯೇ ಬಿಟ್ಟ. ಕ್ಷಣಾರ್ಧದಲ್ಲಿ ಹೆಡ್ಮೇಷ್ಟ್ರ ಮುಖದ ಮೇಲೆ ಘನಘೋರವಾದ ಸಿಡಿಲೊಂದು ಎರಗಿಬಿದ್ದಂತಾಗಿತ್ತು. ಅವರು ಸಂಪೂರ್ಣ ಕಂಗಾಲಾದರು. ಅವರ ಕನ್ನಡಕ, ಮುಖ, ಪಾಣೆ ಬುರುಡೆ ಎಲ್ಲಾ ಮಂಜು ಬಿದ್ದ ಪರ್ವತದಂತೆ ಒದ್ದೆಯಾಗಿದ್ದವು. ಇವರಿಬ್ಬರ ಜಗಳದಲ್ಲಿ ತನ್ನ ಪ್ರಾಣವನ್ನೇ ಅನ್ಯಾಯವಾಗಿ ಕಳೆದುಕೊಳ್ಳುತ್ತಿದ್ದ ನೊಣ ಹೆಡ್ಮೇಷ್ಟ್ರ ಮುಖದ ಮೇಲೆ ಬಿದ್ದದ್ದೇ ತಡ ಎದ್ದು, ಕುಳಿತಿತು. ಆ ಸಿಡಿಲಿನ ಶಬ್ದಕ್ಕೆ, ತಡಬಡಾಯಿಸಿದ್ದ ನೊಣ ಈ ಗುರು ಶಿಷ್ಯರ ಸಹವಾಸವೇ ಬೇಡಪ್ಪ ಎಂದು ಹಾರಿಹೋಯಿತು. ಹೆಡ್ಮೇಷ್ಟ್ರು ಸಂಪೂರ್ಣ ಹೆದರಿ ಕಂಗಾಲಾಗಿ, ಮುಖವನ್ನು ಕಿವುಚಿಕೊಂಡು ನಿಂತಿದ್ದರು. ಟೇಬಲ್ ಮೇಲೆ ನಿಂತಿದ್ದ ದಯಾ ಸಂಪೂರ್ಣ ನಿರಾಳವಾಗಿದ್ದ. ನೆಮ್ಮದಿ ಯಿಂದ ಉಸಿರಾಡುತ್ತಿದ್ದ.



ಕಲೀಮ ಉಲ್ಲಾ
[illegible]



# ಕರ್ನಾಟಕದ ಬಜೆಟ್ಟು ಮತ್ತು ಧರ್ಮಶಾಸ್ತ್ರ

ಡಾ|| ಟಿ. ಆರ್. ಚಂದ್ರಶೇಖರ

### ಪ್ರಸ್ತಾವನೆ

ಕರ್ನಾಟಕದ ೨೦೦೯-೧೦ನೆಯ ಸಾಲಿನ ಬಜೆಟ್ಟನ್ನು ಫೆಬ್ರವರಿ ೨೦, ೨೦೦೯ರಂದು ಹಣಕಾಸು ಮಂತ್ರಿಗಳೂ ಆಗಿರುವ ಮುಖ್ಯಮಂತ್ರಿ ಶ್ರೀ ಬಿ. ಎಸ್. ಯಡಿಯೂರಪ್ಪ ಅವರು ಮಂಡಿಸಿದಾಗ ಅದನ್ನು ಕನ್ನಡದ ಪ್ರಸಿದ್ಧ ದಿನಪತ್ರಿಕೆ 'ಪ್ರಜಾವಾಣಿ'ಯು (೨೦-೦೨-೨೦೦೯) 'ಹುಂಡಿ' ಬಜೆಟ್ಟೆಂದು ತನ್ನ ಸಂಪಾದಕೀಯದಲ್ಲಿ ಸರಿಯಾಗೇ ಟೀಕಿಸಿತ್ತು. ಇದು ಕೇವಲ ಹುಂಡಿ ಬಜೆಟ್ಟು ಮಾತ್ರವಲ್ಲ, ಇದು ಜಾತಿವಾದಿ ಬಜೆಟ್ಟು ಮತ್ತು ತಾರತಮ್ಯವಾದಿ ಬಜೆಟ್ಟು. ಈ ಬಜೆಟ್ಟಿನಲ್ಲಿ ಡಾ|| ಡಿ. ಎಂ. ನಂಜುಂಡಪ್ಪ ಸಮಿತಿ ವರದಿಯ ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆ ಬಗೆಗಿನ ನಾಲ್ಕು ಸಾಲು ಬಿಟ್ಟರೆ ಉಳಿದಂತೆ ಪ್ರಾದೇಶಿಕ ಅಸಮಾನತೆ ಬಗ್ಗೆ ಅಲ್ಲಿ ಏನನ್ನೂ ವಿಶೇಷವಾಗಿ ಹೇಳಿಲ್ಲ. ಬಜೆಟ್ಟು ಮಂಡಿಸುವ ಹಿಂದಿನ ದಿನ ವಿಧಾನಮಂಡಲದ ಮುಂದೆ ಸರ್ಕಾರವು ವಾಡಿಕೆಯಂತೆ ರಾಜ್ಯದ ೨೦೦೮-೦೯ನೆಯ ಸಾಲಿನ ಅಭಿವೃದ್ಧಿ ಮೌಲ್ಯಮಾಪನದ ವರದಿ 'ಆರ್ಥಿಕ ಸಮೀಕ್ಷೆ'ಯನ್ನು ಮಂಡಿಸಿದೆ. ಅದರಲ್ಲಿಯೂ ಪ್ರಾದೇಶಿಕ ಅಸಮಾನತೆ ನಿವಾರಣೆ ಬಗ್ಗೆ ಸರ್ಕಾರ ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆ ಬಾಬ್ತು ೨೦೦೮-೦೯ರಲ್ಲಿ ರೂ. ೨೫೯೭ ಕೋಟಿಯಷ್ಟನ್ನು ಖರ್ಚು ಮಾಡಿದ್ದರೂ ಅದರ ಬಗ್ಗೆ ಅಲ್ಲಲ್ಲೇ ಕೆಲವು ವಾಕ್ಯಗಳನ್ನು ಬಿಟ್ಟರೆ ಸಮೀಕ್ಷೆಯಲ್ಲಿ ಅದರ ಬಗ್ಗೆ ಯಾವುದೇ ಉಲ್ಲೇಖವಿಲ್ಲ. ಆರ್ಥಿಕ ಸಮೀಕ್ಷೆಯಲ್ಲಿ ರಾಜ್ಯದ ಒಟ್ಟು ಜನಸಂಖ್ಯೆಯ ಸುಮಾರು ಅರ್ಧದಷ್ಟಿರುವ ಮಹಿಳೆಯರ ಅಭಿವೃದ್ಧಿ ಬಗ್ಗೆ ಏನನ್ನೂ ಹೇಳಿಲ್ಲ. ಪ್ರಸ್ತುತ ಪ್ರಬಂಧದಲ್ಲಿ ಕರ್ನಾಟಕದ ೨೦೦೯-೧೦ನೆಯ ಸಾಲಿನ ಬಜೆಟ್ಟನ್ನು ಮತ್ತು ೨೦೦೮-೦೯ನೆಯ ಸಾಲಿನ ಆರ್ಥಿಕ ಸಮೀಕ್ಷೆಯನ್ನು ಕುರಿತಂತೆ ಚರ್ಚೆ ಮಾಡಲಾಗಿದೆ. ಅದಕ್ಕಿಂತ ಮುಖ್ಯವಾಗಿ ಧರ್ಮಶಾಸ್ತ್ರ, ಅಭಿವೃದ್ಧಿ, ಬಜೆಟ್ಟು ಮತ್ತು ಜನತಂತ್ರಗಳ ನಡುವಿನ ಸಂಬಂಧಗಳನ್ನು ಕುರಿತಂತೆ ಕೆಲವು ಮೂಲಭೂತ ಪ್ರಶ್ನೆಗಳನ್ನು ಇಲ್ಲಿ ಎತ್ತಲಾಗಿದೆ.

### ಕರ್ನಾಟಕದ ೨೦೦೯-೧೦ನೆಯ ಸಾಲಿನ ಬಜೆಟ್ಟು

ಆರ್ಥಿಕ, ರಾಜಕೀಯ ಸಿದ್ಧಾಂತಗಳನ್ನು ಮೀರಿದ ಕೇವಲ ಪಾರಮಾರ್ಥಿಕ ಬೋಧೆಯನ್ನು ಆಧರಿಸಿದ ಬಜೆಟ್ಟು ಇದಾಗಿದೆ. ಇದೊಂದು ಅವಾಸ್ತವಿಕ ಗುರಿಗಳನ್ನಿಟ್ಟುಕೊಂಡು ಹೊರಟಿರುವ ಬಜೆಟ್ಟಾಗಿದೆ. ಪಾರಮಾರ್ಥಿಕ ಪರಿಭಾಷೆಯಲ್ಲಿ ಬಜೆಟ್ಟನ್ನು ಕಟ್ಟಿರುವಂತೆ ಕಾಣುತ್ತದೆ. ವರ್ಗ ಸಂಬಂಧಗಳ ನೆಲೆಯಲ್ಲಿ ಅಭಿವೃದ್ಧಿಯನ್ನು ಪರಿಭಾವಿಸಿಕೊಳ್ಳುವುದಕ್ಕೆ ಪ್ರತಿಯಾಗಿ ಮುಖ್ಯಮಂತ್ರಿಗಳು ಇಲ್ಲಿ ಅಭಿವೃದ್ಧಿಯನ್ನು ಜಾತಿ ಸಂಬಂಧಗಳ ನೆಲೆಯಲ್ಲಿ ಪರಿಭಾವಿಸಿಕೊಂಡಿದ್ದಾರೆ. ವರ್ಗಸಂಬಂಧದ ನೆಲೆಯಲ್ಲಿ ದುಡಿಮೆಗಾರರು ಸಂಘಟಿತರಾಗಿ ಅಭಿವೃದ್ಧಿಯನ್ನು ತಮ್ಮ ಹಕ್ಕನ್ನಾಗಿ ಒತ್ತಾಯಿಸುವ ಕ್ರಮಕ್ಕೆ ಪ್ರತಿಯಾಗಿ ಇಲ್ಲಿ ಜಾತಿ ಸಂಬಂಧದ ನೆಲೆಯಲ್ಲಿ ಜನರು ಅಭಿವೃದ್ಧಿಯನ್ನು ಯಾಚಿಸುವ ಕ್ರಮಕ್ಕೆ ಮನ್ನಣೆ ಕೊಟ್ಟಿರುವುದು ಕಂಡುಬರುತ್ತದೆ. ಈ ದೃಷ್ಟಿಯಿಂದ ಇದು ಜನತಾಂತ್ರಿಕ ಮೌಲ್ಯಗಳಿಗೆ ವಿರುದ್ಧವಾದ ಬಜೆಟ್ಟಾಗಿದೆ.

ಜಾತಿಯನ್ನು ಆಧರಿಸಿದ ಮಠಗಳಿಗೆ ಮತ್ತು ಜಾತಿ ಸಂಬಂಧಿ ಸ್ವಾಮಿಗಳಿಗೆ ಬಜೆಟ್ಟಿನಲ್ಲಿ ರಾಶಿರಾಶಿ ಅನುದಾನವನ್ನು ಘೋಷಿಸಲಾಗಿದೆ. ಅದನ್ನು ಮುಖ್ಯಮಂತ್ರಿಗಳು ದೊಡ್ಡ ಬಾಯಿಯಿಂದ ಸಮರ್ಥಿಸಿಕೊಳ್ಳುತ್ತಿದ್ದಾರೆ. ನಮ್ಮ ಸಂದರ್ಭದಲ್ಲಿ ಪ್ರಬಲ ಜಾತಿಗಳು ಮಾತ್ರ ಮಠಗಳನ್ನು ಮತ್ತು ಸ್ವಾಮಿಗಳನ್ನು ಕಟ್ಟಿಕೊಂಡಿವೆ. ಅದರಲ್ಲಿ ಕೆಲವು ಅತಿ ಶ್ರೀಮಂತ ಮಠಗಳಾಗಿದ್ದರೆ ಕೆಲವು ಮಠಗಳಲ್ಲಿ ಬಡ ಸ್ವಾಮಿಗಳಿದ್ದಾರೆ. ಇವುಗಳಿಗೆ ಅನುದಾನ ನೀಡುವಾಗ ಯಾವ ಮಾನದಂಡದ ಮೇಲೆ ಅದನ್ನು ನೀಡಲಾಯಿತೆಂಬುದಕ್ಕೆ ಬಜೆಟ್ಟಿನಲ್ಲಿ ಯಾವುದೇ ಮಾಹಿತಿ ಇಲ್ಲ. ವಾಸ್ತವ ಸಂಗತಿಯೆಂದರೆ ಅಂತಹ ಮಾನದಂಡಗಳನ್ನು ಸರ್ಕಾರವು ರೂಪಿಸಿರುವಂತೆ ಕಾಣುತ್ತಿಲ್ಲ.

ಒಂದು ಮಠಕ್ಕೆ ಐದು ಕೋಟಿ, ಇನ್ನೊಂದು ಮಠಕ್ಕೆ ಎರಡು ಕೋಟಿ, ಮತ್ತೊಂದಕ್ಕೆ ಒಂದು ಕೋಟಿ ಹೀಗೆ ಅನುದಾನವನ್ನು ನೀಡಲಾಗಿದೆ. ಇಲ್ಲಿ ಏಳುವ ಪ್ರಮುಖ ಪ್ರಶ್ನೆಯೆಂದರೆ ಮಠಗಳಿಲ್ಲದ - ಸ್ವಾಮಿಗಳಿಲ್ಲದ ಜಾತಿಗಳಿಗೆ ಸರ್ಕಾರವು ಹೇಗೆ ಅನುದಾನ ನೀಡುತ್ತದೆ? ಅವುಗಳಿಗೆ ನೀಡದಿದ್ದರೆ ಆಗ ಜಾತಿ-ಜಾತಿಗಳ ನಡುವೆ ತಾರತಮ್ಯ ವೆಸಗಿದಂತಾಗುವುದಿಲ್ಲವೆ? ಸರ್ಕಾರವೊಂದು ಹೀಗೆ ನಡೆದುಕೊಳ್ಳಬಹುದೇ? ಅಂದರೆ ಇಲ್ಲಿ ಜಾತಿಗಳನ್ನು ಆಧರಿಸಿ ಅಭಿವೃದ್ಧಿಯನ್ನು ಪರಿಭಾವಿಸಿಕೊಂಡಿರುವ ಕ್ರಮವು ಕೆಲಸ ಮಾಡಿರುವಂತಿದೆ. ನಿಜಕ್ಕೂ ಈ ರೀತಿಯಲ್ಲಿ ಸಮಾಜದಲ್ಲಿ ಇರುವ ಬಡತನವನ್ನು, ಹಸಿವನ್ನು, ಅನಕ್ಷರತೆಯನ್ನು, ಅಸ್ವಸ್ಥತೆಯನ್ನು ಪರಿಹರಿಸಲು ಸಾಧ್ಯವೇ? ಬಡವರ, ದಲಿತರ, ವಂಚಿತರ, ಮಹಿಳೆಯರ ಅಭಿವೃದ್ಧಿಯ ಜವಾಬುದಾರಿಯನ್ನು ಹೀಗೆ ಮಠಗಳಿಗೆ ವಹಿಸಿಕೊಡುವ ಪ್ರಣಾಳಿಕೆ ಬಗ್ಗೆ ನಾವು ಗಂಭೀರವಾಗಿ ಯೋಚಿಸಬೇಕಾಗಿದೆ.

ರಾಜ್ಯದಲ್ಲಿ ಜಾರಿಯಲ್ಲಿರುವ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯಡಿಯಲ್ಲಿ ರೂ. ೮೦ ದಿನಗೂಲಿ ನೀಡಬೇಕಾದರೆ ಸರ್ಕಾರವು ಕೂಲಿಕಾರರಿಗೆ ಹತ್ತಾರು ಷರತ್ತುಗಳನ್ನು ವಿಧಿಸುತ್ತದೆ. ಅವರು ಜಾಬ್ ಕಾರ್ಡ್ ಹೊಂದಿರಬೇಕು. ಬ್ಯಾಂಕಿನಲ್ಲಿ ಖಾತೆ ತೆರೆದಿರಬೇಕು. ಒಂದು ದಿನಕ್ಕೆ ಒಂದು ಮೀಟರ್ ಆಳದ, ಒಂದು ಮೀಟರ್ ಅಗಲದ ಮತ್ತು ಒಂದು ಮೀಟರ್ ಉದ್ದದ (ಘನ ಮೀಟರ್) ಕಾಮಗಾರಿ ಮಾಡಿರಬೇಕು ಎಂಬೆಲ್ಲ ಕಟ್ಟುನಿಟ್ಟಾದ ಷರತ್ತುಗಳನ್ನು ವಿಧಿಸಲಾಗಿದೆ. ಆದರೆ ಬಜೆಟ್ಟಿನಲ್ಲಿ ಮಠಗಳಿಗೆ ನೀಡಿರುವ ಕೋಟಿ-ಕೋಟಿ ಅನುದಾನಕ್ಕೆ ಯಾವ ಯಾವ ನಿಯಮಗಳನ್ನು, ನಿಯಂತ್ರಣಗಳನ್ನು, ಷರತ್ತುಗಳನ್ನು ನಿಯಮಿಸಲಾಗಿದೆ? ಮಠಗಳು ಅನುದಾನ ಬಳಸಿ ಮಾಡುವ ಕಾಮಗಾರಿಗಳ ಮೇಲೆ ಸರ್ಕಾರದ ಉಸ್ತುವಾರಿಯಿರುತ್ತದೆಯೆ? ಸಂವಿಧಾನಾತ್ಮಕ ನಿಯಮಗಳಂತೆ ಅವು ಅನುದಾನ ವ್ಯಯಿಸಬೇಕಾದರೆ ಅಲ್ಲಿ ಇಂತಿಷ್ಟನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಖರ್ಚು ಮಾಡುವ ಷರತ್ತನ್ನು ಸರ್ಕಾರವು ವಿಧಿಸಿದೆಯೇ? ಇಲ್ಲದಿದ್ದರೆ ಇಂತಹ ಕ್ರಮಗಳನ್ನು ಸಮರ್ಥಿಸಿಕೊಳ್ಳುವುದು ಹೇಗೆ? ಸಾಮಾಜಿಕ ನ್ಯಾಯವೆಂಬುದನ್ನು ಸರ್ಕಾರವು ಬಜೆಟ್ಟಿನಲ್ಲಿ ವಿಕೃತಗೊಳಿಸಿದಂತೆ ಭಾಸವಾಗುತ್ತಿದೆ.

### ಯೋಜನಾ ವೆಚ್ಚದಲ್ಲಿ ಎಷ್ಟು ಖರ್ಚಾಗಿದೆ?

ಕರ್ನಾಟಕದ ೨೦೦೮-೦೯ನೆಯ ಸಾಲಿನ ಯೋಜನಾ ವೆಚ್ಚ ರೂ. ೨೫,೯೫೨ ಕೋಟಿ. ಅದರ ಹಿಂದಿನ ವರ್ಷದ (೨೦೦೭-೦೮) ಯೋಜನಾ ವೆಚ್ಚವಾದ ರೂ. ೧೭,೨೨೭ ಕೋಟಿಗಿಂತ ಅದು ಶೇ. ೫೦.೬೪ರಷ್ಟು ಅಧಿಕವಾಗಿತ್ತು. ಅದೊಂದು ಅಗಾಧವಾದ ಏರಿಕೆಯಾಗಿತ್ತು. ಆದರೆ ವಾಸ್ತವಿಕ ಸಂಗತಿಯೆಂದರೆ ೨೦೦೮-೦೯ರಲ್ಲಿ ಸರ್ಕಾರವು ಯೋಜನಾ ವೆಚ್ಚವನ್ನು ಪೂರ್ಣವಾಗಿ ಉಪಯೋಗಿಸಿಕೊಂಡಿರುವುದರ ಬಗ್ಗೆ ಅನುಮಾನವಿದೆ. ಒಂದು ಮೂಲದ ಪ್ರಕಾರ ಡಿಸೆಂಬರ್ ೨೦೦೮ರವರೆಗೆ ಸರ್ಕಾರವು

ಯೋಜನಾ ವೆಚ್ಚದಲ್ಲಿ ಕೇವಲ ರೂ. ೧೫ರಿಂದ ೧೬ ಸಾವಿರ ಕೋಟಿ ಉಪಯೋಗಿಸಿಕೊಂಡಿದೆ. ಉಳಿದ ಮೂರು ತಿಂಗಳಲ್ಲಿ ಮಿಕ್ಕಿದ್ದನ್ನು ಬಳಸಿಕೊಳ್ಳುವುದು ಹೇಗೆ ಸಾಧ್ಯ ?

ಸರ್ಕಾರವು ೨೦೦೮-೦೯ರಲ್ಲಿ ಕಂದಾಯ ಸಂಗ್ರಹಕ್ಕೆ ನಿಗದಿಪಡಿಸಿದ್ದ ಗುರಿ ರೂ. ೪೭,೨೪೦ ಕೋಟಿ. ಆದರೆ ಅಲ್ಲಿ ಸಂಗ್ರಹವಾಗಿರುವ ಮೊತ್ತ ಕೇವಲ ರೂ. ೪೨,೮೧೮ ಕೋಟಿ. ಅಂದರೆ ಕಂದಾಯ ಸಂಗ್ರಹದಲ್ಲಿ ಶೇ. ೯.೩೬ ರಷ್ಟು ಕುಸಿತ ಉಂಟಾಗಿದೆ. ಈ ಕಂದಾಯ ಸಂಗ್ರಹವನ್ನು ೨೦೦೯-೧೦ರಲ್ಲಿ ಹಿಂದಿನ ವರ್ಷಕ್ಕಿಂತ ಶೇ. ೧೩.೦೧ ರಷ್ಟು ಏರಿಸುವ ಗುರಿ ಇಟ್ಟುಕೊಳ್ಳಲಾಗಿದೆ. ಇದು ಅವಾಸ್ತವಿಕ ಸಂಗತಿಯಾಗಿದೆ. ಸರ್ಕಾರವು ೨೦೦೮-೦೯ರಲ್ಲಿ ನಿಗದಿ ಪಡಿಸಿದ್ದ ಬಜೆಟ್ಟಿನ ಗಾತ್ರ ರೂ. ೫೫,೨೭೩.೯೪ ಕೋಟಿ. ಆದರೆ ಈಗ ತಿಳಿದುಬಂದಿರುವಂತೆ ಪರಿಷ್ಕೃತ ಅಂದಾಜಿನ ಪ್ರಕಾರ ೨೦೦೮-೦೯ರಲ್ಲಿನ ಬಜೆಟ್ಟಿನ ಗಾತ್ರ ಕೇವಲ ರೂ. ೫೩,೦೯೬ ಕೋಟಿಯಷ್ಟಾಗಿದೆ. ಅಂದರೆ ಅಲ್ಲಿ ಬಜೆಟ್ಟಿನ ಗಾತ್ರದಲ್ಲಿ ಕುಸಿತ ಉಂಟಾಗಿದೆ. ಈ ಹಿನ್ನೆಲೆಯಲ್ಲಿ ನಾವು ೨೦೦೯-೧೦ನೆಯ ಸಾಲಿನ ಬಜೆಟ್ಟನ್ನು ಪರಿಶೀಲಿಸಬೇಕಾಗಿದೆ.

ಯೋಜನಾ ವೆಚ್ಚವನ್ನು ಅಗಾಧ ಪ್ರಮಾಣದಲ್ಲಿ ಅರಗಿಸಿಕೊಳ್ಳುವ ಸಾಮರ್ಥ್ಯ ನಮ್ಮ ಆರ್ಥಿಕತೆಗಿಲ್ಲ. ಏಕೆಂದರೆ ಜಾಗತೀಕರಣದ ಸಂದರ್ಭದಲ್ಲಿ ನಮ್ಮ ಮಾರುಕಟ್ಟೆಯು ಸಂಪೂರ್ಣವಾಗಿ ಮಧ್ಯಮವರ್ಗವನ್ನು ಅವಲಂಬಿಸಿಕೊಂಡಿದೆ. ಆದರೆ ಈ ಮಧ್ಯಮ ವರ್ಗದ ಗಾತ್ರವು ವಿಸ್ತೃತಗೊಳ್ಳುತ್ತಿಲ್ಲ. ಅದು ಸೀಮಿತವಾಗಿದೆ ಮತ್ತು ಸ್ಥಿರವಾಗಿದೆ. ನಮ್ಮ ಮಾರುಕಟ್ಟೆಯು ಅದೇ ೧೦೦ರಿಂದ ೧೨೦ ಲಕ್ಷ ಮಧ್ಯಮ ವರ್ಗವನ್ನೇ ಎಲ್ಲದಕ್ಕೂ ನೆಮ್ಮಿಕೊಳ್ಳುವಂತಾಗಿದೆ. ಇದರಿಂದಾಗಿ ಬಂಡವಾಳವನ್ನು ಧಾರಣೆ ಮಾಡಿಕೊಳ್ಳುವ ನಮ್ಮ ಆರ್ಥಿಕತೆಯ ಸಾಮರ್ಥ್ಯವು ತುಂಬಾ ಸೀಮಿತವಾಗಿದೆ. ಅದು ಅದೇ ಮಧ್ಯಮವರ್ಗದ ಸುತ್ತಾ ಗಿರಕಿಹೊಡೆಯುತ್ತಿದೆ. ಯೋಜನಾ ಗಾತ್ರವನ್ನು ಹಿಗ್ಗಿಸಿಬಿಟ್ಟರೆ ಮುಗಿಯಲಿಲ್ಲ. ಅದಕ್ಕೆ ತಕ್ಕಂತೆ ಮಾರುಕಟ್ಟೆಯ ವ್ಯಾಪ್ತಿಯನ್ನು ವಿಸ್ತೃತಗೊಳಿಸಬೇಕು. ಆಗ ಮಾತ್ರ ಯೋಜನಾ ಖಾತೆಯಲ್ಲಿ ಹೆಚ್ಚು ವ್ಯಯಿಸಲು ಬರುತ್ತದೆ. ಈ ಬಜೆಟ್ಟಿನಲ್ಲಿ ನಮ್ಮ ಮಾರುಕಟ್ಟೆಯು ಜನರನ್ನು ಅಂದರೆ ವಂಚಿತರನ್ನು, ಮಹಿಳೆಯರನ್ನು, ದಲಿತರನ್ನು, ಕೂಲಿಕಾರರನ್ನು ಒಳಗೊಳ್ಳುವಂತೆ ಮಾಡುವ ಯಾವುದೇ ಪ್ರಸ್ತಾವವಿಲ್ಲ. ಇಲ್ಲಿ ಸರ್ಕಾರವು ಹಾಕಿಕೊಂಡಿರುವ ಕಾರ್ಯತಂತ್ರಗಳೆಲ್ಲ ಈಗಾಗಲೇ ಮಾರುಕಟ್ಟೆಯಲ್ಲಿ ನೆಲೆಯೂರಿರುವ ಗ್ರಾಹಕರನ್ನೇ ಗುರಿಯಾಗಿಟ್ಟುಕೊಂಡಿವೆ. ರಾಜ್ಯದ ಯೋಜನಾ ಗಾತ್ರವೇನೋ ಹಿಗ್ಗುತ್ತಿದೆ. ಆದರೆ, ಅದಕ್ಕೆ ತಕ್ಕಂತೆ ಆರ್ಥಿಕತೆಯ ಧಾರಣಾ ಸಾಮರ್ಥ್ಯವು ವಿಸ್ತೃತಗೊಳ್ಳುತ್ತಿಲ್ಲ. ಇದು ನಮ್ಮ ನಿಜವಾದ ಸಮಸ್ಯೆಯಾಗಿದೆ. ಆದರೆ ಬಜೆಟ್ಟು ಅದರ ಬಗ್ಗೆ ಮೌನವಹಿಸಿಬಿಟ್ಟಿದೆ. ಈ ಸಮಸ್ಯೆಯನ್ನೇ ಅಲ್ಲಿ ಗುರುತಿಸಿದಂತೆ ಕಾಣುವುದಿಲ್ಲ.

**ಪ್ರಾದೇಶಿಕ ಅಸಮಾನತೆ**

ಕರ್ನಾಟಕದ ಅಭಿವೃದ್ಧಿಯನ್ನು ಕುರಿತ ಚರ್ಚೆಯು ಅದರ ಅಭಿವೃದ್ಧಿ ಸಂಬಂಧಿ ಪ್ರಾದೇಶಿಕ ಅಸಮಾನತೆಯನ್ನು ಗುರುತಿಸದೆ ಮುಗಿಯುವುದಿಲ್ಲ. ನಮ್ಮ ಆರ್ಥಿಕತೆಯ ಧಾರಣಾ ಸಾಮರ್ಥ್ಯವು ಸೀಮಿತವಾಗಿರುವುದಕ್ಕೆ ಮತ್ತೊಂದು ಕಾರಣ ಪ್ರಾದೇಶಿಕ ಅಸಮಾನತೆ. ಇದು ರಾಜ್ಯದ ಸರಿ ಸುಮಾರು ಒಂದೂವರೆ ಕೋಟಿ ಜನರಿಗೆ ಸಂಬಂಧಿಸಿದ ಸಂಗತಿಯಾಗಿದೆ. ಆದರೆ ಬಜೆಟ್ಟಿನಲ್ಲಿ ಡಾ॥ ಡಿ. ಎಂ. ನಂಜುಂಡಪ್ಪ ಸಮಿತಿ ವರದಿಯ 'ಎಂಟು ವರ್ಷದ ವಿಶೇಷ ಅಭಿವೃದ್ಧಿ ಯೋಜನೆ'ಯೊಂದನ್ನು ಬಿಟ್ಟು ಪ್ರಾದೇಶಿಕ ಅಸಮಾನತೆ ಬಗ್ಗೆ ಅಥವಾ ಅದರ ಬೇರಾವುದೇ ಇತರೆ ಸಂಗತಿಗಳ ಬಗ್ಗೆ ಅಲ್ಲಿ ಚರ್ಚೆ ನಡೆದಿಲ್ಲ. ಇರಲಿ, ಆ ಎಂಟು ವರ್ಷದ ವಿಶೇಷ ಅಭಿವೃದ್ಧಿ ಯೋಜನೆಯಾದರೂ ಸಮರ್ಪಕವಾಗಿ ಅನುಷ್ಠಾನಗೊಳ್ಳುತ್ತಿದೆಯಾ ಅಂದರೆ ಅದೂ ಇಲ್ಲ. ಅದರ ಮೊದಲ ವರ್ಷದಲ್ಲಿ (೨೦೦೭-೦೮) ಅದಕ್ಕಾಗಿ ಬಜೆಟ್ಟಿನಲ್ಲಿ ನೀಡಲಾದ ಮೊತ್ತ ರೂ. ೧,೫೭೧.೫೦ ಕೋಟಿಯಲ್ಲಿ ವಾಸ್ತವಿಕವಾಗಿ ಅಲ್ಲಿ ಖರ್ಚಾಗಿರುವುದು ಕೇವಲ ರೂ. ೯೭೬.೩೨ ಕೋಟಿ ಮಾತ್ರ ಎರಡನೆಯ ವರ್ಷದಲ್ಲಿ ನೀಡಲಾದ ಮೊತ್ತವಾದ ರೂ. ೨,೫೪೭ ಕೋಟಿಯಲ್ಲಿ ಎಷ್ಟು ಖರ್ಚಾಗಿದೆ ಎಂಬುದರ ಬಗ್ಗೆ ಮಾಹಿತಿಯಿಲ್ಲ. ಅದು ಪೂರ್ಣವಾಗಿ ಖರ್ಚಾಗಿರಲು ಸಾಧ್ಯವಿಲ್ಲ. ಸರ್ಕಾರವು ೨೦೦೮-೦೯ರಲ್ಲಿ ನಿಗದಿಪಡಿಸಿದ್ದ ರೂ. ೫೫,೨೭೩.೯೪ ಕೋಟಿ ಬಜೆಟ್ಟಿನಲ್ಲಿ ಅದಕ್ಕೆ ಖರ್ಚು ಮಾಡಲು ಸಾಧ್ಯವಾಗಿರುವುದು ರೂ. ೫೩,೦೯೬ ಕೋಟಿ ಮಾತ್ರ. ಅದಕ್ಕೆ ೨೦೦೮-೦೯ ರಲ್ಲಿ ನಿಗದಿ ಪಡಿಸಿದ್ದ ಕಂದಾಯ ರೂ. ೪೭,೨೪೦ ಕೋಟಿಯಲ್ಲಿ ವಾಸ್ತವಿಕವಾಗಿ ಸಂಗ್ರಹಿಸಿರುವ ಮೊತ್ತ ರೂ. ೪೨,೮೧೮ ಕೋಟಿ ಮಾತ್ರ.

ಇಲ್ಲಿ ನಮಗೆ ಕಳೆದ ಮೂರು ವರ್ಷಗಳಿಂದ ಬಗೆಹರಿಯದಿರುವ ಪ್ರಶ್ನೆಯೆಂದರೆ ಎಂಟು ವರ್ಷದ ವಿಶೇಷ ಅಭಿವೃದ್ಧಿ ಯೋಜನೆಗೆ ಮೀಸಲಿಟ್ಟಿರುವ ಮೊತ್ತವು 'ಹೆಚ್ಚುವರಿ'ಯಾದುದೋ ಅಥವಾ ಅದು ಯೋಜನಾ ವೆಚ್ಚದ ಅಂತರ್ಗತ ಭಾಗವೋ ಎಂಬುದಾಗಿದೆ. ಬಜೆಟ್ಟಿನ ದಾಖಲೆಗಳು ಮತ್ತು ಇತರೆ ಮೂಲಗಳು ತಿಳಿಸುವಂತೆ ಸರ್ಕಾರವು ವಿಶೇಷ ಅಭಿವೃದ್ಧಿ ಯೋಜನೆಗಾಗಿ ಯಾವುದೇ ಪ್ರತ್ಯೇಕ ಅನುದಾನವನ್ನು ಮೀಸಲಿಟ್ಟಿಲ್ಲ. ಆದರೆ ಅದು ಹೆಚ್ಚುವರಿಯೆಂದು ಸುಳ್ಳು-ಸುಳ್ಳೇ ಹೇಳಿಕೊಳ್ಳುತ್ತಿದೆ. ಹಾಗೆ ಒಂದು ವೇಳೆ ಅದು ಹೆಚ್ಚುವರಿಯಾಗಿದ್ದಿದ್ದರೆ ಬಜೆಟ್ಟಿನ ಯೋಜನಾ ವೆಚ್ಚದ ಬಾಬ್ತುವಿನಲ್ಲಿ ಎಂಟು ವರ್ಷದ ವಿಶೇಷ ಅಭಿವೃದ್ಧಿ ಯೋಜನೆಯ ೨೦೦೯-೧೦ನೆಯ ಸಾಲಿನ ಅನುದಾನ ರೂ. ೨,೫೭೪ ಕೋಟಿಯನ್ನು ತೋರಿಸಬೇಕಾಗಿತ್ತು. ಅದರಲ್ಲಿ ಸಣ್ಣ ಪುಟ್ಟ ಬಾಬ್ತು ವಿವರಗಳನ್ನು ನೀಡಲಾಗಿದೆ. ಅಲ್ಲಿ ರೂ. ೨,೫೭೪ ಕೋಟಿ ಅನುದಾನದ ನಮೂದು ಮಾತ್ರ ಇಲ್ಲವೆಂದರೆ ಏನು ಅರ್ಥ ? ಈ ರೂ. ೨,೫೭೪ ಕೋಟಿ ಹೆಚ್ಚುವರಿ ಅನುದಾನವಲ್ಲವೆಂಬುದು ಸ್ಪಷ್ಟವಾಗಿದೆ. ಇನ್ನೂ ಅದರ ವಿನಿಯೋಜನೆ ಬಗ್ಗೆ ಏನನ್ನೂ ಹೇಳದಿರುವುದೇ ಲೇಸು ಎನ್ನುವಂತಿದೆ.

ಡಾ॥ ಡಿ.ಎಂ. ನಂಜುಂಡಪ್ಪ ಸಮಿತಿ ವರದಿಯಲ್ಲಿ ಎಂಟು ವರ್ಷದ ವಿಶೇಷ ಅಭಿವೃದ್ಧಿ ಯೋಜನೆ ಅನುದಾನವನ್ನು ತಾಲ್ಲೂಕುವಾರು ವಿನಿಯೋಜಿಸಬೇಕೆಂದು ಶಿಫಾರಸ್ಸು ಮಾಡಿದೆ. ಅದು ಗುರುತಿಸಿದ್ದ ೧೧೪ ಹಿಂದುಳಿದ ತಾಲ್ಲೂಕುಗಳ ನಡುವೆ ಅವುಗಳ ಸಂಚಯಿತ ದುಸ್ಥಿತಿ ಸೂಚ್ಯಂಕವನ್ನು ಆಧರಿಸಿ ಹಂಚುವಂತೆ ಶಿಫಾರಸ್ಸು ಮಾಡಲಾಗಿದೆ. ಅದರ ಪ್ರಕಾರ ಅನುದಾನವನ್ನು ಹಂಚಿದರೆ ೨೦೦೯-೧೦ನೆಯ ಸಾಲಿನ ರೂ. ೨,೫೭೪ ಕೋಟಿಯಲ್ಲಿ ರಾಜ್ಯದ ಅತ್ಯಂತ ಹಿಂದುಳಿದ ದೇವದುರ್ಗ ತಾಲ್ಲೂಕಿಗೆ ದೊರೆಯಬೇಕಾದ ಮೊತ್ತ ರೂ. ೫೯.೭೨ ಕೋಟಿ. ಏಕೆಂದರೆ ಅದರ ದುಸ್ಥಿತಿ ಸೂಚ್ಯಂಕ ೦.೪೭. ರಾಜ್ಯದ ೧೧೪ ಹಿಂದುಳಿದ ತಾಲ್ಲೂಕುಗಳ ಸಂಚಯಿತ ದುಸ್ಥಿತಿ ಸೂಚ್ಯಂಕ ೨೦.೨೬. ಅದರಲ್ಲಿ ದೇವದುರ್ಗದ ಪಾಲು ಶೇ. ೨.೩೨ (೦.೪೭/೨೦.೨೬×೧೦೦=ಶೇ. ೨.೩೨). ಅಂದರೆ ರೂ. ೨,೫೭೪ ಕೋಟಿಯಲ್ಲಿ ಅದರ ಪಾಲು ರೂ. ೫೯.೭೨ ಕೋಟಿ (೨.೩೨/೧೦೦×ರೂ. ೨,೫೭೪ ಕೋಟಿ = ರೂ. ೫೯.೭೨ ಕೋಟಿ).

ವಿಶೇಷ ಅಭಿವೃದ್ಧಿ ಯೋಜನೆಯಡಿಯಲ್ಲಿ ಸರ್ಕಾರವು ಅನುದಾನವನ್ನು ತಾಲ್ಲೂಕುವಾರು ನೀಡುತ್ತಿಲ್ಲ ಮತ್ತು ಅದನ್ನು ಸಂಚಯಿತ ದುಸ್ಥಿತಿ ಸೂಚ್ಯಂಕವನ್ನು ಆಧರಿಸಿ ನೀಡುತ್ತಿಲ್ಲ. ಅನುದಾನ ಹಂಚಿಕೆಗೆ ಸಂಬಂಧಿಸಿದಂತೆ ಸರ್ಕಾರವು ೨೦೦೭-೦೮ರಲ್ಲಿ ಸಮಿತಿಯು ಶಿಫಾರಸ್ಸು ಮಾಡಿದ್ದ ಸೂತ್ರವನ್ನು ಬಿಟ್ಟು ತನ್ನದೇ ಸೂತ್ರವನ್ನು ಅಳವಡಿಸಿಕೊಂಡಿತ್ತು. ಆದರೆ ಅದು ಅತ್ಯಂತ ಹಿಂದುಳಿದ ತಾಲ್ಲೂಕುಗಳಿಗೆ ಅನ್ಯಾಯ ಮಾಡುತ್ತದೆಯೆಂಬುದನ್ನು ಸರ್ಕಾರದ ಗಮನಕ್ಕೆ ನಾವು ತಂದಮೇಲೆ ಅದನ್ನು ಕೈಬಿಡಲಾಗಿದೆ. ಆದರೆ ಅನುದಾನವನ್ನು ತಾಲ್ಲೂಕುವಾರು ಅಥವಾ ಜಿಲ್ಲಾ ಪಂಚಾಯಿತಿ ಮೂಲಕ ವಿನಿಯೋಜಿಸುವ ಕ್ರಮವನ್ನು ಅನುಸರಿಸಬೇಕಾಗಿತ್ತು. ಆದರೆ ಸರ್ಕಾರವು ಇದಾವುದನ್ನು ಮಾಡದೆ ರಾಜ್ಯ ಮಟ್ಟದ ಸಂಬಂಧಿಸಿದ ಅಧಿಕಾರಿಗಳ ಮೂಲಕ ಅನುದಾನವನ್ನು ವಿನಿಯೋಜಿಸುತ್ತಿದೆ. ಇದು ಎರಡು ದೃಷ್ಟಿಯಿಂದ ಅಸಮರ್ಥನೀಯ. ಮೊದಲನೆಯದಾಗಿ ಇದು ಡಾ॥ ಡಿ. ಎಂ. ನಂಜುಂಡಪ್ಪ ಸಮಿತಿ ವರದಿಯ ಶಿಫಾರಸ್ಸಿಗೆ ವಿರುದ್ಧವಾದುದಾಗಿದೆ ಮತ್ತು ಎರಡನೆಯದಾಗಿ ಇದು ವಿಕೇಂದ್ರೀಕರಣ ನೀತಿಗೆ ಮಾರಕವಾಗಿದೆ.

**ಯೋಜನಾ ವೆಚ್ಚದ ವಿವರ**

ಈಗಾಗಲೆ ತಿಳಿಸಿರುವಂತೆ ೨೦೦೯-೧೦ನೆಯ ಸಾಲಿಗೆ ಸರ್ಕಾರವು ನಿಗದಿಪಡಿಸಿರುವ ಯೋಜನಾ ಮೊತ್ತ ರೂ. ೨೯,೫೦೦ ಕೋಟಿ. ಇದು ೨೦೦೮-೦೯ನೆಯ ಸಾಲಿನ ಮೊತ್ತಕ್ಕೆ ಹೋಲಿಸಿದರೆ ಶೇ.೧೩.೬೭ರಷ್ಟು ಅಧಿಕವಾಗುತ್ತದೆ. ಅದು ಅತ್ಯಂತ ಬೃಹತ್ ಮೊತ್ತವಾಗಿದೆ. ಈ ಯೋಜನಾ ವೆಚ್ಚವನ್ನು ವಲಯವಾರು ಹೇಗೆ ಹಂಚಲಾಗಿದೆ ಎಂಬುದನ್ನು ಪರಿಶೀಲಿಸಿದರೆ ನಮಗೆ ಸರ್ಕಾರವು ಬಜೆಟ್ಟಿನಲ್ಲಿ ಯಾವ ವಲಯಕ್ಕೆ ಆದ್ಯತೆ ನೀಡಿದೆಯೆಂಬುದು ತಿಳಿಯುತ್ತದೆ. ಬಜೆಟ್ಟಿನಲ್ಲಿ ಸರ್ಕಾರದ ಆದ್ಯತೆಯ ದೊಡ್ಡ ಪಟ್ಟಿಯನ್ನೆ ನೀಡಲಾಗಿದೆ (ನೋಡಿ : ಬಜೆಟ್ ಭಾಷಣ- ಕಂಡಿಕೆ ಸಂಖ್ಯೆ೪೧) ಅದರ ಪ್ರಕಾರ ಅದರ ಆದ್ಯತೆಗಳು ಕೃಷಿ ಮತ್ತು ತತ್ಸಂಬಂಧಿ ಚಟುವಟಿಕೆಗಳು (ಶೇ. ೭.೧೯), ಗ್ರಾಮೀಣಾಭಿವೃದ್ಧಿ (ಶೇ. ೫.೦೯), ಶಿಕ್ಷಣ (ಶೇ. ೭.೭೯), ಸಾರಿಗೆ (ಶೇ. ೧೨.೯೦), ನೀರಾವರಿ (ಶೇ. ೧೩.೫೦), ಇಂಧನ (ಶೇ. ೧೨.೨೭), ಬಜೆಟ್ಟಿನ ಯೋಜನಾ ವೆಚ್ಚದಲ್ಲಿ ನಗರಾಭಿವೃದ್ಧಿಗೆ ನೀಡಿರುವ ಪ್ರಮಾಣ ಶೇ. ೧೫.೫೪. ಅಂದರೆ ಇಲ್ಲಿ ಸರ್ಕಾರದ ಆದ್ಯತೆ ನಗರಾಭಿವೃದ್ಧಿಯೆಂಬುದು ಸ್ಪಷ್ಟವಾಗುತ್ತದೆ. ರಾಜ್ಯದಲ್ಲಿ ಶೇ. ೩೬ರಷ್ಟಿರುವ ನಗರವಾಸಿಗಳಿಗೆ ಬಜೆಟ್ಟಿನಲ್ಲಿ ನೀಡಿರುವ ಪ್ರಮಾಣ ಶೇ. ೧೫.೫೪ರಷ್ಟಾದರೆ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿಗೆ ನೀಡಿರುವ ಪ್ರಮಾಣ ಕೇವಲ ಶೇ. ೧೨.೨೮. ಆದರೆ ಬಜೆಟ್ಟಿನಲ್ಲಿ ಸರ್ಕಾರವು ನೀಡಿರುವ ಆದ್ಯತಾ ವಲಯಗಳ ಪಟ್ಟಿಯಲ್ಲಿ ನಗರಾಭಿವೃದ್ಧಿ ಕಂಡುಬರುವುದಿಲ್ಲ. ರಾಜ್ಯದ ಯೋಜನಾ ವೆಚ್ಚದ ರೂ. ೨೯,೫೦೦ ಕೋಟಿಯಲ್ಲಿ ನಗರಾಭಿವೃದ್ದಿಗೆ ರೂ. ೪,೫೮೩.೬೪ ಕೋಟಿಯನ್ನು ನೀಡುವ ಅಗತ್ಯವಿರಲಿಲ್ಲ. ನಗರ ಸ್ಥಳೀಯ ಸಂಸ್ಥೆಗಳ ವರಮಾನದ ಮೂಲವನ್ನು ಸುಸಂಬದ್ಧಗೊಳಿಸುವುದರ ಮೂಲಕ ಮತ್ತು ಅದನ್ನು ಸೂಕ್ತವಾಗಿ ಸಂಘಟಿಸುವುದರ ಮೂಲಕ ಅಲ್ಲಿ ಸ್ವಂತ ವರಮಾನದಿಂದ ಅವು ತಮ್ಮ ಅಭಿವೃದ್ಧಿಯನ್ನು ತಾವೇ ನಿರ್ವಹಿಸಿಕೊಳ್ಳುವಂತೆ ಮಾಡಬಹುದು. ಅದು ಬಿಟ್ಟು ನಗರಾಭಿವೃದ್ದಿಗೆ ಯೋಜನಾ

## ವಿರಹಿಣಿ

**ನೀ** ಚಂದ್ರನಾದಂದಿನಿಂದ
ಹೂದೋಟ ಮಾಡುವ ಸಡಗರ ನನ್ನದು
ಕಾಲವೂ ಆಯಾಸಗೊಂಡಿದೆ ರಾಯ
ನಿನ್ನ ನಿರೀಕ್ಷೆಯಲ್ಲಿ
ಯಾವ ಸದ್ದಿಗೆ
ಕಣ್ಣಿಗೆ ಕೈ ನೆರಳ ಮಾಡಿ ಮುಗಿಲ ಕಡೆ
ವಿಸ್ಮಯದ ನೋಟ
ಹಾಸಿಟ್ಟ ತಟ್ಟೆ
ಬಡಿಸಿಟ್ಟ ಊಟ
ಈಗ ಬಂದೇ... ಎಂಬ ಭರವಸೆ.
ನೀರಿಲ್ಲದ ಕೊಳಗಳಲಿ
ತೇಲುತ್ತಿದೆ ನಿನ್ನ ಉತ್ತರೀಯದ ನೆರಳು
ನವಮಿ ದಿಬ್ಬದ ಹೆಮ್ಮೆಟ್ಟಿಲುಗಳಲಿ
ನಿನ್ನ ನೀಳ ಕಾಲ್ಬೆರಳ ಬೆವರ ಮುದ್ರೆ

ಎಲ್ಲ ಎಲ್ಲವೂ ಹಾಗೇ ಇದೆ
ಅದೇ ಅದೇ ಜಾಗಗಳಲ್ಲಿ
ಗೋಡೆ ಚಾವಣಿಗಳಿಲ್ಲದ ಅರಮನೆ
ಅಕ್ಕನಿಗೆ ಸಿಕ್ಕನಂತೆ ಮಲ್ಲಿಕಾರ್ಜುನ
ಮೀರಳಿಗೂ ಶ್ಯಾಮನ ಸನ್ನಿಧಿಯಂತೆ
ಇನ್ನೊಂದು ಭೂಮಿ ಉಂಟಂತೆ
ಇನ್ನೊಬ್ಬ ಸೂರ್ಯನಂತೆ
ರಾಯ ಎಷ್ಟೊಂದು ತಳಮಳದ ಸುದ್ದಿಗಳು
ಕಂಡವರೆಲ್ಲಾ ಅಯ್ಯೋ ಪಾಪ ಎನ್ನುತ್ತಾರೆ
ವಿಧವೆಯಾಗಿ ಸವೆದವಳೆನ್ನುತ್ತಾರೆ
ವಿರಹದಲಿ ಬಂದಿಯಾಗಿ ನವೆದೆನೆಂದು
ಹೇಳಬಲ್ಲವ ನೀನೊಬ್ಬನೇ.
ಮುಸ್ಸಂಜೆಯ ಸಿಹಿ ಕಂಪಲಿ
ನೀನು ಬಂದಂತಾಗಿ
ಕಣ್ಣುಮುಚ್ಚುತ್ತೇನೆ
ಅಪ್ಪುಗೆಗೆ ಅಣಿಯಾಗಿ...



**ಎಚ್. ಎಸ್. ನಿರ್ಮಲ**
'ಮಾನ್ಯ', ೪ನೇ ತಿರುವು, ೪೦ ಅಡಿ ಮುಖ್ಯರಸ್ತೆ
ಮಾರುತಿನಗರ, ತುಮಕೂರು - ೫೭೨ ೧೦೨

ವೆಚ್ಚದ ಶೇ.೧೫.೫೪ ರಷ್ಟನ್ನು ನೀಡುವ ಅವಶ್ಯಕತೆಯಿರಲಿಲ್ಲ.

**ಈ ಬಜೆಟ್ಟಿಗೊಂದು ದಿಶೆಯಿಲ್ಲ!**

ಈ ಬಜೆಟ್ಟಿನ ಮುಖ್ಯ ಸಮಸ್ಯೆಯೆಂದರೆ ಅದಕ್ಕೆ ಒಂದು ನಿರ್ದಿಷ್ಟವಾದ ಗುರಿಯಿದ್ದಂತೆ ಕಾಣುವುದಿಲ್ಲ. ಏಕೆಂದರೆ ಇಲ್ಲಿ ಹಣವನ್ನು ಅಸಂಖ್ಯಾತ ಐಟಂಗಳ ಮೇಲೆ ಸ್ವಲ್ಪ ಸ್ವಲ್ಪ ಪ್ರಮಾಣದಲ್ಲಿ ಹಂಚಲಾಗಿದೆ (ಚೆಲ್ಲಲಾಗಿದೆ ಎಂಬ ಪದ ಹೆಚ್ಚು ಸೂಕ್ತವಾಗಿದೆ!) ಇಲ್ಲಿ ಕೆಲವು ಕೋಟಿ, ಅಲ್ಲಿ ಮತ್ತೊಂದಿಷ್ಟು ಕೋಟಿ, ಇನ್ನೊಂದಕ್ಕೆ ಸ್ವಲ್ಪ ಕೋಟಿ – ಹೀಗೆ ಅನುದಾನವನ್ನು ವಿತರಿಸಲಾಗಿದೆ. ಅದರಲ್ಲಿ ಒಂದು ಸಂಘಟಿತ ಪ್ರಯತ್ನವಿಲ್ಲ. ಇದರಿಂದಾಗಿ ಹೂಡಿದ ಬಂಡವಾಳಕ್ಕೆ ಪ್ರತಿಫಲವೇನು ಬರುತ್ತದೆ ಎಂಬುದರ ಬಗ್ಗೆ ಸರ್ಕಾರಕ್ಕೆ ಕಾಳಜಿಯಿದ್ದಂತೆ ಕಾಣುವುದಿಲ್ಲ. ಅಭಿವೃದ್ಧಿಯೆಂಬುದು ಸಮಾಜದ ವಂಚಿತರನ್ನು, ದಲಿತರನ್ನು, ಮಹಿಳೆಯರನ್ನು, ಕೂಲಿಕಾರರನ್ನು ಒಳಗೊಳ್ಳುವಂತಿರಬೇಕು. ಜನರನ್ನು ಒಳಗೊಳ್ಳದೆ ಅಭಿವೃದ್ಧಿಯು ಜನರ ಸಂಕಷ್ಟಗಳನ್ನು ನಿವಾರಿಸುವುದು ಸಾಧ್ಯವಿಲ್ಲ. ಈ ಬಜೆಟ್ಟಿನ ಮೂಲಕ ಸರ್ಕಾರವು ಏನನ್ನು ಸಾಧಿಸಿಕೊಳ್ಳಬಯಸುತ್ತದೆ ಎಂಬುದರ ಬಗ್ಗೆ ಇಲ್ಲಿ ಯಾವುದೇ ಸೂಚನೆ ದೊರೆಯುವುದಿಲ್ಲ. ಎಲ್ಲ ಕಡೆಗೂ ಮುಖ ಮಾಡಿಕೊಂಡಿರುವ ಮತ್ತು ಕೈಯನ್ನು ಚಾಚಿರುವ ಬಜೆಟ್ಟು ಯಾವ ಉದ್ದೇಶವನ್ನು ಈಡೇರಿಸುವುದು ಸಾಧ್ಯವಿಲ್ಲ. ಈ ಬಜೆಟ್ಟಿನಲ್ಲಿ ದೀರ್ಘಕಾಲೀನವಾದ ಒಂದೇ ಒಂದು ಕಾರ್ಯಕ್ರಮವಿಲ್ಲ. ಇಲ್ಲಿ ಒಂದು ನಿರ್ದಿಷ್ಟವಾದ ಚೌಕಟ್ಟನ್ನು ರೂಪಿಸಿಕೊಳ್ಳುವುದು ಸರ್ಕಾರಕ್ಕೆ ಸಾಧ್ಯವಾಗಿಲ್ಲ. ಅಭಿವೃದ್ಧಿಗೆ ಸಂಬಂಧಿಸಿದಂತೆ ಈ ಸರ್ಕಾರದ ಗುರಿಯಾದರೂ ಏನು? ಇಲ್ಲಿ ಸ್ಪಷ್ಟತೆಯಿಲ್ಲ ಮತ್ತು ನಿರ್ದಿಷ್ಟತೆಯಿಲ್ಲ. ಇದಕ್ಕೆ 'ಹುಂಡಿ' ಬಜೆಟ್ಟೆಂಬ ಟೀಕೆ ಸರಿಯಾಗಿದೆ.

**ಲಿಂಗ ಸಂಬಂಧಿ ನೆಲೆಗಳು!**

ಈ ಸರ್ಕಾರದ ಲಿಂಗ ಸಂಬಂಧಗಳನ್ನು ಕುರಿತ ನೀತಿ- ಧೋರಣೆ ಬಜೆಟ್ಟಿನಲ್ಲಿ ಸ್ಪಷ್ಟವಾಗಿ ಮೂಡಿ ಬಂದಿಲ್ಲ. ಅದನ್ನು ಅತ್ಯಂತ ಮುದ್ದೆ ಮುದ್ದೆಯಾಗಿ ಬಜೆಟ್ಟಿನಲ್ಲಿ ಪರಿಭಾವಿಸಿಕೊಂಡಿರುವಂತೆ ಕಾಣುತ್ತದೆ. ಈ ಸರ್ಕಾರವು ಲಿಂಗ ಸಂಬಂಧವೆನ್ನುವುದನ್ನು ಕೇವಲ ಶಾಲಾ ಬಾಲಕಿಯರಿಗೆ ನೀಡುತ್ತಿರುವ ಬೈಸಿಕಲ್ಲಿಗೆ, ಭಾಗ್ಯಜ್ಯೋತಿಗೆ, ಯಶಸ್ವಿನಿಗೆ, ಜನನಿ ಸುರಕ್ಷೆಗೆ ಸೀಮಿತಗೊಳಿಸಿಕೊಂಡಿರುವಂತೆ ಕಾಣುತ್ತದೆ. ಮಹಿಳೆಯರ ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ಬಜೆಟ್ಟಿನಲ್ಲಿ ಮಾತನಾಡಲಾಗಿದೆಯೇ ವಿನಾ ಲಿಂಗಸಂಬಂಧಿ ಧೋರಣೆ ಬಗ್ಗೆ ಅಲ್ಲಿ ಯಾವುದೇ ಚರ್ಚೆ ಇಲ್ಲ. ತನ್ನ ಲಿಂಗ ಸಂಬಂಧಿ ಧೋರಣೆಯೇನು, ಅದಕ್ಕೆ ಸಂಬಂಧಿಸಿದಂತೆ ತನ್ನ ನೀತಿಯೇನು ಎಂಬುದರ ಬಗ್ಗೆ ಅಲ್ಲಿ ಸ್ಪಷ್ಟವಾದ ನಿಲವು ಕಂಡು ಬರುವುದಿಲ್ಲ. ಲಿಂಗ ಸಂಬಂಧಿ ಮೀಮಾಂಸೆಯಲ್ಲಿ ಹೇಳುವಂತೆ ಬಜೆಟ್ಟಿನಲ್ಲಿ ಮಹಿಳೆಯರ 'ದೈನಂದಿನ ಹಿತಾಸಕ್ತಿ'ಗಳ ಬಗ್ಗೆ ಕಾಳಜಿ ಮಾತ್ರವಿದೆ. ಮಹಿಳೆಯರ 'ಸಂಘರ್ಷಾತ್ಮಕ ಹಿತಾಸಕ್ತಿ'ಗಳ ಬಗ್ಗೆ ಬಜೆಟ್ಟು ಮೌನವಹಿಸಿಬಿಟ್ಟಿದೆ. ಅಭಿವೃದ್ಧಿಯನ್ನು ಹಂಗಿನ ಸಂಗತಿಯಾಗಿ, ಯಾಚನೆಯ ಸಂಗತಿಯಾಗಿ ಪರಿಭಾವಿಸಿಕೊಂಡಿರುವುದರಿಂದ ಇಲ್ಲಿ ಮಹಿಳೆಯರ ಹಕ್ಕುಗಳ ಬಗ್ಗೆ ಯಾವುದೇ ಚರ್ಚೆಗೆ ಸ್ಥಾನವಿಲ್ಲವಾಗಿದೆ. ಸಂತಾನೋತ್ಪತ್ತಿ ಹಕ್ಕುಗಳ ಬಗ್ಗೆಯಾಗಲಿ, ಮಹಿಳೆಯ ಆಸ್ತಿ ಹಕ್ಕುಗಳ ಬಗ್ಗೆಯಾಗಲಿ, ಮಹಿಳೆಯರ ಪೌಷ್ಟಿಕತೆ ಬಗ್ಗೆಯಾಗಲಿ, ಗೃಹವಾರ್ತೆಯನ್ನು ಪುರುಷರು ಹಂಚಿಕೊಳ್ಳುವುದರ ಬಗ್ಗೆಯಾಗಲಿ, ಅವರ ಸ್ವಾತಂತ್ರ್ಯದ ಬಗ್ಗೆಯಾಗಲಿ ಬಜೆಟ್ಟಿನಲ್ಲಿ ಉಲ್ಲೇಖ ದೊರೆಯುವುದಿಲ್ಲ. ಈ ಬಗೆಯ ಸಂಗತಿಗಳನ್ನು ಚರ್ಚಿಸಲು ಬಜೆಟ್ಟು ಅಥವಾ ಆರ್ಥಿಕ ಸಮೀಕ್ಷೆಯು ಪಿಎಚ್.ಡಿ.ಪ್ರಬಂಧವಲ್ಲವೆಂದು ತಳ್ಳಿಹಾಕಬಹುದು. ಆದರೆ ಇಂತಹ ದಾಖಲೆಗಳಲ್ಲಿ ಲಿಂಗ ಸಂಬಂಧ ಕುರಿತಂತೆ ನಿರಂತರವಾಗಿ ಚರ್ಚೆ ಮಾಡುವುದರಿಂದ ಸಮಾಜದಲ್ಲಿ ಲಿಂಗ ಸಂಬಂಧಿ ತಾರತಮ್ಯವನ್ನು, ಲಿಂಗ ಅನುಪಾತದಲ್ಲಿನ ಕೊರತೆಯನ್ನು ಮತ್ತು ಅದರಲ್ಲಿನ ಕುಸಿತವನ್ನು ಹೋಗಲಾಡಿಸುವುದು ಸಾಧ್ಯ. ಲಿಂಗ ಸಂಬಂಧಿ ಪ್ರಣಾಳಿಕೆಯು ಆಳವಾಗಿ ಸಮಾಜದಲ್ಲಿ ಬೇರೂರುವುದು ಸಾಧ್ಯ. ಆದರೆ ಈ ದಾಖಲೆಗಳಲ್ಲಿ ಅಂತಹ ಸೈದ್ಧಾಂತಿಕ ಸಂಗತಿ ಕುರಿತಂತೆ ಸರ್ಕಾರವು ಮಾತನಾಡುತ್ತಿಲ್ಲ. ನಮ್ಮ ಸಮಾಜವು ಮಹಿಳೆಯರ ಬಗ್ಗೆ ಯಾವ ಬಗೆಯ ಧೋರಣೆ ತಳೆದಿದೆ ಎಂಬುದು ಕಳೆದ ಕೆಲವು ತಿಂಗಳುಗಳಿಂದ ರಾಜ್ಯದ ವಿವಿಧ ಭಾಗಗಳಲ್ಲಿ ನಡೆದ ಮಹಿಳೆಯರ ಮೇಲಿನ ಅಮಾನವೀಯ ಮತ್ತು ಸಂಘಟಿತ ಆಕ್ರಮಣಗಳಿಂದ ತಿಳಿಯುತ್ತದೆ. ಈ ಸಂದರ್ಭದಲ್ಲಿ ಸರ್ಕಾರವು ದೊರೆತ ಅವಕಾಶವನ್ನು ಬಜೆಟ್ ಸಂದರ್ಭದಲ್ಲಿ ಅದರ ಬಗ್ಗೆ ತನ್ನ ವಿಚಾರವನ್ನು ಮಂಡಿಸಲು ಬಳಸಿಕೊಳ್ಳಬಹುದಿತ್ತು. ಆದರೆ ಇಲ್ಲಿ ಸಮಸ್ಯೆಯೆಂದರೆ ಸರ್ಕಾರದ ಲಿಂಗ ಸಮಾನತೆ ಕುರಿತ ಧೋರಣೆ ಬಗ್ಗೆಯೆ ಅನುಮಾನ ಸಾಧ್ಯ. ಏಕೆಂದರೆ ಮಹಿಳೆಯರ ಮೇಲೆ ನಡೆಯುತ್ತಿರುವ ಆಕ್ರಮಣ ಕುರಿತಂತೆ ಸರ್ಕಾರವು ಒಂದು ರೀತಿಯಲ್ಲಿ ಮೃದು ಧೋರಣೆ ತಳೆದಿರುವುದು ಮತ್ತು ಪ್ರತ್ಯಕ್ಷವಾಗಿ ಅದಕ್ಕೆ ವಿರೋಧ ವ್ಯಕ್ತಪಡಿಸದಿರುವುದು ಮಹಿಳೆಯರ ಮೇಲಿನ ಆಕ್ರಮಣಕ್ಕೆ ಅಪ್ರತ್ಯಕ್ಷವಾಗಿ ಪ್ರೋತ್ಸಾಹ ಕೊಟ್ಟಂತೆ ಕಂಡುಬರುತ್ತಿದೆ. ಅಂತಹ ಆಕ್ರಮಣ ನಡೆದಾಗ ಅದರ ಬಗ್ಗೆ ಪಶ್ಚಾತ್ತಾಪವನ್ನು ಸರ್ಕಾರವು ವ್ಯಕ್ತಪಡಿಸಿದಂತೆ ಕಾಣಲಿಲ್ಲ. ಲಿಂಗ ಸಮಾನತೆಯೆಂಬುದು ಪ್ರಸ್ತುತ ಸರ್ಕಾರದ ಮೂಲಭೂತ ಮೌಲ್ಯವಿದ್ದಂತೆ ಕಾಣುವುದಿಲ್ಲ.

**ಸುಖ-ಧರ್ಮ-ಅರ್ಥ-ಸರ್ಕಾರ : ಒಂದು ಸಮೀಕರಣ**

ಮಾನ್ಯ ಮುಖ್ಯಮಂತ್ರಿಗಳು ತಮ್ಮ ಬಜೆಟ್ಟಿನ ಆರಂಭದಲ್ಲಿ ಕೌಟಿಲ್ಯನ ಸೂತ್ರವೊಂದನ್ನು ಉಲ್ಲೇಖಿಸಿ ಅಂತಹ ಸೂತ್ರವನ್ನು ತಮ್ಮ ಬಜೆಟ್ಟು ಪಾಲಿಸುತ್ತಿದೆಯೆಂಬುದನ್ನು ಸಾರಿದ್ದಾರೆ. ಈ ಸರ್ಕಾರವು ಅಧಿಕಾರಕ್ಕೆ ಬಂದ ಮೇಲೆ ತನ್ನ ಪ್ರತಿಯೊಂದು ಪ್ರಕಟಣೆಯಲ್ಲಿಯೂ ಸಂಸ್ಕೃತದ ಶ್ಲೋಕಗಳನ್ನು ಉದ್ಧರಿಸುವುದು ಸಾಮಾನ್ಯವಾದ ನಿಯಮವಾಗಿರುವಂತೆ ಕಾಣುತ್ತಿದೆ. (ಸರ್ಕಾವು ಇತ್ತೀಚೆಗೆ ಪ್ರಕಟಿಸಿರುವ 'ಕರ್ನಾಟಕ ಅಭಿವೃದ್ಧಿ ಮುನ್ನೋಟ – ೨೦೨೦' ಎಂಬ ವರದಿಯಲ್ಲೂ ಸಂಸ್ಕೃತದ ಶ್ಲೋಕವೊಂದನ್ನು ಉದ್ಧರಿಸಿರುವುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ). ತಮ್ಮ ಬಜೆಟ್ ಭಾಷಣದ ಕಂಡಿಕೆ - ೧೮ರಲ್ಲಿ ಕೆಳಗಿನ ಕೌಟಿಲ್ಯನ ಶ್ಲೋಕವನ್ನು ಹಣಕಾಸು ಮಂತ್ರಿಗಳು ಉಲ್ಲೇಖಿಸಿದ್ದಾರೆ.

ಸುಖಸ್ಯ ಮೂಲಂ ಧರ್ಮಃ
ಧರ್ಮಸ್ಯ ಮೂಲಂ ಅರ್ಥಃ
ಅರ್ಥಸ್ಯ ಮೂಲಂ ರಾಜ್ಯಂ

ಇದು ಪ್ರಸ್ತುತ ಸರ್ಕಾರದ ಮೂಲ ಧೋರಣೆಯನ್ನು ಸಾರುತ್ತಿರುವಂತೆ ಭಾಸವಾಗುತ್ತದೆ. ಇಂದು ನಾವು ಜನರನ್ನು ಒಳಗೊಳ್ಳುವ ಅಭಿವೃದ್ಧಿ ಬಗ್ಗೆ ಮಾತನಾಡುತ್ತಿದ್ದರೆ - ಸಹಭಾಗಿತ್ವವಾದಿ ಅಭಿವೃದ್ಧಿ ನೀತಿಯನ್ನು ಪ್ರತಿಪಾದನೆ ಮಾಡುತ್ತಿದ್ದರೆ ಈ ಸರ್ಕಾರವು ಧರ್ಮ ಮತ್ತು ಶಾಸ್ತ್ರ ಗ್ರಂಥಗಳಲ್ಲಿನ ಸೂತ್ರಗಳ ಬಗ್ಗೆ ಮತ್ತು ಸರ್ಕಾರವು ಅದರ ಆಧಾರದ ಮೇಲೆ ರೂಪಿಸಬೇಕಾದ ನಿಯಮಗಳ ಬಗ್ಗೆ ಮಾತನಾಡುತ್ತಿದೆ. ಜನತೆಯ ನೆಮ್ಮದಿಯು ಸರ್ಕಾರದ ನೀತಿಯಿಂದ ಬರುತ್ತದೆ ಎನ್ನುವುದು ಪ್ರಸ್ತುತ ಸೂತ್ರದ ನಿರ್ವಚನವಾಗಿದೆ. ನೆಮ್ಮದಿಯನ್ನು ನಮ್ಮ ಜನರು ಪರಿಭಾವಿಸಿಕೊಂಡಿರುವುದರ ಬಗೆ ಅರಿವಿಲ್ಲದವರು ಮಾತ್ರ ಹೀಗೆ ಷರಾ ಬರೆಯಬಹುದು. ಆದರೆ ಸರ್ಕಾರದ ನೀತಿ ಎಲ್ಲಿಂದ ಬರುತ್ತದೆ? ಇಲ್ಲಿನ ಸೂತ್ರದ ಪ್ರಕಾರ ಅದು ಧರ್ಮಶಾಸ್ತ್ರದಿಂದ ಬರುತ್ತದೆ. ಈ ಧರ್ಮಶಾಸ್ತ್ರಗಳಾವುವು? ಅವು ಕೌಟಿಲ್ಯನ ಅರ್ಥಶಾಸ್ತ್ರ, ಮನುವಿನ ಧರ್ಮಶಾಸ್ತ್ರ, ಶಂಕರರ ಅದ್ವೈತ - ಇವೆ ತಾನೆ? ಹಾಗಾದರೆ ಜನರ ಅಭಿಪ್ರಾಯಕ್ಕೆ ಮನ್ನಣೆ ಎಲ್ಲಿದೆ? ಅವರ ಅನುಭವಕ್ಕೆ ಅರ್ಥವಿಲ್ಲವೆ? ಸರ್ಕಾರದ ನೀತಿಗಳಿಗೆ ಜನರ ಬದುಕು ಆಧಾರವಾಗಿರಬೇಕು. ಅದು ಬಿಟ್ಟು ಆಡಳಿತವು ಅದಕ್ಕೆ ಮೂಲವಾಗಿರಬೇಕೆಂದರೆ ಏನು ಅರ್ಥ? ಜನತಂತ್ರದಲ್ಲಿ ಜನರು ಅಂತಿಮ ಸಾರ್ವಭೌಮರೆಂದು ನಾವು ಮಕ್ಕಳಿಗೆ ಪಾಠ ಹೇಳಿಕೊಡುತ್ತಿದ್ದೇವೆ. ಆದರೆ ಇಲ್ಲಿ ಬಜೆಟ್ಟಿನಲ್ಲಿ ಸರ್ಕಾರವೇ ಸಾರ್ವಭೌಮವೆಂದು ಹೇಳಲಾಗುತ್ತಿದೆ. ಪರಮಾಧಿಕಾರ ವೆಂಬುದು ಜನರ ವಶದಲ್ಲಿರುತ್ತದೋ ಅಥವಾ ಅದು ಸರ್ಕಾರದ ಬಳಿಯಿರುತ್ತದೋ ಎಂಬುದು ಇಲ್ಲಿ ತೀರ್ಮಾನವಾಗಬೇಕಾಗಿದೆ. ಸರ್ಕಾರದ ನಿಲುವನ್ನು ಒಪ್ಪಿಕೊಳ್ಳುವುದಾದರೆ ನಾವು ಕಲಿಯುತ್ತಿರುವ ರಾಜ್ಯಶಾಸ್ತ್ರವನ್ನು ಮೂಲೆಗೆಸೆಯಬೇಕಾಗುತ್ತದೆ. ಈ ಕಾರಣಕ್ಕೆ ಇರಬೇಕು ಬಜೆಟ್ಟನ್ನು ಸರ್ಕಾರವು ಅರ್ಥಶಾಸ್ತ್ರದ ಅಥವಾ ರಾಜ್ಯಶಾಸ್ತ್ರದ ನಿಯಮಗಳಿಗೆ ಅತೀತವಾಗಿ ರೂಪಿಸಿರುವಂತೆ ಕಾಣುತ್ತದೆ. ಈ ಸರ್ಕಾರದ ಸಂಸ್ಕೃತದ ಬಗೆಗಿನ ಬದ್ಧತೆಯನ್ನು ಅರ್ಥ ಮಾಡಿಕೊಳ್ಳಬಹುದು. ಆದರೆ ಆ ಶ್ಲೋಕಗಳಲ್ಲಿನ ಧೋರಣೆಗಳ ಬಗ್ಗೆಯೂ ಸರ್ಕಾರವು ಬದ್ಧವಾಗಿದೆ ಯೆಂದಾದರೆ ಜನರು ಈ ಸರ್ಕಾರದ ಬಗ್ಗೆ ಪುನರಾಲೋಚಿಸ ಬೇಕಾಗುತ್ತದೆ. ಇಲ್ಲಿ ಧರ್ಮದ ಮೂಲವು ಅರ್ಥವೆಂದಾದರೆ ಅಂತಹ ಧರ್ಮದ ಬಗ್ಗೆ ನಾವು ಎಚ್ಚರಿಕೆಯಿಂದಿರ ಬೇಕಾಗುತ್ತದೆ. ಸರ್ಕಾರ ಮತ್ತು ಅರ್ಥ – ಇವುಗಳೇ ಎಲ್ಲದರ ಮೂಲವೆಂಬುದು ಇಲ್ಲಿನ ತಾತ್ಪರ್ಯವೆ? ಅಥವಾ ಬಜೆಟ್ಟಿನಲ್ಲಿ ಸುಮ್ಮ ಸುಮ್ಮನೆ ಸಂಸ್ಕೃತದ ಶ್ಲೋಕವನ್ನು ಉದ್ಧರಿಸಬೇಕು ಎಂಬ ಕಾರಣಕ್ಕೆ ಪ್ರಸ್ತುತ ಶ್ಲೋಕವನ್ನು ಉದ್ಧರಿಸಲಾಗಿದೆಯೇ? ಈ ಶ್ಲೋಕದ ಬಗ್ಗೆ ಸರ್ಕಾರವು ತನ್ನ ನಿಲುವನ್ನು ಸ್ಪಷ್ಟಪಡಿಸಬೇಕಾಗುತ್ತದೆ. ಇಲ್ಲದಿದ್ದರೆ ಸಂವಿಧಾನಕ್ಕೂ ಇಲ್ಲಿ ಅರ್ಥವಿಲ್ಲದಂತಾಗುತ್ತದೆ. ಈ ಸರ್ಕಾರದ ಬದ್ಧತೆಯು ನಮ್ಮ ಸಂವಿಧಾನಕ್ಕೋ ಅಥವಾ ಕೌಟಿಲ್ಯನ ಅರ್ಥಶಾಸ್ತ್ರಕ್ಕೋ, ಮನುವಿನ ಧರ್ಮಶಾಸ್ತ್ರಕ್ಕೋ ಅಥವಾ ವೇದಗಳಿಗೋ ಎಂಬುದು ಗೊಂದಲವಾಗುತ್ತಿದೆ. ಈ ಸಂಗತಿಯನ್ನು ನಾವು ಗಂಭೀರವಾಗಿ ಪರಿಗಣಿಸ ಬೇಕಾಗುತ್ತದೆ. ಕೌಟಿಲ್ಯನ ಅರ್ಥಶಾಸ್ತ್ರವನ್ನು ಅನುಸರಿಸಲು ನಾವೇನು ಕ್ರಿಸ್ತಪೂರ್ವ ಕಾಲದಲ್ಲಿ ಬದುಕುತ್ತಿಲ್ಲ. ಈ ಬಗ್ಗೆ ಸರ್ಕಾರದ ನೀತಿಯೇನೆಂಬುದು ಸ್ಪಷ್ಟವಾಗಬೇಕು.

**ಆರ್ಥಿಕ ಸಮೀಕ್ಷೆ : ೨೦೦೮-೦೯**

ಪ್ರತಿ ವರ್ಷ ಸರ್ಕಾರವು ತನ್ನ ಬರುವ ವರ್ಷದ ಬಜೆಟ್ಟನ್ನು ಮಂಡಿಸುವುದಕ್ಕೆ ಮುಂಚಿತವಾಗಿ ತನ್ನ ಹಿಂದಿನ ವರ್ಷದ ಅಭಿವೃದ್ಧಿ ಸಂಬಂಧಿ ಸಾಧನೆಗಳನ್ನು ಸಮೀಕ್ಷೆಯ ರೂಪದಲ್ಲಿ ಮಂಡಿಸುವುದು ವಾಡಿಕೆಯಲ್ಲಿದೆ. ಅದರಂತೆ ಸರ್ಕಾರವು ವಿಧಾನ ಮಂಡಳಗಳ ಮುಂದೆ ೨೦೦೮-೦೯ನೆಯ ಸಾಲಿನ ಆರ್ಥಿಕ ಸಮೀಕ್ಷೆಯನ್ನು ಮಂಡಿಸಿದೆ. ಒಂದು ವರ್ಷದಲ್ಲಿ ಆರ್ಥಿಕತೆಯು ಸಾಧಿಸಿದ ಸಿದ್ಧಿ-ಸಾಧನೆಗಳ ಮೌಲ್ಯಮಾಪನದ ವರದಿಯೇ ಆರ್ಥಿಕ ಸಮೀಕ್ಷೆ. ಸಮಾಜದ ಎಲ್ಲ ಕ್ಷೇತ್ರಗಳ ಕಾರ್ಯಕ್ಷಮತೆಯನ್ನು ಇಲ್ಲಿ ಪರಾಮರ್ಶೆ ಮಾಡಲಾಗಿರುತ್ತದೆ. ಆರ್ಥಿಕತೆಯು ಎದುರಿಸುತ್ತಿರುವ ಮತ್ತು ಮುಂದೆ ಅದು ಎದುರಿಸಬಹುದಾದ ಸಮಸ್ಯೆಗಳ ಬಗ್ಗೆ ಸಮೀಕ್ಷೆಯು ಬೆಳಕು ಚೆಲ್ಲುತ್ತದೆ. ಹತ್ತು ಅಧ್ಯಾಯಗಳನ್ನು ಒಳಗೊಂಡಿರುವ ಸಮೀಕ್ಷೆಯು ವಿವರವಾದ ಅಂಕಿ-ಸಂಖ್ಯೆಗಳ ಕೋಷ್ಟಕಗಳು ಅನುಬಂಧದಲ್ಲಿರುತ್ತವೆ. ಅಭಿವೃದ್ಧಿಗೆ ಸಂಬಂಧಿಸಿದ ವಾರ್ಷಿಕ ಮಾಹಿತಿ ಕೋಶವೆಂದು ಅದನ್ನು ಪರಿಗಣಿಸಬಹುದು.

ಅತ್ಯಂತ ವಿಷಾದದ ಸಂಗತಿಯೆಂದರೆ ಸಮೀಕ್ಷೆಯಲ್ಲಿ ಪ್ರಾದೇಶಿಕ ಅಸಮಾನತೆ ಬಗ್ಗೆ ಅಲ್ಲಿ-ಇಲ್ಲಿ ಒಂದೆರಡು ಸಾಲುಗಳಲ್ಲಿ ವಿಷಯವನ್ನು ಮಂಡಿಸಲಾಗಿದೆಯೇ ವಿನಾ ಅಲ್ಲಿ ಅದರ ಬಗ್ಗೆ ಪ್ರಜ್ಞಾಪೂರ್ವಕ ವಿಶ್ಲೇಷಣೆ ಕಂಡುಬರುವುದಿಲ್ಲ. ಸರ್ಕಾರವು ೨೦೦೭-೦೮ ರಲ್ಲಿ ಪ್ರಾದೇಶಿಕ ಅಸಮಾನತೆ ನಿವಾರಣೆಗಾಗಿ ಡಾ|| ಡಿ. ಎಂ. ನಂಜುಂಡಪ್ಪ ಸಮಿತಿ ವರದಿ ಶಿಫಾರಸ್ಸಿನ ಪ್ರಕಾರ ಎಂಟು ವರ್ಷಗಳ ಅಭಿವೃದ್ಧಿ ಯೋಜನೆಗಾಗಿ ರೂ. ೨,೫೪೭ ಕೋಟಿ ಅನುದಾನವನ್ನು ಮೀಸಲಿಟ್ಟಿತ್ತು. ಅದರ ಬಾಬ್ತು ಸಾಧನೆ ಏನಾಗಿದೆ? ಪ್ರಾದೇಶಿಕ ಅಸಮಾನತೆಯು ಕಡಿಮೆಯಾಗುತ್ತಿದೆಯೇ? ಯಾವ ಯಾವ ತಾಲ್ಲೂಕಿಗೆ ಎಷ್ಟೆಷ್ಟು ಅನುದಾನ ದೊರೆಯಿತು? ಇಂತಹ ಸಂಗತಿಗಳ ಬಗ್ಗೆ ಸಮೀಕ್ಷೆಯಲ್ಲಿ ಮಾಹಿತಿ ಇರಬೇಕಾಗಿತ್ತು. ಆದರೆ ಸಮೀಕ್ಷೆಯಲ್ಲಿ ಅದರ ಬಗ್ಗೆ ಪ್ರತ್ಯೇಕವಾದ ಚರ್ಚೆ ನಡೆದಿಲ್ಲ.

ಅದೇ ರೀತಿ ರಾಜ್ಯದ ಸರಿ ಸುಮಾರು ಮೂರು ಕೋಟಿಯಷ್ಟಿರುವ ಮಹಿಳೆಯರ ಬಗ್ಗೆ ಅದರಲ್ಲಿ ಯಾವುದೇ ನಿರ್ದಿಷ್ಟವಾದ ವಿಶ್ಲೇಷಣೆಯಿಲ್ಲ. ಇದು ಅತ್ಯಂತ ವಿಷಾದದ ಸಂಗತಿಯಾಗಿದೆ. ಮಹಿಳೆಯರು ಎದುರಿಸುತ್ತಿರುವ ಅಪಾಯಗಳನ್ನು ಕುರಿತಂತೆ, ಅವರು ಅನುಭವಿಸುತ್ತಿರುವ ತಾರತಮ್ಯದ ಬಗ್ಗೆ ಒಂದು ಪ್ರತ್ಯೇಕ ಅಧ್ಯಾಯದಲ್ಲಿ ವಿಷಯವನ್ನು ಮಂಡಿಸಬೇಕಾಗಿತ್ತು. 'ಲಿಂಗ ಸಂಬಂಧಿ ಬಜೆಟ್ಟ್'ನ ಬಗ್ಗೆ ಮಾತನಾಡುವ ಕಾಲದಲ್ಲಿ ನಾವು ಬದುಕುತ್ತಿದ್ದೇವೆ. ಆದರೆ ಸರ್ಕಾರದ ಮಟ್ಟದಲ್ಲಿ ಲಿಂಗ ಸಂಬಂಧಗಳ ಬಗ್ಗೆ ಸಂಪೂರ್ಣ ಔದಾಸೀನ್ಯವಿರುವುದು ವಿಚಿತ್ರವಾಗಿ ಕಂಡುಬರುತ್ತದೆ.

ಮುಂದಿನ ವರ್ಷಗಳಲ್ಲಿ ಸರ್ಕಾರವು ತನ್ನ ಆರ್ಥಿಕ ಸಮೀಕ್ಷೆ ಸಿದ್ಧಪಡಿಸುವಾಗ ಪ್ರಾದೇಶಿಕ ಅಸಮಾನತೆ ಕುರಿತಂತೆ ಮತ್ತು ಲಿಂಗ ಸಂಬಂಧಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಅಧ್ಯಾಯಗಳನ್ನು ಮೀಸಲಿಡಬೇಕು. ಒಂದು ವರ್ಷದಲ್ಲಿ ಮಹಿಳೆಯರು ಅಭಿವೃದ್ಧಿಗೆ ಸಂಬಂಧಿಸಿದಂತೆ ಸಾಧಿಸಿಕೊಂಡ ಸಾಧನೆ ಮತ್ತು ಎದುರಿಸಿದ ವೈಫಲ್ಯಗಳನ್ನು ಸಮೀಕ್ಷೆಗೆ ಒಳಪಡಿಸಬೇಕು. ಹೀಗಾದಾಗ ಸಂಬಂಧಿಸಿದ ವರ್ಷದಲ್ಲಿ ಮಹಿಳೆಯರು ಎದುರಿಸಿದ ವಿಶೇಷ ಆಕ್ರಮಣಗಳು ದೌರ್ಜನ್ಯಗಳು ಹಾಗೂ ಅವರು ಸಾಧಿಸಿ ಕೊಂಡ ಯಶಸ್ಸುಗಳು ಇಂತಹ ಸರ್ಕಾರಿ ವರದಿಗಳಲ್ಲಿ ದಾಖಲಾಗುತ್ತವೆ. ಅವು ಅಧಿಕೃತ ಸಂಗತಿಗಳಾಗುತ್ತವೆ. ಇಲ್ಲವಾದರೆ ಅವು ಕೇವಲ ದಂತಕಥೆಗಳಾಗಿ ಉಳಿದು ಕೊಂಡು ಬಿಡುತ್ತವೆ. ಈ ವಿಷಯಗಳನ್ನು ಸಮೀಕ್ಷಾ ವರದಿಯಲ್ಲಿ ತರುವುದರಿಂದ ಅನೇಕ ಅನುಕೂಲಗಳಿವೆ. ಒಟ್ಟಾರೆ ಲಿಂಗ ಸಂಬಂಧಿ ಅಭಿವೃದ್ಧಿ ಸಮೀಕ್ಷೆ (ಕರ್ನಾಟಕ ಮಾನವ ಅಭಿವೃದ್ಧಿ - ೨೦೦೫ರಲ್ಲಿ ಲಿಂಗ ಸಂಬಂಧಿ ಅಭಿವೃದ್ಧಿ ಸೂಚ್ಯಂಕಗಳನ್ನು ಜಿಲ್ಲಾವಾರು ಲೆಕ್ಕ ಹಾಕಿ ನೀಡಲಾಗುತ್ತಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು) ಮತ್ತು ಪ್ರಾದೇಶಿಕ ಅಸಮಾನತೆಗೆ ಸಂಬಂಧಿಸಿದಂತೆ ಸಾಧಿಸಿ ಕೊಂಡ ಸಾಧನೆಗಳ-ವೈಫಲ್ಯಗಳ ಸಮೀಕ್ಷೆ ವಾರ್ಷಿಕವಾಗಿ ನಡೆಯಬೇಕು. ಇವುಗಳಿಗೆ ಸಂಬಂಧಿಸಿದ ಹಕ್ಕುದಾರರು (ಮಹಿಳೆಯರು, ಶ್ರಮಜೀವಿಗಳು ಮತ್ತು ರಾಜ್ಯದ ಹಿಂದುಳಿದ ಜಿಲ್ಲೆಗಳ ಸರಿಸುಮಾರು ಒಂದೂವರೆ ಕೋಟಿ ಜನ) ಇಂತಹ ಬದಲಾವಣೆಗಾಗಿ ಸಂಘಟಿತ ಪ್ರಯತ್ನ ಮಾಡ ಬೇಕು ಮತ್ತು ಹೋರಾಟಕ್ಕೆ ಸಿದ್ಧರಾಗಬೇಕು.

**ಡಾ|| ಟಿ. ಆರ್. ಚಂದ್ರಶೇಖರ**
ಪ್ರಾಧ್ಯಾಪಕ, ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬



**ಸತ್ಯವ್ರತ**

'ಗಾಂಧಿವಾದಿ' ಎಂದರೆ ''ಶಾಸ್ತ್ರಕ್ಕೆ ಮಾತ್ರ'' ಎಂಬಂತೆ ನಮ್ಮ ಸನ್ನಿವೇಶವು ಬದಲಾಗಿರುವಾಗ ಶ್ರೀ ಸತ್ಯವ್ರತ ಅವರನ್ನು 'ಗಾಂಧಿವಾದಿ' ಎನ್ನುವುದು ಉಪಚಾರಕ್ಕಲ್ಲ, ಅವರು ನಿಷ್ಠಾವಂತರು. ಅಂಥವರನ್ನು ಕಳೆದುಕೊಂಡದ್ದು ಬಹಳ ದುಃಖದ ವಿಷಯ. ಇದೇ ಮಾರ್ಚ್ ೧೮ರಂದು ತಮ್ಮ ೮೯ನೆಯ ವಯಸ್ಸಿನಲ್ಲಿ ಅವರು ನಿಧನರಾದರು. ಸರ್ವೋದಯ, ಗಾಂಧಿ ಭವನ, ಮುಂತಾದ ಹತ್ತಾರು ಸಂಘಟನೆಗಳಲ್ಲಿ ಕ್ರಿಯಾಶೀಲರಾಗಿದ್ದ ಶ್ರೀಯುತರು ಸಿದ್ಧಾಂತಕ್ಕೆ ಸಂಬಂಧಿ ಸಿದಂತೆ ಬಹಳ ನಿಷ್ಠುರರು, ನೀತಿವಂತರು. ಯಾವುದೇ ಜನಪರ ಚಳುವಳಿಯಲ್ಲೂ ಮುಂದಿನ ಸಾಲಿನಲ್ಲಿ ಭಾಗವಹಿಸು ತ್ತಿದ್ದ ಸತ್ಯವ್ರತರು ನಿಜಕ್ಕೂ ವ್ರತವನ್ನು ಸಾಂಗವಾಗಿ ನೆರವೇರಿಸಿದವರು. 'ಹೊಸತು'ಗೆ ದೈಹಿಕವಾಗಿ ಮತ್ತು ಸೈದ್ಧಾಂತಿಕವಾಗಿ ಬಹಳ ಹತ್ತಿರವಿದ್ದ ಆತ್ಮೀಯ ಹಿರಿಯರಾದ ಶ್ರೀ ಸತ್ಯವ್ರತ ಅವರಿಗೆ 'ಹೊಸತು' ತನ್ನ ವಿನಮ್ರ ಗೌರವವನ್ನು ಸೂಚಿಸುತ್ತದೆ.



# 'ಸಾವಯವ ಕೃಷಿ' ಆಂದೋಳನದಂತೆ ಅದನ್ನೂ ಒಳಗೊಂಡ ಸುಸಂಘಟಿತ ಬೇಸಾಯ ಅಥವಾ 'ಇಂಟಿಗ್ರೇಟೆಡ್ ಫಾರ್ಮಿಂಗ್' ಅಳವಡಿಕೆ ಆಗಬೇಕು.

**– ಡಾ|| ಎಂ. ಮಹದೇವಪ್ಪ, ಪ್ರೊ|| ಬಿ. ವಿ. ವೆಂಕಟರಾವ್**

**ಚಾ**ಮರಾಜನಗರ ಜಿಲ್ಲೆಯ ಮಾದಾಪುರ ಗ್ರಾಮದಲ್ಲಿ ೪ನೇ ಆಗಸ್ಟ್ ೧೯೩೭ರಲ್ಲಿ ಜನಿಸಿದ ಡಾ|| ಎಂ. ಮಹದೇವಪ್ಪನವರು ಅಂದಿನಿಂದ ಇಂದಿನವರೆಗೆ ನಡೆದುಬಂದ ದಾರಿ ವರ್ಣಮಯವಾದ್ದು. ಅವರು ಪಡೆದ ಪದವಿಗಳು, ಸಾಧಿಸಿದ ಸಾಧನೆಗಳು, ಕೈಗೊಂಡ ಕಾರ್ಯಕ್ರಮಗಳು, ಪಡೆದ ಯಶಸ್ಸು ಇತ್ಯಾದಿ ಎಲ್ಲವೂ ಅನುಪಮವಾಗಿವೆ. ೧೯೬೦ರಲ್ಲಿ ಹೆಬ್ಬಾಳಿನ ಕೃಷಿ ಕಾಲೇಜಿನಲ್ಲಿ ಪದವಿ, ದಾಖಲೆಯ ಅವಧಿಯಲ್ಲಿ ಕೊಯಮತ್ತೂರು ಕೃಷಿ ಕಾಲೇಜಿನಲ್ಲಿ ಪ್ರಥಮ ಸ್ಥಾನದಲ್ಲಿ ಮಾಸ್ಟರ್ಸ್ ಮತ್ತು ಡಾಕ್ಟರೇಟ್ ಪದವಿ ಪಡೆದು. ಮುಂದೆ ನಲವತ್ತು ವರ್ಷಗಳ ಕಾಲ ಸತತವಾಗಿ ಅಧ್ಯಯನ, ಬೋಧನೆ, ಸಂಶೋಧನೆ, ವಿಸ್ತರಣೆ ಮತ್ತು ಆಡಳಿತ ಪ್ರಕ್ರಿಯೆಯಲ್ಲಿ ಅಪೂರ್ವ ಸಾಧನೆಗೈದಿದ್ದಾರೆ. ಇವರು ಧಾರವಾಡದ ಕೃಷಿ ವಿಶ್ವವಿದ್ಯಾಲಯಕ್ಕೆ ಎರಡು ಬಾರಿ ಕುಲಪತಿಗಳಾಗಿ ಸೇವೆ ಸಲ್ಲಿಸಿ ರಾಷ್ಟ್ರದಲ್ಲೇ ಅತ್ಯುತ್ತಮ ಕೃಷಿ ವಿಶ್ವವಿದ್ಯಾಲಯ ಎಂಬ ಪದಕ ದೊರಕಿಸಿಕೊಟ್ಟರು. ಅಂತೆಯೇ. ೪೦ಕ್ಕೂ ಹೆಚ್ಚು ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಬೋಧಿಸಿ, ೧೬ ಸಂಶೋಧಕರಿಗೆ ಡಾಕ್ಟರೇಟ್ ಮಾರ್ಗದರ್ಶನ ನೀಡಿ ಉನ್ನತ ಮಟ್ಟದ ಸಂಶೋಧನೆಯ ಮೂಲಕ. ಇವರ ವಿದ್ಯಾರ್ಥಿಗಳಿಗೆ ಜವಾಹರ್‌ಲಾಲ್ ನೆಹರು ಪದಕ ದೊರಕಿಸಿಕೊಟ್ಟರು

ಇವರು ಸತತವಾಗಿ ಸಂಶೋಧನೆ ನಡೆಸಿ ಕೃಷಿಕರಿಗೆ ನೀಡಿದ ಬತ್ತದ ತಳಿಗಳೆಂದರೆ - ಮಧು, ಮಂಗಳ, ಪುಷ್ಪ, ಪ್ರಗತಿ, ವಿಕ್ರಮ, ಮುಕ್ತಿ , ಬಿಳಿಮುಕ್ತಿ ಮುಂತಾದವು. ಇದಲ್ಲದೆ ರಾಷ್ಟ್ರದಲ್ಲೇ ಪ್ರಪ್ರಥಮವಾಗಿ ಬತ್ತದಲ್ಲಿ ಹೈಬ್ರಿಡ್ (ಮಿಶ್ರ) ತಳಿಯನ್ನು ಸಂಶೋಧಿಸಿ, ಪ್ರತಿಭಾವಂತ ವಿಜ್ಞಾನಿಯಾಗಿ ಗುರುತಿಸಲ್ಪಟ್ಟದ್ದಲ್ಲದೆ, ಒಳನೋಟದ ಸಂಶೋಧಕರಾಗಿ, ಮಾರ್ಗದರ್ಶಕರಾಗಿ, ಆಡಳಿತಗಾರರಾಗಿ ಇವರು ಬೆಳೆದು ಬಂದ ದಾರಿ ಬೆರಗುಗೊಳಿಸುವಂತಹದ್ದು. ಚೀಣಾ, ರಷ್ಯಾ ಸೇರಿದಂತೆ ಮೂವತ್ತಕ್ಕೂ ಹೆಚ್ಚು ರಾಷ್ಟ್ರಗಳಲ್ಲಿ ಪ್ರವಾಸ ಮಾಡಿ, ಅಲ್ಲಿಯ ವಿಜ್ಞಾನಿಗಳೊಡನೆ ಚರ್ಚಿಸಿ, ಫಿಲಿಪ್ಪೀನ್ಸ್‌ನಲ್ಲಿರುವ ಅಂತರರಾಷ್ಟ್ರೀಯ ಬತ್ತ ಸಂಶೋಧನಾ ಕೇಂದ್ರದಲ್ಲಿ ಎರಡೂವರೆ ವರ್ಷಗಳ ಕಾಲ ಸಂಶೋಧನೆ ನಡೆಸಿದ್ದಾರೆ.

ಅತಿ ಅಪಾಯಕಾರಿ ಕಳೆ ಪಾರ್ಥೇನಿಯಮ್ ಹಾಗೂ ಅದರ ನಿಯಂತ್ರಣದ ಬಗ್ಗೆ ಉನ್ನತ ಮಟ್ಟದ ಸಂಶೋಧನೆ ನಡೆಸಿ, ಮಾನವ ಹಾಗೂ ಜಾನುವಾರುಗಳು ಅದರಿ..ದ ಪಾರಾಗುವ ಮತ್ತು ಕಳೆಯನ್ನು ಹತೋಟಿಯಲ್ಲಿಡುವ ತಾಂತ್ರಿಕತೆ ರೂಪಿಸುವುದರ ಜೊತೆಗೆ ಅದರ ಮೇಲೆ ವಿಶ್ವದಲ್ಲಿರುವ ಏಕೈಕ ಇಂಗ್ಲಿಷ್ ಮತ್ತು ಕನ್ನಡ ಪುಸ್ತಕಕ್ಕೆ ಇವರೇ ಲೇಖಕರು. ಇವರು ಹದಿನೈದು ಮೂಲ ಕೃತಿಗಳು, ನಾಲ್ಕಾರು ಭಾಷಾಂತರಗಳು. ನೂರಾರು

ಲೇಖನವನ್ನು ಸಿದ್ಧಪಡಿಸಿದವರು : ಎನ್. ಗೋಪಾಲಕೃಷ್ಣ, ಸಂದರ್ಶಕರು : ಜಿ. ಆರ್., ಎನ್. ಗೋಪಾಲಕೃಷ್ಣ

ಜನಪ್ರಿಯ ಲೇಖನಗಳನ್ನು ಪ್ರಕಟಿಸಿ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಸಭೆ ಸಮಾರಂಭಗಳಲ್ಲಿ ಭಾಗವಹಿಸಿ ಖ್ಯಾತರಾಗಿದ್ದಾರೆ.

ಅಂತರರಾಷ್ಟ್ರೀಯ ವಾಟುಮಲ್, ಹಾಗೂ ಹುಕ್ಕರ್ ಅವಾರ್ಡ್‌ನಿಂದ ಮೊದಲುಗೊಂಡು, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿವರೆಗೆ ಇವರಿಗೆ ಸಂದ ಪುರಸ್ಕಾರಗಳ ವ್ಯಾಪ್ತಿ ಬಹು ವಿಶಾಲವಾದದ್ದು. ಇವರ ಸಾಧನೆ ಹಾಗೂ ಪ್ರತಿಭೆಯನ್ನು ಪರಿಗಣಿಸಿ ಭಾರತ ಸರ್ಕಾರ ಇವರನ್ನು 'ಕೃಷಿ ಸೇವಾ ವಿಜ್ಞಾನಿಗಳು ಮತ್ತು ಆಡಳಿತಗಾರರ ಆಯ್ಕೆ ಮಂಡಳಿ' ಅಧ್ಯಕ್ಷರಾಗಿ ಆಯ್ಕೆ ಮಾಡಿದ ಪರಿಣಾಮವಾಗಿ, ಹಲವಾರು ವರ್ಷಗಳಿಂದ ಬಾಕಿ ಇದ್ದ ಸಾವಿರಾರು ಉದ್ದಿಮೆ ಮತ್ತು ಬಡ್ತಿಗಳನ್ನು ಯಾವುದೇ ಕಳಂಕ ಅಥವಾ ದೋಷಗಳಿಲ್ಲದಂತೆ ಬಡ್ತಿ ಮತ್ತು ಆಯ್ಕೆಯನ್ನು ಪೂರ್ತಿಗೊಳಿಸಿದ್ದಾರೆ. ಆಯ್ಕೆ ಪ್ರಕ್ರಿಯೆಯಲ್ಲಿ ಪಾರದರ್ಶಕತೆ ಅಳವಡಿಸಿ ಯಾವುದೇ ಅನ್ಯಾಯ/ಅವ್ಯವಹಾರ ಆಗದಂತೆ ಮಾಡಿರುವುದು ಕನ್ನಡಿಗರೆಲ್ಲ ಹೆಮ್ಮೆಪಡಬೇಕಾದ ವಿಷಯ.

ರಾಷ್ಟ್ರಮಟ್ಟದ ಕೃಷಿ ಅಭಿವೃದ್ಧಿಯಲ್ಲಿ ಇವರ ಸೇವೆಯನ್ನು ಗುರುತಿಸಿ ಭಾರತ ಸರ್ಕಾರವು ೨೦೦೫ನೇ ಸಾಲಿನ ಪ್ರತಿಷ್ಠಿತ ಪದ್ಮಶ್ರೀ ಪ್ರಶಸ್ತಿ ನೀಡಿ ಗೌರವಿಸಿದೆ. ಪದ್ಮಶ್ರೀ ಪ್ರಶಸ್ತಿ ಪಡೆದ ಕರ್ನಾಟಕದ ಮೊದಲ ಕೃಷಿ ವಿಜ್ಞಾನಿ ಇವರು.

ದೇಶದ ಅನ್ನದಾತರಾದ ರೈತರು ಭೂಮಿ ಅಂದರೆ ಹೊಲಗದ್ದೆ, ತೋಟ ತುಡಿಕೆ, ಕಾಡು ಅದರೊಟ್ಟಿಗೆ ಅಸಂಖ್ಯಾತ ವನ್ಯಜೀವಿ ಸೇರಿ, ಬೆಟ್ಟಗುಡ್ಡ, ಖನಿಜ, ನದಿ, ಕೆರೆ ಕುಂಟೆ ಹಾಗೂ ವಿಶಾಲ ಸಮುದ್ರ ಸಂರಕ್ಷಣೆ ಅಗತ್ಯತೆಯ ಬಗ್ಗೆ ಸದಾ ಕಾಳಜಿ ಹಾಗೂ ಚಿಂತನೆ ಮಾಡುತ್ತಿರುವವರು ಖ್ಯಾತ ಕೃಷಿ ವಿಜ್ಞಾನಿ, ಚಿಂತಕ ಪ್ರೊ|| ಬಿ.ವಿ.ವೆಂಕಟರಾವ್ ಅವರು. ಧಾರವಾಡ ಕೃಷಿ ವಿಶ್ವವಿದ್ಯಾನಿಲಯದ ಮಾಜಿ ಕುಲಪತಿಗಳೂ, ಪ್ರೊ|| ವೆಂಕಟರಾವ್ ಅವರ ಪ್ರತಿಭಾವಂತ ವಿದ್ಯಾರ್ಥಿ ವೃಂದದ ಅಗ್ರಗಣ್ಯರಲ್ಲಿ ಪ್ರಮುಖರೂ ಆದ, ಪ್ರಸ್ತುತ ಜೆಎಸ್‌ಎಸ್ ಗ್ರಾಮೀಣ ಅಭಿವೃದ್ಧಿ ಫೌಂಡೇಷನ್‌ನ ನಿರ್ದೇಶಕರೂ ಬತ್ತ ಸಂಶೋಧನೆಯಲ್ಲಿ ಅನೇಕ ತಳಿಗಳನ್ನು ಸಂಶೋಧಿಸಿ ಖ್ಯಾತರಾಗಿರುವ, ಗ್ರಾಮೀಣಾಭಿವೃದ್ಧಿಯ ಬಗ್ಗೆ ಅತ್ಯಂತ ಕಾಳಜಿ ಹೊಂದಿರುವ ಡಾ|| ಎಂ. ಮಹದೇವಪ್ಪ ಅವರೂ ತಮ್ಮ ವಿಚಾರಧಾರೆಗಳನ್ನು ಈ ಸಂವಾದದಲ್ಲಿ ಹರಿಸಿದ್ದಾರೆ. ಇವರೊಡನೆ ಭಾಗವಹಿಸಿದವರು 'ಹೊಸತು' ಸಂಪಾದಕರಾದ ಡಾ|| ಜಿ. ರಾಮಕೃಷ್ಣ ಮತ್ತು ನಿಮ್ಹಾನ್ಸ್‌ನ ಪತ್ರಿಕೆಯ ಸಂಪಾದಕರೂ, ಲೇಖಕರೂ ಆದ ಶ್ರೀ ಎನ್. ಗೋಪಾಲಕೃಷ್ಣ.

ಈ ಇಬ್ಬರು ವಿಜ್ಞಾನಿಗಳೂ ಇಂದಿನ ಆರ್ಥಿಕ ಹಿನ್ನಡೆಯ ಸಂದರ್ಭದಲ್ಲಿ ಜಾಗತೀಕರಣ ಮತ್ತು ಬಹುರಾಷ್ಟ್ರೀಯ ಕಂಪನಿಗಳಿಂದ ರೈತರಿಗೆ ಉಂಟಾಗುವ ಅನಾನುಕೂಲಗಳ ಬಗ್ಗೆ ಚಿಂತನೆ ಮಾಡಿದ್ದಾರೆ. ವ್ಯವಸ್ಥೆಯಲ್ಲಿನ ದೋಷ, ಪಾಲಿಸಿ ನಿರ್ಧಾರ ತೆಗೆದುಕೊಳ್ಳದ ರಾಜಕಾರಣಿಗಳು, ತಜ್ಞರ ಸಲಹೆಯನ್ನು ಮನ್ನಿಸದ ಅಧಿಕಾರಿಗಳು, ನೇರ-ನಿಷ್ಠುರ ನುಡಿಯವರನ್ನು ವ್ಯವಸ್ಥಿತವಾಗಿ ದೂರ ಇಡುವ ಅಧಿಕಾರಿ ವರ್ಗದ ಬಗ್ಗೆ ವಿಷಾದದಿಂದ ನುಡಿಯುತ್ತಾರೆ. ತಮ್ಮ ಸೇವೆಯನ್ನು ಉಚಿತವಾಗಿ ಕೊಡುತ್ತ, ಹಲವಾರು ಸಂಘ-ಸಂಸ್ಥೆಗಳ ಮೂಲಕ ದೇಶದ ರೈತರ, ಆಡಳಿತಗಾರರ, ರಾಜಕಾರಣಿಗಳ ಕಣ್ಣು ತೆರೆಸುವ ಕೆಲಸವನ್ನು ನಿರಂತರವಾಗಿ ಇವರು ಮಾಡಿಕೊಂಡು ಬರುತ್ತಿದ್ದಾರೆ. ಇವರೊಡನೆ ಸಂವಾದಕ್ಕೆ ಕುಳಿತರೆ ಮಾಹಿತಿಯ ಮಹಾಪೂರವನ್ನೇ ನಮ್ಮ ಮುಂದೆ ಬಿಚ್ಚಿಡುತ್ತಾರೆ. ಕಳೆದ ೪೦-೫೦ಕ್ಕೂ ಹೆಚ್ಚು ವರ್ಷಗಳ ಕಾಲದಿಂದ ಕೃಷಿ, ಗ್ರಾಮೀಣ ಬಡರೈತರ ಉದ್ಧಾರವನ್ನೇ ಗುರಿಯಾಗಿರಿಸಿಕೊಂಡು ಆಲೋಚನೆ, ಕೃತಿಗಳ ಮೂಲಕ ರಾಜ್ಯಕ್ಕೆ, ದೇಶಕ್ಕೆ ಈ ಮಹನೀಯರು ಸಲ್ಲಿಸಿರುವ ಸೇವೆ ಅಮೂಲ್ಯವಾದುದು. ಹತ್ತಿರ ಹತ್ತಿರ ೯೦ರ ಹರೆಯದ ಪ್ರೊ|| ಬಿ. ವಿ. ವೆಂಕಟರಾವ್ ಹಾಗೂ ೭೦ರ ಹರೆಯದ ಪ್ರೊ|| ಎಂ. ಮಹದೇವಪ್ಪನವರು ಇಬ್ಬರೂ ಇಂದಿಗೂ ಚೈತನ್ಯದ ಚಿಲುಮೆಗಳಾಗಿದ್ದಾರೆ. ಕೃಷಿ, ತಳಿ, ಮಣ್ಣು ನೀರು ಮುಂತಾದವುಗಳ ಬಗ್ಗೆ ರಾಷ್ಟ್ರ ಅಂತರರಾಷ್ಟ್ರೀಯ ಮಟ್ಟದಲ್ಲಿ ಅಗಾಧ ಅನುಭವ ಇವರದು, ಇವರೊಡನೆ ನಡೆದ ಸಂವಾದದ ಆಯ್ದ ಭಾಗಗಳನ್ನು ಇಲ್ಲಿ ಪ್ರಸ್ತುತಪಡಿಸಲಾಗಿದೆ.

---

'ಎದೆ ತುಂಬಿ ಹಾಡುವೆನು' ಎಂಬ ಟಿ. ವಿ. ಕಾರ್ಯಕ್ರಮದಿಂದ ಇಂದು ಕರ್ನಾಟಕದ ಅದೆಷ್ಟು ಪ್ರತಿಭೆಗಳು ನಗರ ಮತ್ತು ಗ್ರಾಮೀಣ ಪ್ರದೇಶಗಳಿಂದ ಹೊರಹೊಮ್ಮಿವೆ, ನೋಡಿ. ನಮ್ಮ ಜನರಿಗೆ ಮುಕ್ತವಾಗಿ ತೆರೆದುಕೊಳ್ಳುವುದಕ್ಕೆ ಆಗದೆ ಅನೇಕ ವಿಷಯಗಳ ಬಗ್ಗೆ ತಿಳುವಳಿಕೆ ಮೂಡದೆ, ಹಲವಾರು ಪ್ರತಿಭೆಗಳು ಕಮರಿ ಹೋಗುವ ಅಪಾಯವಿದೆ. ಅವತ್ತು ಕೃಷಿ ಕ್ಷೇತ್ರಕ್ಕೆ ಸಂಬಂಧಿಸಿ ದಂತೆ ಆಗುತ್ತಿರುವುದೇ ಇದು'' ಎಂದು ಅಭಿಪ್ರಾಯ ಪಡುತ್ತಾರೆ ಖ್ಯಾತ ಕೃಷಿ ವಿಜ್ಞಾನಿ, ಕೃಷಿ ವಿಶ್ವವಿದ್ಯಾನಿಲಯದ ಮಾಜಿ ಕುಲಪತಿ ಡಾ|| ಎಂ. ಮಹದೇವಪ್ಪವರು.

''ನಮ್ಮ ಶಿಕ್ಷಣ ಪದ್ಧತಿಯನ್ನು ನಾವು ಇನ್ನೂ ಬದಲಾಯಿಸಿಲ್ಲ. ಬ್ರಿಟಿಷ್ ಕಾಲದಲ್ಲಿ ಇದ್ದ ವ್ಯವಸ್ಥೆಯೇ ಇದೆ. ನಮ್ಮ ಮಕ್ಕಳಿಗೆ ಕ್ರಿಕೆಟ್ ಪಟುವಾಗಲು, ಸೈಂಟಿಸ್ಟ್ ಆಗಲು ಆಲೋಚನೆ ಮಾಡುವಷ್ಟು ತಿಳುವಳಿಕೆ ಇಂದು ಮಾಧ್ಯಮಗಳಿಂದ ದೊರೆಯುತ್ತದೆ. ಆದರೆ ಯಾವುದಾದರೂ ಮಗು ತಾನು ಕೃಷಿ ವಿಜ್ಞಾನಿ ಅಥವಾ ಆಧುನಿಕ ಕೃಷಿಕನಾಗುತ್ತೇನೆ ಎನ್ನುವ ಮಟ್ಟಕ್ಕೆ ಆಲೋಚನೆ ಮಾಡುವಂತೆ ನಾವು ಅವರನ್ನು ತಯಾರು ಮಾಡಿಲ್ಲ'' ಎಂದು ಡಾ|| ಮಹದೇವಪ್ಪ ವಿಷಾದದಿಂದ ತಿಳಿಸುತ್ತಾರೆ. ''ಪ್ರಾಥಮಿಕ ಶಾಲೆಗಳ ಮಟ್ಟದಿಂದಲೇ ಮಕ್ಕಳಿಗೆ ಮಣ್ಣು, ನೀರು, ಗಿಡ, ಮರ, ಬೆಳೆ, ಗೊಬ್ಬರ, ಆಹಾರ, ಹೂವು,



ಹಣ್ಣುಗಳ ಬಗ್ಗೆ ತಿಳಿವಳಿಕೆ ಮೂಡುವಂಥ ಅಂಶಗಳು ಪಠ್ಯಪುಸ್ತಕಗಳಲ್ಲಿ ಸೇರ್ಪಡೆಯಾಗಬೇಕು. ಪುಸ್ತಕ ರಚನಾ ಸಮಿತಿಗಳಲ್ಲಿ ಕೃಷಿ ವಿಜ್ಞಾನಿ, ಪ್ರಗತಿಪರ ರೈತರಂಥವರು ಇದ್ದಾಗ ಇದು ಸಾಧ್ಯ'' ಎನ್ನುತ್ತಾರೆ ಅವರು.

ಖ್ಯಾತ ಕೃಷಿ ಚಿಂತಕರೂ, ನಿವೃತ್ತ ಪ್ರಾಧ್ಯಾಪಕರೂ ಆದ ಪ್ರೊ॥ ಬಿ. ವಿ. ವೆಂಕಟರಾವ್ ಮತ್ತು ಡಾ॥ ಮಹದೇವಪ್ಪನವರು ನಡೆಸಿದ ಸಂವಾದ:

**ಪ್ರೊ॥ ಬಿ. ವಿ. ವೆಂಕಟರಾವ್** : ಜಾಗತೀಕರಣದ ಹೆಸರಿನಲ್ಲಿ ಇತ್ತೀಚೆಗೆ ನಮ್ಮಲ್ಲಿ ಚಟುವಟಿಕೆಗಳು ಹಣ ಸಂಪಾದನೆಯ ಉದ್ದೇಶವನ್ನೇ ಹೊಂದಿವೆ. ಹಣ ಸಂಪಾದನೆ ಮಾಡುವ ಉದ್ದೇಶದಿಂದ 'ಕೆಟ್ಟು ಪಟ್ಟಣ ಸೇರು' ಎಂಬಂತೆ ಗ್ರಾಮೀಣಜನ ನಗರಗಳಿಗೆ ವಲಸೆ ಬರುವುದು ನಿರಂತರವಾಗಿದೆ. ಪರಿಣಾಮವಾಗಿ, ನಗರಗಳಲ್ಲಿ ಹೊಟ್ಟೆ ಹೊರೆದುಕೊಳ್ಳಲು ಯಾವುದಾದರೂ ಕೆಲಸ ಮಾಡುವಂಥ ಸ್ಥಿತಿ. ಸರಿಯಾದ ವಸತಿ ವ್ಯವಸ್ಥೆ ಇಲ್ಲದೆ ಇಂಥವರಿಂದ ಕೊಳೆಗೇರಿಗಳ ಸೃಷ್ಟಿ. ಕೆಲವರು ಸುಲಿಗೆ, ಮೋಸ, ಕೊಲೆಗಳಂಥ ಸಮಾಜಘಾತುಕ ಚಟುವಟಿಕೆಗಳಲ್ಲಿ ತೊಡಗಿ,ಸಮಾಜ ಕಂಟಕರೂ ಆಗುತ್ತಿದ್ದಾರೆ.

**ಜಿ. ಆರ್** : ಇಂಥ ಸ್ಥಿತಿ ನಿರ್ಮಾಣವಾಗದಂತೆ ತಡೆಯಲು ಸಾಧ್ಯವೇ ?

**ಪ್ರೊ॥ ಬಿ. ವಿ. ವೆಂಕಟರಾವ್** : ಸಾಧ್ಯವಿದೆ. ನಮ್ಮ ದೇಶದಲ್ಲಿ ೧,೦೦೦ ಮಿಲಿಯನ್ ಗ್ರಾಮೀಣ ಜನರಿದ್ದಾರೆ. ಒಂದು ಎಕರೆಯಷ್ಟು ಸಣ್ಣ ಹಿಡುವಳಿದಾರರು ಸಹ ತಮ್ಮ ತಮ್ಮ ಜಮೀನುಗಳಲ್ಲಿ ತಮಗೆ ಅಗತ್ಯವಾದ ಧಾನ್ಯ, ಎಣ್ಣೆಕಾಳು, ಬೇಳೆ, ನಾರುಗಳಂಥ ಎಲ್ಲ ಪದಾರ್ಥ, ಜಾನುವಾರು ಸಾಕಾಣಿಕೆ, ಹಣ್ಣು ಹಂಪಲು, ಹೂವುಗಳನ್ನೆಲ್ಲ ಬೆಳೆದು ಉತ್ಪನ್ನಗಳಲ್ಲಿ ಸರ್‌ಪ್ಲಸ್, ಅಂದರೆ ತಾವು ಬಳಸಿ ಉಳಿದ ಪದಾರ್ಥಗಳನ್ನು ಮಾರಾಟ ಮಾಡಿ, ನಾಲ್ಕು ಕಾಸು ಕೈಲಿ ಇಟ್ಟುಕೊಳ್ಳುವ ಅವಕಾಶ ತುಂಬ ಇದೆ.

ಈಗ ದೊರೆಯುವ ಆಧುನಿಕ ತಂತ್ರಜ್ಞಾನಗಳ, ಮೊಬೈಲ್, ಸೋಲಾರ್, ಬಯೋಗ್ಯಾಸ್‌ಗಳಂತಹ ಶಕ್ತಿ ಉತ್ಪಾದಕ ವ್ಯವಸ್ಥೆಗಳನ್ನೆಲ್ಲ ಬಳಸಿಕೊಂಡು ಸ್ವಸಾಮರ್ಥ್ಯದಿಂದ ಸಂತೃಪ್ತನಾಗಿ ಬೇಸಾಯಮಾಡಿ, ಲಾಭದಾಯಕ ಉದ್ಯಮವನ್ನಾಗಿ ಬೇಸಾಯವನ್ನು ಬೆಳೆಸಬಹುದಾಗಿದೆ. ದೇಶದ ಉದ್ದಗಲಕ್ಕೂ ಹರಡಿರುವ ೧೦೦ ದಶಲಕ್ಷ ರೈತ ಕುಟುಂಬದ ಜಾಣತನದ ಶ್ರಮದಿಂದ ವೈವಿಧ್ಯಮಯ ಸೂಕ್ತ ಸನ್ನಿವೇಶಕ್ಕನುಗುಣವಾದ ಬೆಳೆ-ಜಾನುವಾರು, ಸಣ್ಣ ಕೈಗಾರಿಕಾ ಘಟಕ ಚಟುವಟಿಕೆ, ಸ್ವಚ್ಛ ಗಾಳಿ, ಬೆಳಕಿರುವ ಕಡೆ ವಾಸ ಇಂದು ಅಗತ್ಯವಾಗಿದೆ.

**ಡಾ॥ ಮಹದೇವಪ್ಪ** : ವಿಪರ್ಯಾಸವೆಂದರೆ, ನಮ್ಮ ವಿಶ್ವವಿದ್ಯಾಲಯಗಳು ಮಾಡಲಾಗದಂತಹ ಕೆಲಸಗಳನ್ನು ಖಾಸಗಿ ಸಂಸ್ಥೆಗಳವರು ಮಾಡಿದರು. ಅವರು ಹಣ ಮಾಡಿಕೊಂಡರು. ನಮ್ಮ ರೈತರಿಗೆ ಮಾಹಿತಿ, ಸಂವಹನ, ತಿಳಿವಳಿಕೆಗಳ ಕೊರತೆ ಇಂದಿಗೂ ಇದೆ. ಬಹುತೇಕ ಜನ ಇಂದಿಗೂ ಭಾರತ ಸರಕಾರ ಬಹು ನಿರೀಕ್ಷೆಯಿಂದ ಜಾರಿಗೆ ತಂದಿರುವ ಕೃಷಿ ವಿಜ್ಞಾನ ಕೇಂದ್ರಗಳ ಉಪಯೋಗವನ್ನೇ ಪಡೆದುಕೊಳ್ಳುತ್ತಿಲ್ಲ. ವಾಸ್ತವವಾಗಿ ಕೃಷಿ ವಿಜ್ಞಾನ ಕೇಂದ್ರಗಳು ರೈತರ ಪಾಲಿಗೆ ದೇವಾಲಯ, ಚರ್ಚು, ಮಸೀದಿ ಇದ್ದಂತೆ. ಅಲ್ಲಿಗೆ ತಪ್ಪದೆ ಹೋಗಿ ಜನ ತಮ್ಮ ಜ್ಞಾನವರ್ಧನೆಯನ್ನು ಮಾಡಿಕೊಳ್ಳಬೇಕು.

**ಜಿ. ಆರ್** : ನಮ್ಮ ದೇಶದಲ್ಲಿ ಈಗ ಸಾಕಷ್ಟು ಆಹಾರ ಉತ್ಪಾದನೆ ಆಗುತ್ತಿದೆಯೇ ?

**ಡಾ॥ ಮಹದೇವಪ್ಪ** : ನೋಡಿ, ೧೯೫೫ರಲ್ಲಿ ನಮ್ಮ ದೇಶದ ಆಹಾರ ಉತ್ಪಾದನೆ ೫೫ ಮಿಲಿಯನ್ ಟನ್ನಿನಷ್ಟು ಇತ್ತು. ಇಂದು ೨೩೦ ಮಿಲಿಯನ್ ಟನ್ ಆಗಿದೆ. ನಾವು ಆಹಾರ ಬೆಳೆಯುವ ಭೂಮಿಯ ವಿಸ್ತೀರ್ಣವನ್ನು ಕಡಿಮೆ ಮಾಡಿಯೇ ಇಲ್ಲ. ಚೀಣಾದಲ್ಲಿ ನೋಡಿ, ಅವರು ತಮ್ಮ ಕೃಷಿ ಜಮೀನುಗಳ ವಿಸ್ತೀರ್ಣದಲ್ಲಿ ೮೪ ಮಿಲಿಯನ್ ಹೆಕ್ಟೇರುಗಳಷ್ಟು ಜಮೀನಿನಲ್ಲಿ ಆಹಾರೋತ್ಪಾದನೆಯನ್ನು ಸ್ಥಗಿತಗೊಳಿಸಿದ್ದಾರೆ. ಆ ಜಾಗದಲ್ಲಿ ರಫ್ತು ಮಾಡಬಹುದಾದ ವಾಣಿಜ್ಯ ಬೆಳೆಗಳನ್ನು ಬೆಳೆದು ತಮ್ಮ ದೇಶಕ್ಕೆ ಹೆಚ್ಚಿನ ವಿದೇಶೀ ವಿನಿಮಯ ಗಳಿಸಿಕೊಳ್ಳುತ್ತಿದ್ದಾರೆ.

**ಪ್ರೊ॥ ಬಿ. ವಿ. ವೆಂಕಟರಾವ್** : ನಮ್ಮಲ್ಲಿ ಮಣ್ಣು, ನೀರು ಇವುಗಳ ಬಳಕೆ ಸೂಕ್ತವಾಗಿ ಆಗುತ್ತಿಲ್ಲ. ಅವುಗಳ ಸದುಪಯೋಗದ ಬಗ್ಗೆ ಸೂಕ್ತ ತಿಳಿವಳಿಕೆಯನ್ನು ರೈತರಿಗೆ ನೀಡಲಾಗುತ್ತಿಲ್ಲ. ಮಣ್ಣು, ಕೊಚ್ಚಣೆ ನಾಲಾ ಬೈಲಿನ ನೀರಿನ ವಿತರಣೆಯಲ್ಲಿ ವಿವೇಚನೆಯಿಲ್ಲದೆ ಭೂಮಿ ಉಪ್ಪಾಗಿ, ಜೌಗಾಗಿ, ಕ್ಷಾರವಾಗಿ, ಬರಡಾಗುತ್ತಿದೆ. ಇದರಿಂದಾಗಿ ಇಳುವರಿ ನಿರಂತರವಾಗಿ ಕಡಿಮೆ ಆಗುತ್ತಿದೆ. ತತ್ಫಲವಾಗಿ ಇಂದು ಏನಾಗಿದೆ ನೋಡಿ. ಒಂದು ಕೆ.ಜಿ. ಅಕ್ಕಿಗೆ ೩೫-೪೦ ರೂ.ಗಳು. ಬೇಳೆಗಳಿಗೆ ೭೦-೮೦ ರೂಪಾಯಿಗಳವರೆಗೂ ಕೊಡಬೇಕು. ಅದೆಷ್ಟು ಜನರಿಗೆ ಇಷ್ಟು ಹಣ ಕೊಟ್ಟು ಆಹಾರ ಕೊಳ್ಳಲು ಸಾಧ್ಯವಾಗುತ್ತದೆ ?

**ಎನ್. ಗೋಪಾಲಕೃಷ್ಣ** : ಇದಕ್ಕೆ ಪರಿಹಾರೋಪಾಯಗಳು ಏನಾದರೂ ಇವೆಯೇ ?

**ಪ್ರೊ॥ ಬಿ. ವಿ. ವೆಂಕಟರಾವ್** : ಇವೆ. ನಮ್ಮ ಗ್ರಾಮೀಣ ಜನರು ಸಾಧ್ಯವಾದಷ್ಟು ಮಟ್ಟಿಗೆ ತಮ್ಮ ಜಮೀನುಗಳಲ್ಲಿ ತಮ್ಮ ಅಗತ್ಯಗಳನ್ನೆಲ್ಲ ಬೆಳೆದುಕೊಳ್ಳುವ, ಹೆಚ್ಚಾದುದನ್ನು ಮಾರುಕಟ್ಟೆಗೆ ಒಯ್ಯುವ ವ್ಯವಸ್ಥೆ ಆಗಬೇಕು. ಆಧುನಿಕ ತಂತ್ರಜ್ಞಾನದ ಸೌಲಭ್ಯವೆಲ್ಲ ಅವರಿಗೆ ದೊರೆತು, ಅವರಿಗೆ ನಗರದ ಆಕರ್ಷಣೆ ಕಡಿಮೆಯಾಗಬೇಕು. ಗ್ರಾಮೀಣ ಪ್ರದೇಶದಲ್ಲೇ ಅವರಿಗೆ ಅಗತ್ಯವಾದವುಗಳೆಲ್ಲ ದೊರೆಯುವಂತಾಗಬೇಕು. ವಾಹನ, ಬಿಡಿಭಾಗಗಳು, ಮನೋರಂಜನೆ, ಸಣ್ಣಪುಟ್ಟ ಕಾರ್ಖಾನೆಗಳು ಗ್ರಾಮೀಣ ಪ್ರದೇಶಗಳಲ್ಲಿ ಉತ್ಪತ್ತಿಯಾಗುವ ವಸ್ತುಗಳ - ಆಧಾರಿತವಾದವುಗಳಾಗಿದ್ದರೆ ರೈತರಿಗೆ ಅಲ್ಲೇ ಹಣಕಾಸು ದೊರೆಯುತ್ತದೆ.

**ಜಿ. ಆರ್.** : ಡಾ॥ ಮಹದೇವಪ್ಪನವರೆ, ಇದರ ಬಗ್ಗೆ ತಮ್ಮ ಅಭಿಪ್ರಾಯವೇನು ?

**ಡಾ॥ ಎಂ. ಮಹದೇವಪ್ಪ** : ಪ್ರೊ॥ ಬಿ. ವಿ. ವೆಂಕಟರಾವ್ ಅವರ ಅಭಿಪ್ರಾಯದಲ್ಲಿ ರೈತರು ತಮ್ಮ ಉತ್ಪಾದನೆಯನ್ನು ಪ್ರಮುಖವಾಗಿ ತಾವೇ ಬೆಳೆಸಿಕೊಳ್ಳಬೇಕು. ಮಾರುಕಟ್ಟೆಗಾಗಿ ಅಲ್ಲ. ಅವರಿಗೆ ಸಾಕಾಗಿ ಉಳಿದುದು ಮಾರಾಟಕ್ಕೆ ಬರಬೇಕು. ನಮ್ಮ ಅನೇಕ ರೈತರು ತಾವು ಬೆಳೆದ ಅನೇಕ ಹಣ್ಣು, ತರಕಾರಿಗಳನ್ನು ತಮ್ಮ ಮನೆಗಳಲ್ಲಿ ಎಷ್ಟು ಉಪಯೋಗಿಸುತ್ತಾರೆ ?

## ಸಹಪ್ರಯಾಣಿಕ



ಆ ಜಾಗ ಕಾದಿರಿಸಿದ್ದೇನಲ್ಲ
ಯಾರಾದರೂ ಕೂರಬಹುದಿತ್ತು.
ಅದೆಷ್ಟೊ ಸಹಪ್ರಯಾಣಿಕರು
ಇಳಿಯುವವರು, ಹತ್ತುವವರು
ಇದ್ದೇ ಇರುತ್ತಾರೆ.
ಅಲ್ಲಿ ಯಾರ ಲೆಕ್ಕ ಯಾರಿಗೆ, ಏಕಾಗಿ ?

ಆದರೂ
ನಿರ್ಲಿಪ್ತತೆಯನ್ನು ಒಡೆದುಬಂದ
ಆಪ್ತ ನಗು
ಕಿವಿ ತುಂಬುವ ಮಾತು
ಕುಲಕಾಟದಲ್ಲಿ ಸೋಕಿದ ಕೈಗಳು
ಬೆರೆತ ಬೆರಳುಗಳು
ಮನಸ್ಸನ್ನು ಮೀಟಿ
ಕತ್ತಲೆಯಲ್ಲೂ ಕಂಡಿತು
ನಿಚ್ಚಳ ಕಣ್ಬೆಳಕು.
ತಾಸಿನ ಹಾದಿಗೆ
ವರ್ಷಗಳ ಬೆಸುಗೆಯ ಕೊಂಡಿ
ಸೇರಿದ್ದು ಹೇಗೆ.

ಇಳಿಯುವ ಹೊತ್ತಿನಲ್ಲಿ
ಒಡೆಯದ ಮೌನ, ಒಳಗುದಿ
ಕಣ್ಣಂಚಿನ ಯಾಚನೆಗೆ
ಮಡಿಲ ಮಗುವಿನ
ಕರೆಯೇ ಉತ್ತರ.

**ನೂತನ**
ಕಾರ್ಯಕ್ರಮ ನಿರ್ವಾಹಕರು, ಆಕಾಶವಾಣಿ,
ರಾಜಭವನ ರಸ್ತೆ, ಬೆಂಗಳೂರು - ೫೬೦ ೦೦೧



ಮಾರಾಟಮಾಡಿ, ನಾಲ್ಕು ಕಾಸು ಸಂಪಾದಿಸಿ, ಅದರಿಂದ ಇತರ ಪದಾರ್ಥಗಳನ್ನು ಕೊಳ್ಳಲು ಪ್ರಯತ್ನಿಸುತ್ತಾರೆ. ದವಸ, ಧಾನ್ಯಗಳ ಸಂದರ್ಭದಲ್ಲೂ ಇದೇ ರೀತಿ ಆಗುತ್ತಿದೆ. ಬೆಳೆ ಪರಿವರ್ತನೆ, ಪ್ರಾಣಿ, ಕೃಷಿ, ಜೀವಿ ವೈವಿಧ್ಯದ ಬೇಲಿ, ಜಮೀನುಗಳಿಗೆ ಬರಬೇಕು. ಬದುಗಳ ಮೇಲೆ ಬಹುವಿಧ ಗಿಡ-ಮರಗಳನ್ನು ನೆಡಬೇಕು. ಗಿಡ-ಮರಗಳ ಬೇಲಿ ಅಲ್ಲಿರಬೇಕು. ವಿದ್ಯುತ್ ಹರಿಯುವ ಬೇಲಿಗಳಲ್ಲ. ಕೃಷಿ ಎಂದರೆ ಒಂದು ನಾಣ್ಣುಡಿಯಂತೆ - ಕೃಷಿ ಸಮರ್ಪಕವಾಗಿರುವವರೆಗೆ ಎಲ್ಲಾ ಸಮರ್ಪಕವಾಗಿರುತ್ತದೆ. ಮತ್ತು ಬಿತ್ತನೆಯ ಬೀಜ ಚೆನ್ನಾಗಿದ್ದರೆ ಕೃಷಿ ಚೆನ್ನಾಗಿರುತ್ತದೆ. ಬೀಜಗಳ ಬಗ್ಗೆ, ಬೀಜ ಸಂರಕ್ಷಣೆಯ ಬಗ್ಗೆ ಹಿಂದಿನ ತಲೆಮಾರಿನವರಿಗಿದ್ದ ಕಾಳಜಿ ಈಗ ಇಲ್ಲ. ಹಿಂದೆ ಹಿರಿಯರು ಮನೆಯಲ್ಲೇ ಬೀಜಗಳನ್ನು ಸಂಸ್ಕರಿಸಿ, ಸೇರು, ಪಾವು, ಚಟಾಕು ಅಳತೆಯಲ್ಲಿ ರೈತರಿಗೆ ಕೊಡುತ್ತಿದ್ದರು. ಮುಂದೆ ಅದು ಮಾರಾಟದ ಮಟ್ಟಕ್ಕೆ ಬಂದು ನಿಂತಿತು. ಆನಂತರ ಬೀಜ ಸಂಸ್ಕರಣೆ, ತಳಿವರ್ಧನೆ ಇವೆಲ್ಲ ವಿಶೇಷ ವಿಭಾಗಗಳಾಗಿ ಪರಿವರ್ತನೆಗೊಂಡವು.

**ಜಿ. ಆರ್.** : ಜಿ.ಎಂ. ತಳಿಗಳ ವಿವಾದ ಸೃಷ್ಟಿಯಾಯಿತಲ್ಲವೆ ?

**ಡಾ|| ಎಂ. ಮಹದೇವಪ್ಪ** : ಜಿ.ಎಂ. ಅಂದರೆ ಜೆನೆಟಿಕಲಿ ಮಾಡಿಫೈಡ್, ತಳಿಗಳ ಬಗ್ಗೆ ಅಪಾರ್ಥ ಕಲ್ಪಿಸಲಾಗಿದೆ. ಜಿ.ಎಂ. ತಳಿ ಎಂದಾಕ್ಷಣ ವಿಜ್ಞಾನಿಗಳು ನಮ್ಮ ಜಮೀನುಗಳನ್ನು ಹಾಳುಮಾಡಿದರು ಎಂಬುದಾಗಿ ಆರೋಪಿಸುವವರೂ ಇದ್ದಾರೆ.ಜಿ.ಎಂ. ಎಂಬುದು ನಿಸರ್ಗದಲ್ಲೂ ಆಗುತ್ತಲೇ ಇರುತ್ತದೆ. ಇದನ್ನು ನಾನು 'ವಂಶಾಂತರಿ' ಎನ್ನುತ್ತೇನೆ. 'ಕುಲಾಂತರಿ' ಎಂದು ಕರೆಯುವುದು ಶುದ್ಧ ತಪ್ಪು. ಹಿಂದೆ ಒಂದು ತಳಿಯ ಜೀನ್ ಅನ್ನು ಇನ್ನೊಂದು ತಳಿಯ ಜೀನ್‌ನೊಡನೆ ಸಮ್ಮಿಶ್ರಣ ಮಾಡಲು ಸಾಧ್ಯವಿರಲಿಲ್ಲ. ಆದರೆ ಇಂದಿನ ತಂತ್ರಜ್ಞಾನದ ಫಲವಾಗಿ ಇದು ಸಾಧ್ಯವಿದೆ. ಉದಾಹರಣೆಗೆ, ಗೋಧಿ ಮತ್ತು ಬಾರ್ಲಿಗಳ ಜೀನ್ ಪರಿವರ್ತನೆ ಈಗ ಸಾಧ್ಯ. ಇನ್ನೂ ಅನೇಕ ಇಂಥ ಬದಲಾವಣೆಗಳು ಆಗುವ ಸಾಧ್ಯತೆಯಿದೆ. ಟರ್ಮಿನೇಟರ್ ಜೀನ್ ಇತ್ಯಾದಿ ಎನ್ನಲಾಗುತ್ತದೆ. ಜಿ. ಎಂ. ಎಂಬುದು ಟರ್ಮಿನೇಟರ್ ಅಲ್ಲ. ಟರ್ಮಿನೇಟರ್ ಎಂಬುದು ಇಂದಿಗೂ ಕಲ್ಪನೆ ಹಂತದಲ್ಲೇ ಇದೆ. ನಮ್ಮ ರೈತರು ತಾವು ಬೆಳೆದ ಬೆಳೆಯಿಂದ ತಮಗೆ ಅಗತ್ಯವಾದ ಬಿತ್ತನೆ ಬೀಜಗಳನ್ನು ತಾವೇ ತಯಾರಿಸಿ ಶೇಖರಿಸಿ ಇಟ್ಟುಕೊಳ್ಳುವ ಅವಕಾಶವನ್ನು ಹೊಂದಿರುತ್ತಾರೆ. ಅಗತ್ಯವೆನಿಸಿದ ಸಂದರ್ಭಗಳಲ್ಲಿ ಅವರು ತಮ್ಮ ಬಿತ್ತನೆ ಬೀಜಗಳ ತಳಿಗಳ ಪೇಟೆಂಟ್ ಹೊಂದುವ ಹಕ್ಕನ್ನೂ ಹೊಂದಿರುತ್ತಾರೆ.

**ಪ್ರೊ|| ಬಿ. ವಿ. ವೆಂಕಟರಾವ್** : ನಮ್ಮ ರೈತರು ಸರ್‌ಪ್ಲಸ್ ನಿವ್ವಳ, ಅಂದರೆ ಬಳಸಿ ಉಳಿಯುವ, ಇಳುವರಿ ಪಡೆಯುವವರಾಗಬೇಕು. ೧-೨ ಹೆಕ್ಟೇರು ಜಮೀನು ಹೊಂದಿರುವ ೧೦೦ ದಶಲಕ್ಷ ರೈತರು ನಮ್ಮಲ್ಲಿದ್ದಾರೆ. ಇವರ ಉದ್ಧಾರ ಆಗಬೇಕಾದರೆ ಇವರಿಗೆ ಅಗತ್ಯವಾದ ತಾಂತ್ರಿಕ ಸಲಹೆ, ಸೌಲಭ್ಯಗಳು ಸರಕಾರದಿಂದ, ಕೃಷಿ ವಿಶ್ವವಿದ್ಯಾಲಯಗಳಿಂದ, ಎನ್.ಜಿ.ಓ.ಗಳಿಂದ ದೊರೆಯಬೇಕು. ಅವರು ನಗರವಾಸದ ಆಕರ್ಷಣೆಗೆ ಒಳಗಾಗದೆ ಪ್ರಗತಿಪರರಾದ, ಸ್ವಪರಿಪೂರ್ಣ ರೈತರಾಗಬೇಕು.

**ಡಾ|| ಎಂ. ಮಹದೇವಪ್ಪ** : ಇಂದು ನಮ್ಮಲ್ಲಿ ಹಲವು ಬಗೆಯ ತಾಂತ್ರಿಕ ಅಭಿವೃದ್ಧಿಯಾಗಿದ್ದರೂ, ನಮ್ಮ ರೈತರಿಗೆ ಅವು ದೊರೆಯುತ್ತಿಲ್ಲ. ಈ ಬಗ್ಗೆ ವಿಶ್ವವಿದ್ಯಾಲಯಗಳಿಗೆ ಸಂಬಂಧಿಸಿದವರು ಕಾರ್ಯಪ್ರವೃತ್ತರಾಗಿಲ್ಲ. ವಿಪರ್ಯಾಸವೆಂದರೆ, ಸಂಬಂಧಿಸಿದ ಉನ್ನತ ಅಧಿಕಾರಿಗಳು ಮುಂತಾದವರನ್ನು ನಾನು ಸ್ವಇಚ್ಛೆಯಿಂದ ಸಂಪರ್ಕಿಸಿದರೂ ಅದನ್ನು ತಪ್ಪಾಗಿ ಅರ್ಥೈಸುವ ಸ್ಥಿತಿ ಉಂಟಾಗಿದೆ. ಜೆ.ಎಸ್.ಎಸ್. ಅಂಥ ಸಂಸ್ಥೆಯ ಮೂಲಕ ಅನೇಕ ಗ್ರಾಮೀಣ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲಾಗಿದೆ. ಒಂದು ಇಂಥ ಪ್ರಯತ್ನದ ಫಲವಾಗಿ ೧೦೦ ಕುಟುಂಬಗಳ ಬಾಳು ಹಸನಾಗಿದೆ. ಇಂಥ ನೂರಾರು ಪ್ರಕಲ್ಪಗಳನ್ನು ಹಮ್ಮಿಕೊಳ್ಳಲು ಸಾಧ್ಯವಿದೆ.

**ಜಿ.ಆರ್.** : ಇಂದಿನ ಪರಿಸ್ಥಿತಿಯಲ್ಲಿ ರೈತರ ಸ್ವಾವಲಂಬನೆ, ಅವರ ಆರ್ಥಿಕ ಸ್ಥಿತಿ ಸುಧಾರಣೆಗಳ ದಿಸೆಯಲ್ಲಿ ತಮ್ಮ ಸಲಹೆಗಳೇನು ?

**ಡಾ|| ಎಂ. ಮಹದೇವಪ್ಪ:**

- ❖ ಅನೇಕ ಮಹತ್ವದ ಮಾಹಿತಿಗಳು ನಮ್ಮ ಜನರನ್ನು ತಲುಪುತ್ತಿಲ್ಲ. ಮಾಧ್ಯಮಗಳು ಸಹ ಕೃಷಿ ಸಂಬಂಧವಾಗಿ ಈ ದಿಸೆಯಲ್ಲಿ ಪರಿಣಾಮಕಾರಿಯಾಗಿ ಕೆಲಸಮಾಡುತ್ತಿಲ್ಲ. ಅದನ್ನು ಚೆನ್ನಾಗಿ ವ್ಯಾಪಕವಾಗಿ ಮಾಡಬೇಕು.
- ❖ ಪ್ರೈಮರಿ ಶಾಲೆ ಮಟ್ಟದಿಂದ ಮಕ್ಕಳಿಗೆ ಕೃಷಿ ಸಂಬಂಧವಾದ ಜ್ಞಾನವನ್ನು ಕೊಡುವ ವ್ಯವಸ್ಥೆಯಾಗಬೇಕು.
- ❖ ರೈತರು ಸಂಘಟಿತರಾಗಬೇಕು. ಕುತಂತ್ರಗಳಿಗೆ ಮತ್ತು ಮೋಸಕ್ಕೆ ಅವರು ತುತ್ತಾಗಕೂಡದು.
- ❖ ಇವತ್ತು ನಡೆಯುತ್ತಿರುವ ವಿಶೇಷ ಆರ್ಥಿಕವಲಯ ಯೋಜನೆ ಸಾಧುವಲ್ಲ. ದೇಶದಲ್ಲಿ ಕೃಷಿಗೆ ಅತ್ಯಗತ್ಯವಾದ ಸಂಪೂರ್ಣ ಪ್ರದೇಶದ ಸಮೀಕ್ಷೆ ಆಗಬೇಕು. ಆ ಪ್ರದೇಶವನ್ನು ಎಂದೂ ಕೃಷಿಯೇತರ ಚಟುವಟಿಕೆಗಳಿಗೆ ಕೊಡಮಾಡದಂತೆ ರಕ್ಷಿಸಬೇಕು.
- ❖ ರೈತರಿಗೆ ಕೊಡುವ ಸಬ್ಸಿಡಿ ಮುಂತಾದವುಗಳಿಂದ ಅವರಿಗೆ ಹಾನಿಯೇ ಹೆಚ್ಚು. ಬದಲಾಗಿ ಅವರು ಸ್ವಾವಲಂಬಿಗಳಾಗುವ ವ್ಯವಸ್ಥೆಯನ್ನು ಕಲ್ಪಿಸಿಕೊಡಬೇಕು.

**ಎನ್. ಗೋಪಾಲಕೃಷ್ಣ** : ಸುಸಂಘಟಿತ ಬೇಸಾಯದಲ್ಲಿ ರೈತರು ತೊಡಗಬೇಕೆಂದು ತಾವು ಸದಾ ಪ್ರತಿಪಾದಿಸುತ್ತ ಬಂದವರು. ಇದು ಇಂದಿಗೂ ಸಾಧ್ಯವೆ ?

**ಪ್ರೊ|| ಬಿ. ವಿ. ವೆಂಕಟರಾವ್** : ವೈವಿಧ್ಯಮಯ ಚಟುವಟಿಕೆಗಳು ಅಂದರೆ ವಿವಿಧ ರೊಕ್ಕದ ಬೆಳೆಗಳು ಸೇರಿದಂತೆ, ಬೆಳೆ ಸಂಯೋಜನೆ, ಪಶುಸಂಗೋಪನೆ, ಬಯೋಗ್ಯಾಸ್ ಸಂವರ್ಧನೆ, ತಾಂತ್ರಿಕ ಅನುಕೂಲಗಳನ್ನು ಅಳವಡಿಸಿಕೊಂಡ ಗುಡಿ ಕೈಗಾರಿಕೆ, ಬಿಡಿಭಾಗಗಳ ತಯಾರಿಕೆ ಇರುವ ಸುಸಂಘಟಿತ ಅಥವಾ ಇಂಟಿಗ್ರೇಟೆಡ್ ಕಾರ್ಯಕ್ರಮದಿಂದ ಒಂದು ಎಕರೆ ಭೂಮಿಯಲ್ಲಿ ರೈತ ತಾನು ತನ್ನ ಕುಟುಂಬ ಸದಾ ಕಾಲ ತಮ್ಮ ದೈಹಿಕ, ಬುದ್ಧಿ ಶ್ರಮದಿಂದ, ಹಂತ ಹಂತವಾಗಿ ಸಾಮಾಜಿಕ - ಆರ್ಥಿಕ ಉನ್ನತಿ ಸಾಧಿಸಬಹುದು. ನ್ಯೂಯಾರ್ಕ್‌ನ ಅಗ್ರಗಣ್ಯ ಬ್ಯಾಂಕ್‌ಗಳಲ್ಲಿ ಒಂದಾದ ಲೇಮನ್ ಬ್ರದರ್ಸ್ ಬ್ಯಾಂಕ್ ದಿವಾಳಿಯ ಘೋಷಣೆಯಿಂದ ಇಂದಿನ ಜಾಗತಿಕ ಆರ್ಥಿಕ ಹಿಂಜರಿತದ ಬೆದರುಬೊಂಬೆಯಾಟ ಪ್ರಾರಂಭವಾಯಿತು. ಇದು ಭೂಕಂಪವಲ್ಲ, ಕೆಲವು ವರ್ಷಗಳ ಹಿಂದೆ 'ಅಮೆರಿಕಾ' ದಕ್ಷಿಣ ಪ್ರಾಂತಗಳಲ್ಲಿ ಆದ ಕತ್ರಿನಾ ಸುಂಟರ ಗಾಳಿ - ಪ್ರವಾಹದಂತಹ ದಾರುಣ ದುರಂತವಲ್ಲ, ಬ್ಯಾಂಕಿನ ಧುರೀಣರು ತಾವು ತಮ್ಮವರು ಸೇರಿ ಮುಳುಗಿಸಿದ ಕೋಟ್ಯಂತರ ಡಾಲರ್ ಹಣ ಹೀಗೆ ಒಂದಾದ ಮೇಲೆ ಒಂದು ಹಣಕಾಸು ಹಿತಾಸಕ್ತಿಗಳ ವಂಚನೆ. ತತ್ಫಲ ಎಲ್ಲೆಡೆ ಭಯಾನಕ ಹಣಕಾಸು ಅವ್ಯವಸ್ಥೆ. ಇದರಿಂದಾಗಿ ನಮ್ಮ ಮುಂಬೈ ಷೇರುಪೇಟೆ ಹಾಗೂ ಎಲ್ಲಾ ವಾಣಿಜ್ಯ ಚಟುವಟಿಕೆಗಳ ಮೇಲೂ ದುಷ್ಪರಿಣಾಮವಾಯಿತು. ಕೈಗಾರಿಕೆಗಳ ಹಿಂಜರಿತ, ಉದ್ಯೋಗ ಕಡಿತ, ಹಾಹಾಕಾರಗಳಿಗೂ ನಮ್ಮ ಭೂಮಿ ಉತ್ಪಾದನೆಗೂ ಸಂಬಂಧವಿಲ್ಲ. ನಮ್ಮ ಭೂಮಿ, ಅದನ್ನವಲಂಬಿಸಿದ ಜನ, ಅವರ ಸೃಜನಾತ್ಮಕ ಅಭಿವೃದ್ಧಿಗೆ ಕುಂದಾಗಬೇಕಿಲ್ಲ. ಆಗಲೇ ಬ್ಯಾಂಕ್ ಮುಳುಗಿಸಿರುವ ಜನರಿಗೆ ಬೇಲ್‌ಔಟ್ ಮಾಡುವುದು ಅಧಿಕಾರ ದುರುಪಯೋಗ. ಅದೇ ಹಣವನ್ನು ಒಂದು ಎಕರೆ ಉದ್ಯಮಕ್ಕೆ ಬಂಡವಾಳವಾಗಿ ಕೊಟ್ಟರೆ ಭೂ ಉತ್ಪನ್ನ ಬೆಳೆಯುತ್ತದೆ, ಜನರ ನೆಮ್ಮದಿಗೆ ಸಾಧನವಾಗುತ್ತದೆ.


ಲೇಖನವನ್ನು ಸಿದ್ಧಪಡಿಸಿದವರು : ಎನ್. ಗೋಪಾಲಕೃಷ್ಣ
ನಂ. ೧೧೧, ೪ನೇ ಅಡ್ಡರಸ್ತೆ, [illegible] ಎದುರು
ಕೆ.ಎಚ್. ರಂಗನಾಥ [illegible]
ಬೆಂಗಳೂರು - [illegible]



ನಭಾವಲೋಕನ

# ಮುಂಜಾವಿನಲ್ಲಿ ಗ್ರಹಗಳ ಗುಂಪು

**ಸಂ**ಜೆಯ ಆಕಾಶದಲ್ಲಿ ಕಾಣುವ ಏಕೈಕ ಗ್ರಹ ಶನಿ. ದುರ್ಬಿನು ದೂರದರ್ಶಕಗಳಿಂದ ಅದರ ಉಂಗುರಗಳನ್ನು ಈಗ ಗುರುತಿಸಬಹುದಾದರೂ ದಿನೇ ದಿನೇ ಅದರ ಓರೆಕೋನ ಬದಲಾಗುವುದನ್ನು ಕಾಣಬಹುದು. ಇದನ್ನು ಬರಿಗಣ್ಣಿನಲ್ಲಿ ಗುರುತಿಸಲು ಚಂದ್ರನ ಸಹಾಯ ಪಡೆಯಬಹುದು. ಏಳರ ಸಂಜೆ ಅರ್ಧಾಧಿಕ ಚಂದ್ರನ ಪಕ್ಕ ಕಾಣುವ ಚಿಕ್ಕೆಯೇ ಶನಿ. ಹೀಗೆ ಗುರುತಿಸಿ ಆದ ಮೇಲೆ, ಚಂದ್ರನಿಲ್ಲದಾಗಲೂ ಗುರುತಿಸಬಹುದು. ರಾತ್ರಿ ಇಡೀ ನೋಡಲು ಸಿಗುತ್ತಿರುವುದೊಂದು ವಿಶೇಷ ಎನ್ನಬಹುದು. ತಿಂಗಳ ಉತ್ತರಾರ್ಧದಲ್ಲಿ ಸಂಜೆ ಬುಧ ಪಶ್ಚಿಮದಂಚಿನಲ್ಲಿ ಕಾಣುವುದು. ಇದನ್ನು ಗುರುತಿಸಲು ಮಾರ್ಗದರ್ಶಿ ಚಂದ್ರನನ್ನು ಕಾಯಬೇಕು. ೨೬ರ ಸಂಜೆ ರೇಖಾ ಚಂದ್ರನನ್ನು ಗುರುತಿಸಿ. ಅದರ ಪಕ್ಕ ಕಾಣುವ ಚಿಕ್ಕೆಯೇ ಬುಧ. ೨೭ರ ಸಂಜೆ ಚಂದ್ರ ಬುಧನನ್ನು ದಾಟಿ ಮೇಲೆ ಬಂದಿರುತ್ತದೆ. ಆ ಮುಂದಿನ ದಿನಗಳಲ್ಲಿ ಕ್ರಮೇಣ ಬುಧ ಅಂಚಿಗೆ ಸರಿಯುವುದನ್ನು ಕಾಣಬಹುದು.

ಬೆಳಗಿನ ಜಾವ ಮಂಗಳ, ಶುಕ್ರ ಮತ್ತು ಗುರು ಗ್ರಹಗಳ ಓಟದ ಸ್ಪರ್ಧೆಯನ್ನು ಕಾಣಬಹುದು. ೨೦-೨೨ರ ಅವಧಿಯಲ್ಲಿ ಚಂದ್ರನೂ ಇವುಗಳೊಡನೆ ಸೇರುತ್ತಾನೆ. ಮಂಗಳ ಕ್ಷೀಣವಾಗಿದೆಯಾದರೂ ಗುರುತಿಸಲು ಅಸಾಧ್ಯವೇನಲ್ಲ. ೨೨ರಂದು ಚಂದ್ರ ಶುಕ್ರನನ್ನು ಮರೆಮಾಡುವ ಆಚ್ಛಾದನೆ ನಡೆಯಲಿದೆ. ಆದರೆ ಅದು ನಮಗೆ ಕಾಣುವುದಿಲ್ಲ. ಹಾಗೆಯೇ ೧೩ರಂದು ನಡೆಯುವ ಜ್ಯೇಷ್ಠಾ ನಕ್ಷತ್ರದ ಆಚ್ಛಾದನೆಯೂ ನಮಗೆ ಕಾಣುವುದಿಲ್ಲ.

ಚಂದ್ರನಿಲ್ಲದ ರಾತ್ರಿಗಳು ಎಂದು ಸೂಚಿಸಿರುತ್ತೀರಿ. ಇದನ್ನು ಅರ್ಥಮಾಡಿಕೊಳ್ಳುವುದು ಹೇಗೆ ಎಂದು ವೀಕ್ಷಕರೊಬ್ಬರು ಪ್ರಶ್ನೆಯಿತ್ತಿದ್ದಾರೆ. ಖಗೋಳ ದಿನಚರಿಯಲ್ಲಿ ಹುಣ್ಣಿಮೆ ಅಮಾವಾಸ್ಯೆ ಎಂಬ ನಮೂದುಗಳನ್ನು ಗಮನಿಸಿ. ಅಮಾವಾಸ್ಯೆಯಂದು ಮತ್ತು ಮರುದಿನ ಚಂದ್ರ ಕಾಣುವುದಿಲ್ಲ. ಆ ಮುಂದಿನ ದಿನಗಳಲ್ಲಿ ಸಂಜೆ ಮಾತ್ರ ಕಾಣುತ್ತದೆ. ಉದಾಹರಣೆಗೆ ಈ ತಿಂಗಳಲ್ಲಿ ಕೊನೆಯವಾರ ಚಂದ್ರನ ದರ್ಶನ ಇಲ್ಲ ಎನ್ನಬಹುದು. ೨೮ರಂದು ಬಾಲಚಂದ್ರ ಸಂಜೆ ಕಾಣುತ್ತದೆಯಾದರೂ ರಾತ್ರಿ ೯ರ ಹೊತ್ತಿಗೆ ಕಂತುವುದು. ಆದ್ದರಿಂದ ಆ ಮುಂದೆ ಬೆಳಗಿನ ಜಾವದವರೆಗೂ ಚಂದ್ರನ ಬೆಳಕಿಲ್ಲ. ತಿಂಗಳ ಆದಿಭಾಗದಲ್ಲಿ ಚಂದ್ರನ ಬೆಳಕು ಹೆಚ್ಚು. ಚಾಂದ್ರಮಾಸದ ಮೊದಲಪಾದ ಎಂಬುದರ ಅರ್ಥ - ನಡುರಾತ್ರಿಯವರೆಗೂ ಚಂದ್ರನ ಬೆಳಕು ಇರುತ್ತದೆ ಎಂಬುದನ್ನು ಸೂಚಿಸಿರುವುದು. ಅಲ್ಲಿಂದ ಮುಂದೆ ಹುಣ್ಣಿಮೆಯವರೆಗೂ ಚಂದ್ರನ ಬೆಳಕು ಹೆಚ್ಚುತ್ತಲೇ ಏರುವುದು. ಆ ಮೇಲೆ ಚಾಂದ್ರಮಾಸದ ಕೊನೆಯಪಾದದವರೆಗೂ ಕಡಿಮೆಯಾಗುವುದು. ಆದರೆ ಆಗ ನಡುರಾತ್ರಿಯಲ್ಲಿ ಚಂದ್ರ ಇರುವುದು. ಹೀಗೆ ತಿಂಗಳುದ್ದಕ್ಕೂ ಚಂದ್ರನ ಬೆಳಕು ವ್ಯತ್ಯಾಸವಾಗುವುದಲ್ಲದೇ ರಾತ್ರಿಯ ಯಾವ ಹೊತ್ತಿನಲ್ಲಿ ದೊರಕುವುದು ಎಂಬ ಅಂಶವೂ ವ್ಯತ್ಯಾಸವಾಗುವುದು. ಈ ತಿಂಗಳಲ್ಲಿ ಸಂಜೆಯ ಆಕಾಶದಲ್ಲಿ ಮಹಾವ್ಯಾಧ ಮುಂತಾದ ನಕ್ಷತ್ರಪುಂಜಗಳ ಸೌಂದರ್ಯ ಸವಿಯುವುದು ಸಾಧ್ಯವಾಗುವುದಿಲ್ಲ. ಅಕಸ್ಮಾತ್ ಯಾವುದಾದರೂ ಧೂಮಕೇತು ಸಂಜೆ ಕಾಣುವಂತೆ ಇದ್ದಲ್ಲಿ ಅದನ್ನು ಪತ್ತೆಮಾಡುವುದೂ ಕಷ್ಟವಾಗುತ್ತದೆ. ಆದರೆ ಬೆಳಗಿನ ಜಾವ ಚಂದ್ರನ ಬೆಳಕು ಇರುವುದಿಲ್ಲ. ಆಗ ವೃಶ್ಚಿಕ, ಧನು ರಾಶಿಗಳ ಸೌಂದರ್ಯವನ್ನು ಸವಿಯಬಹುದು. ಹುಣ್ಣಿಮೆಯ ಆಸುಪಾಸಿನಲ್ಲಿ ರಾತ್ರಿ ಇಡೀ ಚಂದ್ರನ ಬೆಳಕು ಇರುತ್ತದೆ. ಆ ಮುಂದೆ ಸಂಜೆಯ ಆಕಾಶದಲ್ಲಿ ಆಕಾಶಗಂಗೆಯ ಸೌಂದರ್ಯವನ್ನು ಸವಿಯಬಹುದು. ನೆಬ್ಯುಲಾ ಗಳನ್ನು, ಧೂಮಕೇತುಗಳನ್ನು (ಇದ್ದರೆ) ಹುಡುಕಬಹುದು. ಆದರೆ ಬೆಳಗಿನ ಜಾವ ಇದು ಸಾಧ್ಯವಾಗುವುದಿಲ್ಲ.



೨೨ರ ಬೆಳಗ್ಗೆ ಗುರು, ಮಂಗಳ, ಶುಕ್ರ ಮತ್ತು ಚಂದ್ರ

ಈ ತಿಂಗಳಲ್ಲಿ ಲಿರಿಡ್ಸ್ ಎಂಬ ಹೆಸರಿನ ಉಲ್ಕಾವೃಷ್ಟಿ ಇದೆ. ಈ ಉಲ್ಕೆಗಳೆಲ್ಲಾ ಲೈರಾ ಅಥವಾ ವೀಣಾ ಎಂಬ ಪುಂಜದಿಂದ ಹೊರಟಂತೆ ಕಾಣುತ್ತವೆ. ಈ ಪುಂಜ ಕಾಣುವುದು ಬೆಳಗಿನ ಜಾವದಲ್ಲಿ - ಆದ್ದರಿಂದ ವೃಷ್ಟಿಯನ್ನು ನೋಡಲು ಬೆಳಗಿನ ಜಾವ ಚಂದ್ರನಿದ್ದರೆ ಅಡ್ಡಿಯಾಗುವುದು. ಪ್ರತಿ ವರ್ಷದ ಏಪ್ರಿಲ್ ೨೨ರಂದು ವೃಷ್ಟಿಯ ಚಟುವಟಿಕೆ ಗರಿಷ್ಠವಾಗುವುದು. ಗಂಟೆಗೆ ೧೮-೨೦ ಉಲ್ಕೆಗಳು ಕಾಣುವ ಸಾಧ್ಯತೆ ಇದೆ. ಈ ವರ್ಷ ಆ ದಿನಾಂಕಕ್ಕೆ ಸಮೀಪವಾಗಿ ಅಮಾವಾಸ್ಯೆ ಇರುವುದು ಅನುಕೂಲಕರವಾಗಿದೆ. ಅಂದರೆ ೨೨ರಂದು ಬೆಳಗಿನ ಜಾವ ಚಂದ್ರನಿದ್ದರೂ ಬೆಳಕು ಹೆಚ್ಚಾಗಿರುವುದಿಲ್ಲ.




### ಖಗೋಳ ದಿನಚರಿ

| | |
|---|---|
| ೨ | ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಗೆ) |
| ೭ | ಶನಿ - ಚಂದ್ರ ಜೋಡಿ |
| ೯ | ಹುಣ್ಣಿಮೆ ೨೦:೨೬ಕ್ಕೆ (ಚಿತ್ರಾ ನಕ್ಷತ್ರದ ಸಮೀಪ ಚಂದ್ರನ ಸ್ಥಾನ) |
| ೧೩ | ಚಂದ್ರ - ಜ್ಯೇಷ್ಠಾ ಜೋಡಿ (ಆಚ್ಛಾದನೆ ಕಾಣುವುದಿಲ್ಲ) |
| ೧೪ | ಶುಕ್ರದ ಹಿನ್ನಡೆ ಮುಕ್ತಾಯ |
| ೧೭ | ಚಾಂದ್ರಮಾಸದ ಕೊನೆಯ ಪಾದ |
| ೧೮ | ಶುಕ್ರ - ಮಂಗಳ ನಡುವೆ ಕನಿಷ್ಠ ಕೋನ |
| ೨೦ | ಚಂದ್ರ - ಗುರು ಜೋಡಿ |
| ೨೨ | ಚಂದ್ರ - ಶುಕ್ರ - ಮಂಗಳ ಪುಟ್ಟ ಗುಂಪು (ಶುಕ್ರದಆಚ್ಛಾದನೆ ಕಾಣುವುದಿಲ್ಲ) |
| | ಲಿರಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ |
| ೨೪ | ಅಮಾವಾಸ್ಯೆ ೦೮:೪೩ಕ್ಕೆ |
| ೨೬ | ಬುಧ ಗ್ರಹದ ಗರಿಷ್ಠ ಕೋನೋನ್ನತಿ |
| | ಚಂದ್ರ - ಬುಧ ನಡುವೆ ಕನಿಷ್ಠ ಕೋನ |
| ಮೇ ೧ | ಶನಿ - ಚಂದ್ರ ಜೋಡಿ |

ಡಾ॥ ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

# ಕನ್ನಡ ಕಾವ್ಯದಲ್ಲಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕು

ಹುಳಗೋಳ ನಾಗಪತಿ ಹೆಗಡೆ

ಮನುಷ್ಯ ತನ್ನ ನೆಮ್ಮದಿಯ ಬದುಕಿಗಾಗಿ ಕಟ್ಟಿಕೊಂಡ ಒಂದು ವ್ಯವಸ್ಥೆಯೇ ಸಮಾಜ. ಈ ವ್ಯವಸ್ಥೆಯಲ್ಲಿ ಮನುಷ್ಯ ತನಗೆ ತಾನೇ ಹಾಕಿಕೊಂಡ ನಿಯಮಗಳು, ಕಟ್ಟುಪಾಡುಗಳು ಹಾಗೂ ನಂಬಿಕೆಗಳು ಅವನ ವ್ಯವಸ್ಥಿತ ಜೀವನಕ್ಕೆ ಬುನಾದಿಯಾದವು. ಈ ಸಾಮಾಜಿಕ ವ್ಯವಸ್ಥೆಯು ಕಾಲಕ್ಕೆ ತಕ್ಕಂತೆ ಅಳವಡಿಸಿಕೊಂಡ ನಾನಾ ಧ್ಯೇಯಗಳು, ವಿಷಯಗಳು, ತತ್ವಗಳು ಹಾಗೂ ಧರ್ಮಗಳ ಮೌಲ್ಯ ತಾರತಮ್ಯ ಜ್ಞಾನದಿಂದಾದ ಸಮನ್ವಯ ಸ್ವಾರಸ್ಯವೇ ಸಂಸ್ಕೃತಿ ಎಂದು ಹೇಳಬಹುದಾದರೂ ಅದರ ಅರ್ಥ ವಿವರಣೆ ಅಷ್ಟು ಸರಳವಾಗಿಲ್ಲ. ಹಾಗೆಯೇ ಯಾವುದೇ ಒಂದು ಸಂಗತಿಯನ್ನು ತೆಗೆದುಕೊಂಡು, 'ಇದು ನಮ್ಮ ಸಂಸ್ಕೃತಿ' ಎಂದು ನಿರ್ದಿಷ್ಟವಾಗಿ ಹೇಳಲೂ ಸಾಧ್ಯವಿಲ್ಲ. ಸಂಸ್ಕೃತಿಯು ಒಂದು ಅತ್ಯಂತ ಸಂಕೀರ್ಣವಾದ ಪರಿಕಲ್ಪನೆ.

ಸಾಹಿತ್ಯವು ಸಮಾಜ ಹಾಗೂ ಸಂಸ್ಕೃತಿಗಳು ನಂಬಿರುವ ಮೌಲ್ಯ, ಆದರ್ಶ, ತತ್ವ-ಸಿದ್ಧಾಂತಗಳನ್ನು ಪಡಿಮೂಡಿಸುವ ಮೂಲಕ ಸಮಾಜ ಹಾಗೂ ಸಂಸ್ಕೃತಿಗಳ ಮೂಲ ನೆಲೆಯಾಗಬಲ್ಲದು. ಈ ನೆಲೆಯಲ್ಲಿ ನಮ್ಮ ಕಥೆ ಹಾಗೂ ಕಾವ್ಯಗಳಲ್ಲಿ ನಮ್ಮ ಸಮಾಜ ಹಾಗೂ ಸಂಸ್ಕೃತಿಗಳು ಅನಾವರಣಗೊಂಡಿರುವ ಬಗೆ ನಿಜಕ್ಕೂ ವಿಚಾರಯೋಗ್ಯವಾದುದು. ಹಾಗೆಂದು ಕಥೆಯಿರಲಿ, ಕಾವ್ಯವಿರಲಿ ಅಥವಾ ಇನ್ನಾವುದೇ ಸಾಹಿತ್ಯ ಪ್ರಕಾರವಿರಲಿ ಅದು ಸಮಾಜವನ್ನು ಪ್ರತಿಬಿಂಬಿಸಬಲ್ಲುದು, ಪ್ರಭಾವಿಸಬಲ್ಲುದೇ ಹೊರತು ಪರಿವರ್ತಿಸಲಾಗದು ಎಂಬುದು ನನ್ನ ನಂಬಿಕೆ. ೧೨ನೇ ಶತಮಾನದಲ್ಲಿ ಬಸವಣ್ಣನವರಾದಿಯಾಗಿ ಹಲವು ವಚನಕಾರರು ಜಾತಿ ವ್ಯವಸ್ಥೆಯ ಅನಿಷ್ಟಗಳನ್ನು ಕಟುವಾಗಿ ಟೀಕಿಸಿದರು. ಮುಂದೆ ದಾಸ ವಾಙ್ಮಯ, ಸರ್ವಜ್ಞ ಮುಂತಾದವರೂ ಇದೇ ಜಾಡಿನಲ್ಲಿ ಮುಂದುವರೆದರು. ಆ ಮಹಾನುಭಾವರ ಸಾಹಿತ್ಯಕ್ಕೇನಾದರೂ ಸಮಾಜವನ್ನು ಪರಿವರ್ತಿಸುವ ಶಕ್ತಿಯಿದ್ದಿದ್ದರೆ ಈ ಹೊತ್ತು ಈ ನಾಡಿನಲ್ಲಿ ಪಂಪ ಆಶಿಸಿದಂತೆ, 'ಮಾನವ ಕುಲಂ ತಾನೊಂದೆ ವಲಂ' ಎಂಬ ವಿಶ್ವ ಮಾನವತ್ವ ಸಾಕಾರಗೊಂಡಿರಬೇಕಿತ್ತು. ಕಥೆ ಕಾವ್ಯಗಳು, 'ಹೀಗೆ ಇದೆ', 'ಹೀಗೆ ಇರಬೇಕಿತ್ತು' ಎಂದು ಉಪದೇಶಿಸಬಲ್ಲವೇ ವಿನಾ 'ಹೀಗೆಯೇ ಇರು' ಎಂದು ನಿಯಮನ ಮಾಡಲಾರವು. ಈ ಎಚ್ಚರವನ್ನು ಇಟ್ಟುಕೊಂಡು ಕಥೆ ಹಾಗೂ ಕಾವ್ಯಗಳಲ್ಲಿ ನಮ್ಮ ಸಮಾಜ ಹಾಗೂ ಸಂಸ್ಕೃತಿಗಳು ತೆರೆದುಕೊಂಡಿರುವ ಬಗೆಯನ್ನು ಪರಿಶೀಲಿಸಬೇಕಾಗಿದೆ.

ಕನ್ನಡ ಸಾಹಿತ್ಯ ಪರಂಪರೆಯ ಕುರಿತು ಮಾತನಾಡುವಾಗ, 'ಬಸವಯುಗದಿಂದ ಕನ್ನಡ ಸಾಹಿತ್ಯವು ಸಮಾಜಮುಖಿಯಾಯಿತು' ಎನ್ನುವುದಿದೆ. ಅದು ಒಪ್ಪತಕ್ಕ ಮಾತೇ ಆದರೂ ಪಂಪಪೂರ್ವಯುಗ ಹಾಗೂ ಪಂಪಯುಗಗಳಲ್ಲಿಯೂ ಸಾಹಿತ್ಯವು ಸಮಾಜ ಹಾಗೂ ಸಂಸ್ಕೃತಿಗಳಿಂದ ವಿಮುಖವಾಗಿರಲಿಲ್ಲ ಎಂಬುದೂ ಗಮನಿಸತಕ್ಕ ಅಂಶವಾಗಿದೆ. ಆದರೆ ಆಗಿನ ಕಾವ್ಯಗಳಲ್ಲಿ ಅದು ಸುಪ್ತವಾದ ಸ್ಥಾಯೀಭಾವವಾಗಿ ಕಾಣುತ್ತದೆಯೇ ಹೊರತು ಎಲ್ಲಿಯೂ ಉಗಡವಾದದ್ದಿಲ್ಲ. ಅಂದಿನ ಕಾವ್ಯಗಳಲ್ಲಿ ನಮ್ಮ ಸಾಮಾಜಿಕ-ಸಾಂಸ್ಕೃತಿಕ ಮೌಲ್ಯಗಳಾದ ಸತ್ಯ, ಧರ್ಮ, ದಯೆ, ಅನುಕಂಪ, ತ್ಯಾಗ, ಬಲಿದಾನ, ಛಲ ಮುಂತಾದ ಗುಣಗಳು ಜೀವನದ ಆದರ್ಶಗಳಾಗಿ ವ್ಯಕ್ತವಾದವು. ಅವುಗಳನ್ನೇ ನವೋದಯ, ಪ್ರಗತಿಶೀಲ, ನವ್ಯ, ನವ್ಯೋತ್ತರ, ಬಂಡಾಯ ಪರಂಪರೆಯವರು ಬದುಕಿನ ವಾಸ್ತವಗಳನ್ನಾಗಿ ಚಿತ್ರಿಸಿದ್ದಾರೆ. ಹೀಗಾಗಿ ಕನ್ನಡ ಕಾವ್ಯ ಪರಂಪರೆಯು ಆರಂಭದಿಂದಲೂ ಸಮಾಜಮುಖಿಯಾಗಿಯೇ ಇದ್ದು ನಮ್ಮ ಶ್ರೀಮಂತ ಸಂಸ್ಕೃತಿಗೆ ಮೂಲನೆಲೆಯಾಗಿರುವುದನ್ನು ಅಲ್ಲಗಳೆಯುವಂತಿಲ್ಲ.

ಈ ನಿಟ್ಟಿನಲ್ಲಿ ಮೊದಲು ಪರಿಶೀಲನೆಗೆ ಒಳಪಡಿಸಬೇಕಾದದ್ದು ಕ್ರಿ.ಶ. ೭೦೦ರಲ್ಲಿ ರಚಿತವಾದ ಬಾದಾಮಿ ಶಾಸನ.

*ಸಾಧುಗೆ ಸಾಧು ಮಾಧುರ್ಯಂಗೆ ಮಾಧುರ್ಯಂ।*
*ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್।*

– ಎಂದು ಈ ಶಾಸನವು ವರ್ಣಿಸುವ ಕಪ್ಪೆ ಅರಭಟ್ಟನೆಂಬ ಮಾಂಡಲಿಕನ ಸ್ವಭಾವ ಚಿತ್ರಣವು ಸಮಸ್ತ ಕನ್ನಡಿಗರ ಸ್ವಭಾವವನ್ನು ಚಿತ್ರಿಸುವಂತಿದೆ. ಈ ಶಾಸನವು ವರ್ಣಿಸಿರುವಂತೆ ಸೌಮ್ಯ ಸ್ವಭಾವದ ಕನ್ನಡಿಗರು ಸಾಧು ಸ್ವಭಾವದವರಿಗೆ ಸಾಧುಗಳಾಗಿ, ಮಧುರ ಬಾಂಧವ್ಯವನ್ನು ಬಯಸುವವರಿಗೆ ಮಧುರ ಬಂಧುಗಳಾಗಿ ಇರುವವರು. ಕಾಲುಕೆರೆದು ಜಗಳಕ್ಕೆ ಬರುವ ವೈರಿಗಳ ಮಟ್ಟಹಾಕಲೂ ಇವರು ಹಿಂಜರಿಯಲಾರರೆಂಬುದು ಇಲ್ಲಿನ ತಾತ್ಪರ್ಯ.

ಕವಿರಾಜಮಾರ್ಗದ ಮಾರ್ಗಕಾರನಂತೂ, 'ಚೆದುರರ್ ನಿಜದಿಂ ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣತಮತಿಗಳ್' ಎಂದು ಓದು-ಬರಹ ಬಾರದಿದ್ದರೂ ಕನ್ನಡಿಗರು ಕಾವ್ಯ ರಸಾಸ್ವಾದನೆಯನ್ನು ಬಲ್ಲವರೆನ್ನುವ ಮೂಲಕ ಈ ಕನ್ನಡಿಗರ ಸುಸಂಸ್ಕೃತಿಯನ್ನು ಬಣ್ಣಿಸಿದ್ದಾನೆ.

ಮಾರ್ಗಕಾರನ ಮಾತನ್ನು ಕಣಜದೋಪಾದಿಯಲ್ಲಿರುವ ನಮ್ಮ ಜನಪದ ಕಾವ್ಯವು ಪುಷ್ಟೀಕರಿಸುತ್ತದೆ. ಓದಲು-ಬರೆಯಲು ತಿಳಿಯದಿದ್ದ ಜನಪದರ ಜೀವನದಲ್ಲಿ ಹಾಸುಹೊಕ್ಕಾಗಿದ್ದ ಸಾಮಾಜಿಕ ಸಾಂಸ್ಕೃತಿಕ ಮೌಲ್ಯಗಳು, ಆದರ್ಶಗಳು ಜನಪದರ ಗೋಪಿನ ಹಾಡಿನಲ್ಲಿ ಮೂಡಿಬಂದ ಪರಿ ಮಾತ್ರ ಅದ್ಭುತ. ದುಷ್ಟ ವ್ಯಾಘ್ರನು ಅಡ್ಡಗಟ್ಟಿ ನಿಂತು,

ಕನ್ನಡ ಸಾಹಿತ್ಯ ಪರಂಪರೆಯ ಕುರಿತು ಮಾತನಾಡುವಾಗ, 'ಬಸವಯುಗದಿಂದ ಕನ್ನಡ ಸಾಹಿತ್ಯವು ಸಮಾಜಮುಖಿಯಾಯಿತು' ಎನ್ನುವುದಿದೆ. ಅದು ಒಪ್ಪತಕ್ಕ ಮಾತೇ ಆದರೂ ಪಂಪಪೂರ್ವ ಯುಗ ಹಾಗೂ ಪಂಪ ಯುಗಗಳಲ್ಲಿಯೂ ಸಾಹಿತ್ಯವು ಸಮಾಜ ಹಾಗೂ ಸಂಸ್ಕೃತಿಗಳಿಂದ ವಿಮುಖವಾಗಿರಲಿಲ್ಲ ಎಂಬುದೂ ಗಮನಿಸತಕ್ಕ ಅಂಶವಾಗಿದೆ. ಆದರೆ ಆಗಿನ ಕಾವ್ಯಗಳಲ್ಲಿ ಅದು ಸುಪ್ತವಾದ ಸ್ಥಾಯೀಭಾವವಾಗಿ ಕಾಣುತ್ತದೆಯೇ ಹೊರತು ಎಲ್ಲಿಯೂ ಉಗಡವಾದದ್ದಿಲ್ಲ. ಅಂದಿನ ಕಾವ್ಯಗಳಲ್ಲಿ ನಮ್ಮ ಸಾಮಾಜಿಕ-ಸಾಂಸ್ಕೃತಿಕ ಮೌಲ್ಯಗಳಾದ ಸತ್ಯ, ಧರ್ಮ, ದಯೆ, ಅನುಕಂಪ, ತ್ಯಾಗ, ಬಲಿದಾನ, ಛಲ ಮುಂತಾದ ಗುಣಗಳು ಜೀವನದ ಆದರ್ಶಗಳಾಗಿ ವ್ಯಕ್ತವಾದವು. ಅವುಗಳನ್ನೇ ನವೋದಯ, ಪ್ರಗತಿಶೀಲ, ನವ್ಯ, ನವ್ಯೋತ್ತರ, ಬಂಡಾಯ ಪರಂಪರೆಯವರು ಬದುಕಿನ ವಾಸ್ತವಗಳನ್ನಾಗಿ ಚಿತ್ರಿಸಿದ್ದಾರೆ. ಹೀಗಾಗಿ ಕನ್ನಡ ಕಾವ್ಯ ಪರಂಪರೆಯು ಆರಂಭದಿಂದಲೂ ಸಮಾಜಮುಖಿಯಾಗಿಯೇ ಇದ್ದು ನಮ್ಮ ಶ್ರೀಮಂತ ಸಂಸ್ಕೃತಿಗೆ ಮೂಲನೆಲೆಯಾಗಿರುವುದನ್ನು ಅಲ್ಲಗಳೆಯುವಂತಿಲ್ಲ.

'ನನ್ನ ಹೊಟ್ಟೆಯು ತುಂಬಿರುವುದು' ಎಂದು ಅರ್ಥೈಸಿದಾಗ ಪುಣ್ಯಕೋಟಿ ಎಂಬ ಆ ತಾಯಿಗೆ ತನ್ನ ಪ್ರಾಣ ಹೋಗುವ ಬಗ್ಗೆ ಚಿಂತೆಯಿಲ್ಲ. ನಾವು ಕಣ್ಣಾರೆ ಪ್ರತ್ಯಕ್ಷವಾಗಿರುವ ಆ ವೇಳೆಯಲ್ಲಿಯೂ ಅವಳ ತಾಯ್ತನ ಜಾಗೃತವಾಗುತ್ತದೆ:

..............................

ಕಂದನಿರುವನು ದೊಡ್ಡಿಯೊಳಗೆ
ಒಂದು ನಿಮಿಷದಿ ಮೊಲೆಯ ಕೊಟ್ಟು
ಬಂದು ಸೇರುವೆನಿಲ್ಲಿಗೆ

– ಎನ್ನುವ ಅವಳ ಮಾತಿನಲ್ಲಿ ವ್ಯಕ್ತವಾಗುವ ಕರುಳ ಸಂಬಂಧ ಕರುಳು ಹಿಂಡುವಂತಿದೆ. ಮತ್ತೆ ಬರುವೆನೆಂದು ಸುಳ್ಳು ಹೇಳುವೆಯೆಂದು ಹುಲಿ ಅನುಮಾನಿಸಿದಾಗ ಗೋವು ಆಡುವ ನುಡಿ ನಮ್ಮ ಜನಪದರು ತಲೆತಲಾಂತರದಿಂದ ನಂಬಿಕೊಂಡು ಬಂದ ಆದರ್ಶವೂ ಆಗಿದೆ:

ಸತ್ಯವೇ ನಮ್ಮ ತಾಯಿ ತಂದೆ
ಸತ್ಯವೇ ನಮ್ಮ ಬಂಧು ಬಳಗ
ಸತ್ಯವಾಕ್ಯಕೆ ತಪ್ಪಿ ನಡೆದರ
ಮೆಚ್ಚನಾ ಪರಮಾತ್ಮನು

– ಎಂಬುದು ಹುಲಿಯ ಅನುಮಾನಕ್ಕೆ ಪುಣ್ಯಕೋಟಿಯ ಉತ್ತರ. ನಾಲಿಗೆಗೆ ಕಿಮ್ಮತ್ತಿದ್ದ ಕಾಲ ಅದು. ಕೊಟ್ಟ ಮಾತಿಗೆ ತಪ್ಪಿದರೆ ರೌರವ ನರಕ ಕಟ್ಟಿಟ್ಟ ಬುತ್ತಿ ಎಂದು ಅವರು ನಂಬಿದ್ದರು. ಪ್ರಾಮಿಸರಿ ನೋಟನ್ನೇ ನಕಲಿ ಮಾಡುವ ಈ ಕಾಲಕ್ಕೂ ಕೊಟ್ಟ ಮಾತಿಗೆ ತಪ್ಪದ ಆ ಕಾಲಕ್ಕೂ ಅದೆಷ್ಟು ಅಂತರ ನೋಡಿ ! ಹುಲಿಯನ್ನು ಒಪ್ಪಿಸಿ ಹೋಗಿ ಕರುವಿಗೆ ಹಾಲು ಕುಡಿಸಿ ಹೊರಟುನಿಂತ ಗೋವಿನಲ್ಲಿ ತನ್ನನ್ನು ತಬ್ಬಲಿಯನ್ನಾಗಿ ಮಾಡಿ ಹೋಗಬೇಡವೆಂದು ಗೋಗರೆಯುವ ಕರುವಿಗೆ ತಾಯಿ ಆಡುವ ಮಾತು ಇದಕ್ಕೆ ಸಾಕ್ಷಿಯಾಗಿ ನಿಲ್ಲುತ್ತದೆ:

ಕೊಟ್ಟ ಭಾಷೆಗೆ ತಪ್ಪಲಾರೆನು
ಕೆಟ್ಟ ಯೋಚನೆ ಮಾಡಲಾರೆನು

– ಎನ್ನುವ ಪುಣ್ಯಕೋಟಿ, ಕೊಟ್ಟ ಮಾತನ್ನು ಉಳಿಸಿಕೊಳ್ಳಲು ಪ್ರಾಣವನ್ನೇ ಪಣವಾಗಿ ಇಡಬಲ್ಲ ಕನ್ನಡಿಗರ ಸತ್ಯಸಂಧತೆಗೆ ಪ್ರಮಾಣವಾಗಿ ನಿಲ್ಲುತ್ತಾಳೆ.

ಕನ್ನಡ ಜನಪದ ಸಾಹಿತ್ಯದ ಶಿಖರಪ್ರಾಯವಾಗಿರುವ, 'ಕೆರೆಗೆ ಹಾರ' ಗೀತೆ ಕನ್ನಡಿಗರ ತ್ಯಾಗ, ಬಲಿದಾನ, ಔದಾರ್ಯ, ಪತಿವ್ರತಾಧರ್ಮ ಪಾಲನೆ, ದಾಂಪತ್ಯ ಜೀವನದ ಸಾರ್ಥಕತೆಗಳಿಗೆ ಒಂದು ಸುಂದರ ಮುನ್ನುಡಿಯಂತಿದೆ. ಊರಿನ ಹಿತಕ್ಕಾಗಿ ಕಲ್ಲನ ಕೇರಿಯ ಮಲ್ಲನ ಗೌಡ ಕೆರೆಯೊಂದನ್ನು ಕಟ್ಟಿಸಿದಾಗ ಅದರಲ್ಲಿ ಒಂದು ಹನಿ ನೀರೂ ಬರುವುದಿಲ್ಲ. ಜೋಯಿಸರು ದೋಷ ಪರಿಹಾರಾರ್ಥವಾಗಿ ಹಿರಿ ಸೊಸೆ ಮಲ್ಲವ್ವನನ್ನು ಬಲಿ ಕೊಡಬೇಕೆನ್ನುತ್ತಾರೆ. ಅವಳನ್ನು ಬಲಿ ಕೊಟ್ಟರೆ ವಂಶ ಮುಂದರಿಯುವುದಿಲ್ಲವೆಂಬ ಸಮಸ್ಯೆ ಎದುರಾಗುತ್ತದೆ. ಅಂತಿಮವಾಗಿ ಕಿರಿಯ ಸೊಸೆ ಭಾಗೀರಥಿಯನ್ನು ಬಲಿ ಕೊಡಬೇಕೆಂದು ತೀರ್ಮಾನವಾದಾಗ ಮನಸ್ಸನ್ನು ಗಟ್ಟಿ ಮಾಡಿಕೊಂಡ ಭಾಗೀರಥಿ ಕೊನೆಯ ದರ್ಶನಕ್ಕೆಂಬಂತೆ, ತನ್ನ ನಿಶ್ಚಯಕ್ಕೆ ಬೆಂಬಲ ಪಡೆಯಲೆಂಬಂತೆ ತಂದೆ, ತಾಯಿ ಹಾಗೂ ಅಕ್ಕನ ಬಳಿಗೆ ಹೋಗುತ್ತಾಳೆ. ಅವರನ್ನೆಲ್ಲ ಅಗಲುವಾಗ ಅವಳ ಮನದ ನಿಶ್ಚಯವನ್ನೂ ಮೀರಿ ಕಣ್ಣೀರು ಒಸರುತ್ತದೆ. ಕಾರಣ ಕೇಳಿದಾಗ, 'ನಮ್ಮತ್ತೆ ನಮ್ಮಾವ ಬೇರೆ ಇಡುತಾರಂತೆ', ಎನ್ನುವ ಅಪ್ರಿಯವಾದ ಸತ್ಯದ ಬದಲು ಪ್ರಿಯವಾದ ಸುಳ್ಳನ್ನು ಹೇಳುತ್ತಾಳೆ. ಅವರೆಲ್ಲ 'ಇಟ್ಟರೆ ಇಡಲೇಳು...' ಎಂದು ಆಸ್ತಿ, ಒಡವೆಗಳನ್ನು ಕೊಡುವ ಮಾತನಾಡುತ್ತಾರೆ. ಅವರ ಮಾತುಗಳಿಂದ ತೃಪ್ತಳಾಗದೆ ತನ್ನ ಮನೋನಿರ್ಧಾರಕ್ಕೆ ತಕ್ಕ ಬೆಂಬಲ ದೊರೆಯದೆ ತನ್ನ ಗೆಳತಿಯ ಬಳಿ ಹೋಗುತ್ತಾಳೆ. ರಕ್ತ ಸಂಬಂಧಕ್ಕಿಂತಲೂ ಸ್ನೇಹ ಸಂಬಂಧ ಹೆಚ್ಚಿನದೆಂಬುದನ್ನು ಜನಪದರು ಇಲ್ಲಿ ಸ್ಪಷ್ಟವಾಗಿ ತೋರಿಸಿಕೊಟ್ಟಿದ್ದಾರೆ. ತಂದೆ ತಾಯಂದಿರಿಗೆ ಸುಳ್ಳು ಹೇಳುವ ಭಾಗೀರಥಿ ಗೆಳತಿಯ ಮುಂದೆ, 'ನಮ್ಮತ್ತೆ ನಮ್ಮಾವ ಕೆರೆಗ್ಹಾರ ಕೊಡುತಾರಂತೆ' ಎಂದು ನಿಜವನ್ನೇ ನುಡಿಯುತ್ತಾಳೆ. ಅದಕ್ಕೆ ಗೆಳತಿ ನೀಡುವ ಸಮಾಧಾನದಲ್ಲಿ ನಮ್ಮ ಜನಪದರು ಅತಿಯಾಗಿ ಗೌರವಿಸುತ್ತಿದ್ದ ಪತಿವ್ರತಾ ಧರ್ಮದ ಸಾರಸರ್ವಸ್ವವೇ ಅಡಗಿದೆ. ಭಾಗೀರಥಿಯ ಮಾತಿಗೆ, 'ಕೊಟ್ಟರೆ ಕೊಡಲೇಳು ಇಟ್ಹಾಂಗ ಇರಬೇಕು' ಎನ್ನುವ ಮೂಲಕ ಅವಳ ನಿರ್ಧಾರವನ್ನು ಬೆಂಬಲಿಸುವುದರೊಂದಿಗೆ ಪತಿವ್ರತೆಯಾದವಳು ಗಂಡನ ಮನೆಯ ಹಿತಕ್ಕಾಗಿ ಪ್ರಾಣತ್ಯಾಗ ಮಾಡಲೂ ಹಿಂಜರಿಯಬಾರದೆನ್ನುವ ಹಿತೋಪದೇಶವೂ ಅಡಗಿದೆ. ತನ್ನ ಮಾತಿನ ಮೂಲಕ ಗೆಳತಿಯು ಗೆಳೆತನದ ನಿಜವಾದ ಧರ್ಮಕ್ಕೆ ಉದಾಹರಣೆಯಾಗುತ್ತಾಳೆ. ಈ ರೀತಿಯ ವಿವರಣೆ ಎಷ್ಟು ಅತೃಪ್ತಿಕರ ಎಂಬುದನ್ನೂ ವಿಮರ್ಶಕರು ತೆರೆದಿಟ್ಟಿದ್ದಾರೆ.

ಪತ್ನಿಯ ಮಾನವನ್ನು ಕಾಪಾಡುವುದು ಪತಿಯ ಧರ್ಮ. ಅವಳ ಮಾನಕ್ಕೆ ಹಾನಿಯುಂಟಾದಾಗ ಪತಿಯು ತಾಳುವ ಉತ್ಕಟ ಕ್ರೋಧವನ್ನು ಪಂಪನು ತನ್ನ ವಿಕ್ರಮಾರ್ಜುನ ವಿಜಯದಲ್ಲಿ ಮನೋಜ್ಞವಾಗಿ ಚಿತ್ರಿಸಿದ್ದಾನೆ. ಪಂಪನು ಚಿತ್ರಿಸಿದ ಭಾರತದ ಕತೆಯಲ್ಲಿ ಪಾತ್ರಗಳು ಒಂದೊಂದೂ ವಿಶಿಷ್ಟ ಗುಣದ ಪ್ರತೀಕವಾಗಿದ್ದು, ಕೇವಲ ಪ್ರತಿಮೆಗಳಾಗಿ ಉಳಿಯದೆ ಆಯಾ ಗುಣದ ಜೀವಂತ ಶಕ್ತಿಗಳಾಗಿ ಕಂಗೊಳಿಸಿವೆ.

'ಕುರುಕುಲಾರ್ಕನುಂ ಅರ್ಕನುಂ ಅಸ್ತಮೆಯ್ದಿದರ್' ಎಂದು ದುರ್ಯೋಧನನ ಅವಸಾನ ಕಾಲದಲ್ಲಿ ನಿಡುಸುಯ್ದಿರುವ ಕವಿಚಕ್ರವರ್ತಿ ರನ್ನನು, 'ನೆಲಕಿರುವೆನೆಂದು ಬಗೆವರೆ, ಛಲಕಿರುವೆಂ' ಎಂದು ದುರ್ಯೋಧನನ ಮೂಲಕ

ಹೇಳಿಸಿ ನಮ್ಮ ಭಲ ಸಂಸ್ಕೃತಿಯ ಮೇಲ್ಮೆಯನ್ನು ಮೆರೆದಿದ್ದಾನೆ.

ಸಮಾಜದ ಡೊಂಕನ್ನು ಎತ್ತಿ ತೋರಿಸುವಲ್ಲಿ, ನಮ್ಮ ಸಂಸ್ಕೃತಿಯ ಜೀವಂತ ಮೌಲ್ಯಗಳನ್ನು, ತತ್ವ-ಸಿದ್ಧಾಂತಗಳನ್ನು ಪ್ರಚುರಪಡಿಸುವಲ್ಲಿ ವಚನ ಸಾಹಿತ್ಯಕ್ಕೆ ನಿಶ್ಚಿತವಾಗಿಯೂ ಅಗ್ರಸ್ಥಾನ ನೀಡಲೇಬೇಕು. ವಚನಕಾರರ ಮುಕುಟ ಮಣಿಯಂತಿರುವ ಬಸವಣ್ಣನವರು ಪ್ರತಿಪಾದಿಸಿದ, 'ಕಾಯಕ ತತ್ವ' ಹಾಗೂ ಅವರು ಎತ್ತಿಹಿಡಿದ ಮಾನವೀಯ ಮೌಲ್ಯಗಳಿಗೆ ಸರಿಮಿಗಿಲಿಲ್ಲ.

ಕಾಯಕ ಮುಂದಿದ್ದೊಡೆ ಗುರುದರ್ಶನ ಮರೆಯಬೇಕು
ಕಾಯಕ ಮುಂದಿದ್ದೊಡೆ ಜಂಗಮದರ್ಶನ ಮರೆಯಬೇಕು
ಕಾಯಕ ಮುಂದಿದ್ದೊಡೆ ಲಿಂಗದರ್ಶನ ಮರೆಯಬೇಕು

– ಎಂದು ಘೋಷಿಸಿದ ಬಸವಣ್ಣನವರನ್ನು ಜಗತ್ತಿನ ಅದಾವ ಕಮ್ಯುನಿಸ್ಟನೂ ಒಪ್ಪಿಕೊಳ್ಳದೇ ಇರಲಾರ. ವರ್ಗರಹಿತ, ವರ್ಣರಹಿತ ಸಮಾಜದ ರಚನೆ ಅವರ ಹೊಂಗನಸಾಗಿತ್ತು.

ಕೊಲುವವನೇ ಮಾದಿಗ, ಹೊಲಸು ತಿಂಬವನೇ ಹೊಲೆಯ
ಕುಲವೇನೋ ಆವಂದಿರ ಕುಲವೇನು ? ಸಕಲ ಜೀವಾತ್ಮರಿಗೆ ಲೇಸನೇ
ಬಯಸುವ ನಮ್ಮ ಕೂಡಲಸಂಗನ ಶರಣರೇ ಕುಲಜರು

– ಎನ್ನುವ ಮೂಲಕ ವರ್ಣಾಶ್ರಮ ಧರ್ಮದ ಹೊಲಸನ್ನು ಝಾಡಿಸಿದ್ದಾರೆ.

ಉಳ್ಳವರು ಶಿವಾಲಯವ ಮಾಡುವರು
ನಾನೇನು ಮಾಡಲಿ ಬಡವನಯ್ಯಾ !
ಎನ್ನ ಕಾಲೇ ಕಂಬ, ದೇಹವೇ ದೇಗುಲ
ಶಿರವೇ ಹೊನ್ನ ಕಳಸವಯ್ಯಾ
ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ

– ಎನ್ನುವುದರೊಂದಿಗೆ ಉಳ್ಳವರ ಡಾಂಭಿಕತೆಯನ್ನು, ಐಶ್ವರ್ಯದ ನಶ್ವರತೆಯನ್ನು ಬಯಲುಮಾಡಿದ್ದಾರೆ.

ದಯವಿಲ್ಲದಾ ಧರ್ಮವಾವುದಯ್ಯಾ
ದಯವೇ ಧರ್ಮದ ಮೂಲವಯ್ಯಾ

– ಎನ್ನುತ್ತ ದಯವೇ ಸಕಲ ಧರ್ಮಗಳ ತಳಹದಿ ಎಂಬುದನ್ನು ಎತ್ತಿಹಿಡಿದಿದ್ದಾರೆ.

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಭಕ್ತಕವಿ ಎಂದೇ ಪರಿಗಣಿಸಲ್ಪಟ್ಟಿರುವ ಹರಿಹರ ಮಹಾಕವಿ ಅಣುರೇಣುತೃಣ ಕಾಷ್ಠಗಳಲ್ಲಿಯೂ ಭಗವಂತನ ಅಸ್ತಿತ್ವವನ್ನು ಕಂಡವನು. ಹಂಪೆಯ ವಿರೂಪಾಕ್ಷನ ಪರಮ ಭಕ್ತನಾಗಿದ್ದ ಹರಿಹರ,

ಏನವ್ವ ಸಂಪಿಗೆಯೆ ಶಿವನ ಸಿರಿಮುಡಿಗಿಂದು
ಹೂವ ಕೊಯ್ಯಲು ಬಂದಿಹೆನು ನೀಡವ್ವ ನೀಡು

– ಎಂದು ತರುಲತೆಗಳಲ್ಲಿ ಹೂವನ್ನು ಬೇಡಿಕೊಳ್ಳುವ ಮೂಲಕ ನಮ್ಮ ಸಂಸ್ಕೃತಿಯು ನಂಬಿರುವ ದೇವರ ಸರ್ವವ್ಯಾಪಕತೆಯನ್ನು ಪುಟಗೊಳಿಸಿದ್ದಾನೆ.

'ಹರಿಶ್ಚಂದ್ರ ಕಾವ್ಯ'ದ ಮೂಲಕ ಕನ್ನಡ ಕಾವ್ಯ ಪರಂಪರೆಯಲ್ಲಿ ಶಾಶ್ವತ ಸ್ಥಾನವನ್ನು ಗಳಿಸಿಕೊಂಡಿರುವ ರಾಘವಾಂಕನು ಹಾವು ಕಡಿದು ಮಡಿದ ಮಗ ಲೋಹಿತಾಶ್ವನನ್ನು ಕುರಿತು ತಾಯಿ ಚಂದ್ರಮತಿಯು ಗೋಳಾಡುವ ಸಂದರ್ಭದಲ್ಲಿ ನಮ್ಮ ಸಂಸ್ಕೃತಿಯು ಬಿಂಬಿಸುವ ಕರುಳಿನ ಕರೆಯನ್ನು ಸಮರ್ಥವಾಗಿ ಬಿಂಬಿಸಿದ್ದಾನೆ.

ಗಳಗಳನೆ ಮುನ್ನ ಬೆಂದುಳಿದಿರ್ದ ಕರಿಗೊಳ್ಳಿ
ಗಳನೆಲ್ಲವಂ ಸಿದುಗಿ ತಂದೊಟ್ಟಿ ಮೇಲೆ ಮಂ
ಗಳಮಯ ಕುಮಾರನಂ ಪಟ್ಟಿರಿಸಿ
ಕೆಲದೊಳುರುವಗ್ನಿಯಂ ಪಿಡಿದು ನಿಂದು
ಬೆಳೆದಲ್ಲಿ ಬೆಳೆ ಹುಟ್ಟಿದಲ್ಲಿ ಹುಟ್ಟೆಂದು ನುಡಿ
ದಿಳುಹಲನುಗೆಯ್ದುಳುಹಲಾರದಸವಳಿದು ಬಾ
ಯಳಿದು ಮೊರೆಯಿಟ್ಟೊಡಾ...

– ಎಂಬ ಚಂದ್ರಮತಿಯ ಪ್ರಲಾಪ ಕರುಳು ಹಿಂಡುವಂತೆ ಚಿತ್ರಿತವಾಗಿದೆ.

ದಾಸ ವಾಙ್ಮಯದ ಶ್ರೇಷ್ಠ ಪ್ರತಿನಿಧಿಗಳಾಗಿರುವ ಪುರಂದರದಾಸರು ಮತ್ತು ಕನಕದಾಸರ ಕೀರ್ತನೆಗಳಲ್ಲಿ ಹರಿಗುರುಗಳ ಸ್ಮರಣೆಯೊಂದಿಗೆ ಅಂತರಂಗ ನಿವೇದನೆ ಹಾಗೂ ಸಮಾಜ ವಿಮರ್ಶೆಗಳು ಪ್ರಮುಖ ಗುಣಗಳಾಗಿವೆ. ಪುರಂದರದಾಸರು ತಮ್ಮ, 'ನಗೆಯು ಬರುತಿದೆ', 'ಹೊಲೆಯ ಹೊರಗಿಹನೆ ? ಊರೊಳಗಿಲ್ಲವೆ ?', 'ಮಲವ ತೊಳೆಯಬಲ್ಲವರು ಮನವ ತೊಳೆಯಬಲ್ಲವರೆ' ಎಂಬಂತಹ ಕೀರ್ತನೆಗಳಲ್ಲಿ ಸಮಾಜದ ಲೋಪದೋಷಗಳನ್ನು ವಿಮರ್ಶಿಸಿದ್ದಾರೆ.

ಕುಲಕುಲ ಕುಲ ಕುಲವೆನ್ನುತಿಹರು
ಕುಲ ಯಾವುದು ಸತ್ಯಸುಖವುಳ್ಳ ಜನರಿಗೆ ॥
ಹಸುವಿನ ಮಾಂಸದೊಳುತ್ಪತ್ತಿ ಕ್ಷೀರವು
ವಸುಧೆಯೊಳಗೆ ಭೂಸುರರುಣಲಿಲ್ಲವೆ ॥

– ಎನ್ನುವ ಮೂಲಕ ಅನಿಷ್ಟ ಜಾತಿವ್ಯವಸ್ಥೆಯನ್ನು ಖಂಡಿಸಿ ಸಮಾನತೆಯನ್ನು ಬೋಧಿಸಿದ ಕನಕದಾಸರು ನುಡಿದಂತೆ ನಡೆದು ಸಮಾಜಕ್ಕೆ ಮಾದರಿಯಾದವರು.

ಸರ್ವಜ್ಞನೆಂಬವನು ಗರ್ವದಿಂದಾದವನೆ
ಸರ್ವರೊಳಗೊಂದೊಂದು ನುಡಿಗಲಿತು
ವಿದ್ಯೆಯ ಪರ್ವತವೆ ಆದ ಸರ್ವಜ್ಞನು – ಯಾವ ಲಾಕ್ಷಣಿಕ ನಿಯಮಗಳಿಗೂ ಕಟ್ಟುಬೀಳದೆ ಸಹಜ ಲಾಸ್ಯದಿಂದ ವಿನಯವಂತಿಕೆಯಿಂದ ತಾನು ಬದುಕಿದ ಸಮಾಜದ ವಾಸ್ತವ ಚಿತ್ರವನ್ನು ನೀಡುವಲ್ಲಿ ಸಫಲನಾಗಿದ್ದಾನೆ.

ಕುಡಿವುದೊಂದೇ ನೀರು, ನಡೆವುದೊಂದೇ ಭೂಮಿ
ಸುಡುವಗ್ನಿಯೊಂದೆ ಇರುತಿರಲು । ನಡುವೆ
ಕುಲಗೋತ್ರ ಎತ್ತಣದು ಸರ್ವಜ್ಞ

– ಎಂದು ಜಾತಿವಾದದ ಪೊಳ್ಳುತನವನ್ನು ಬಯಲು ಮಾಡುವ ಸರ್ವಜ್ಞ ಹೇಳದ ವಚನವೇ ಇಲ್ಲ. ಮನುಷ್ಯನ ಎಲ್ಲ ಗುಣಗಳಲ್ಲಿ ದಾನಗುಣವೇ ಶ್ರೇಷ್ಠವೆನ್ನುವ ಸರ್ವಜ್ಞ

ಈವಂಗೆ ದೇವಂಗೆ ಆವುದಂತರವಯ್ಯ
ದೇವನು ಜಗಕೆ ಕೊಡುವನು ಕೈಯ್ಯಾರೆ
ಈವನೇ ದೇವ ಸರ್ವಜ್ಞ

– ಎನ್ನುತ್ತ ದೇವರಿಗೂ ದಾನಿಗೂ ಯಾವ ಅಂತರವೂ ಇಲ್ಲ ಎನ್ನುವ ಮೂಲಕ ನಮ್ಮ ಸಂಸ್ಕೃತಿಯು ನೆಚ್ಚಿಕೊಂಡು ಬಂದಿರುವ ದಾನಗುಣವನ್ನು ಮೆಚ್ಚಿಕೊಂಡಿದ್ದಾನೆ.

ಆಧುನಿಕ ಕನ್ನಡ ಕಾವ್ಯದಲ್ಲಿ ನವೋದಯ ಪರಂಪರೆಯ ವಾರಸುದಾರರಾಗಿ ಬೇಂದ್ರೆ ಹಾಗೂ ಕುವೆಂಪು ಪ್ರಮುಖರಾಗಿದ್ದಾರೆ. ಡಾ॥ ದಿನಕರ ದೇಸಾಯಿಯವರು ನವೋದಯ ಕಾವ್ಯ ಪರಂಪರೆಗೆ ನೀಡಿದ ಕೊಡುಗೆಯನ್ನೂ ಮರೆಯುವಂತಿಲ್ಲ. ಪ್ರಕೃತಿ ಮತ್ತು ಸಂಸ್ಕೃತಿಗಳು ತಮ್ಮ ಎರಡು ಶ್ವಾಸಕೋಶಗಳೆಂಬಂತೆ ಕಾವ್ಯ ರಚನೆ ಮಾಡಿದ ನವೋದಯ ಕವಿಗಳು ತಮ್ಮ ಚಿಂತನೆ, ಆರಾಧನೆ, ತಲ್ಲೀನತೆಗಳ ಮೂಲಕ ನಮ್ಮ ಜನಪದರು, ಪ್ರಾಚೀನ ಕವಿಗಳು ಆದರ್ಶಗಳೆಂದು ಭಾವಿಸಿದ್ದ ಸಾಮಾಜಿಕ ಸಾಂಸ್ಕೃತಿಕ ಅಂಶಗಳನ್ನು ವಾಸ್ತವ ದೃಷ್ಟಿಕೋನದಿಂದ ನೋಡಿದರು. ನಮ್ಮ ಸಂಸ್ಕೃತಿಯು ನಂಬಿರುವ ಪತಿವ್ರತಾ ಧರ್ಮಪಾಲನೆಯನ್ನು ಕರಿಗೆ ಹಾರ ಪದ್ಯದಲ್ಲಿ ಗೆಳತಿ ನೀಡುವ, 'ಇಟ್ಟರೆ ಇಡಲೇಳು ಇಟ್ಟಂಗ ಇರಬೇಕು' ಎಂಬ ಸಲಹೆಯು ಒಂದು ಆದರ್ಶವಾಗಿ ಚಿತ್ರಿಸುತ್ತದೆ. ಇದನ್ನೇ ಬೇಂದ್ರೆಯವರು, 'ಬಿಸಿಲುಗುದುರೆ'ಯಲ್ಲಿ,

ಕಂಡ್ಹಾಂಗ ಕಾಣಲಿಲ್ಲ, ಅಂದ್ಹಾಂಗನ್ನಲಿಲ್ಲ
ಬಂದ್ಹಾಂಗ ಬರಲಿಲ್ಲ
ಚಂದಾನ ಒಂದೊಂದ ಅಂದೇ ನೀ ಬೇರೊಂಪ
ಅರಿವನs ಇರಲಿಲ್ಲ

– ಎನ್ನುವ ಮೂಲಕ ವಾಸ್ತವ ಬದುಕನ್ನಾಗಿ ಚಿತ್ರಿಸುತ್ತಾರೆ.

ನನ್ನ ಹರಣ
ನಿನಗ ಶರಣ
ಸಕಲ ಕಾರ್ಯ ಕಾರಣಾ

– ಎನ್ನುವ ಸಾಲುಗಳಲ್ಲಿ ಬೇಂದ್ರೆಯವರು ನಮ್ಮ ಸಂಸ್ಕೃತಿಯ ಮೂಲ ತಿರುಳಾದ ಸರ್ವಸಮರ್ಪಣಾ ಭಾವವನ್ನು ಮೆರೆದು, 'ತದಿತರ ಪಥ ಕಾಣೆ ನಾ' ಎನ್ನುವಾಗ, 'ಅನ್ಯಥಾ ಶರಣಂ ನಾಸ್ತಿ ತ್ವಂ ಏವ ಶರಣಂ ಮಮ' ಎಂಬ ದೈನ್ಯಭಾವವನ್ನು ನೆನಪಿಸುತ್ತಾರೆ.

ರಸವೆ ಜನನ
ವಿರಸ ಮರಣ
ಸಮರಸವೇ ಜೀವನ

– ಎಂದು ಬದುಕಿನ ರಹಸ್ಯವನ್ನು ಬಿಚ್ಚಿಡುತ್ತಾರೆ. ಬೇಂದ್ರೆಯವರ ಸಾಮಾಜಿಕ ಪ್ರಜ್ಞೆಯನ್ನು ಕೆಲವು ವಿಮರ್ಶಕರು ಅನುಮಾನದ ದೃಷ್ಟಿಯಿಂದ ನೋಡಿದ್ದಿದೆ. 'ಸಾಹಿತ್ಯವು ಸಮಾಜ ನಿರಪೇಕ್ಷವಲ್ಲ' ಎನ್ನುವುದು ಬೇಂದ್ರೆಯವರ ಸಿದ್ಧಾಂತಗಳಲ್ಲೊಂದಾಗಿತ್ತು ಎಂಬುದನ್ನು ನೆನಪಿಸಿಕೊಂಡಾಗ ವಿಮರ್ಶಕರ ಅನುಮಾನದಲ್ಲಿ ನಮಗೂ ಅನುಮಾನ ಮೂಡುತ್ತದೆ! ಆದರೆ ಬೇಂದ್ರೆಯವರ ಸಮಷ್ಟಿಪ್ರಜ್ಞೆ ಕೇವಲ ಒಂದು ಸಮಾಜಕ್ಕೆ ಸೀಮಿತವಾಗಿರಲಿಲ್ಲ. ಅದು ವಿಶ್ವವನ್ನೇ ವ್ಯಾಪಿಸುವಷ್ಟು ವಿಶಾಲವಾಗಿತ್ತು ಎನ್ನುವುದು ಗಮನಿಸಬೇಕಾದ ಅಂಶ.

ಯುಗದ ಕವಿ ಎಂದೇ ಹೆಸರಾದ ಕುವೆಂಪು ನವೋದಯ ಸಂದರ್ಭದ ಮತ್ತೊಬ್ಬ ಮಹಾನ್ ಕವಿ. ಅವರಂತೆ ಆಸ್ತಿಕತೆ ಮತ್ತು ನಾಸ್ತಿಕತೆಗಳನ್ನು ಸಮರಸವಾಗಿ ಕೊಂಡೊಯ್ದ ಇನ್ನೊಬ್ಬ ಕವಿ ನಮಗೆ ಸಿಕ್ಕಲಾರ. ನಮ್ಮ ಸಂಸ್ಕೃತಿ, ಪರಂಪರೆಗಳನ್ನು ತಮ್ಮ ಕಾವ್ಯದಲ್ಲಿ ಅವರು ಅನನ್ಯವೆಂಬಂತೆ ಚಿತ್ರಿಸಿದ್ದಾರೆ.

ತಮ್ಮ ಹಲವು ಕವನಗಳಲ್ಲಿ ಭಾರತೀಯ ಜೀವನ ಮೌಲ್ಯಗಳಿಗೆಲ್ಲ ಮೂಲಾಧಾರವಾಗಿರುವ, ಭಾರತೀಯ ಸಂಸ್ಕೃತಿಯ ಸಾರವಾಗಿರುವ, 'ಸತ್ಯಂ-ಶಿವಂ-ಸುಂದರಂ' ಎಂಬ ಅಂಶವನ್ನು ಸಶಕ್ತವಾಗಿ ಮೂಡಿಸಿದ್ದಾರೆ. 'ದೇವರು ರುಜು ಮಾಡಿದನು' ಎಂಬ ಕವಿತೆಯಲ್ಲಿ ರೇಖಾ ವಿನ್ಯಾಸದಲ್ಲಿ ಹಾರುವ ಬಲಾಕ ಪಕ್ಷಿಗಳ ಸಾಲಿನಲ್ಲಿ ದೇವರ ರುಜುವನ್ನು ಕಾಣುವ ಕವಿ,

ಜಗದಚ್ಚರಿಯಾದವರ ಒಪ್ಪಂದಕೆ
ಚಿರಚೇತನ ತಾನಿಹನೆಂಬುದರಿ
ಬೆಳ್ಳಕ್ಕಿಯ ಪಂಕ್ತಿಯ ಆ ನೆವದಿ
ದೇವರು ರುಜು ಮಾಡಿದನು

– ಎನ್ನುವ ಮೂಲಕ ಸನಾತನ ಭಾರತೀಯ ಸಂಸ್ಕೃತಿಯ ನಂಬಿಕೆಯಾಗಿರುವ ಭಗವಂತನ ಇರುವಿಕೆಯನ್ನು ಒಪ್ಪಿಕೊಳ್ಳುತ್ತಾರೆ.

'ಆನಂದಮಯ ಈ ಜಗಹೃದಯ' ಎನ್ನುವ ಕವನದಲ್ಲಿ ಸೂರ್ಯೋದಯ, ಚಂದ್ರೋದಯಗಳಲ್ಲಿ ದೇವರ ದಯವನ್ನು ಕಾಣುವ ಕುವೆಂಪು,

*ಉದಯದೊಳೇನ್ ? ಹೃದಯವ ಕಾಣ್*
*ಅದೆ ಅಮೃತದ ಹಣ್ಣೊ !*
*ಶಿವ ಕಾಣದೆ ಕವಿ ಕುರುಡನೊ*
*ಶಿವ ಕಾವ್ಯದ ಕಣ್ಣೊ !*

– ಎಂದು ಶಿವ ಹಾಗೂ ಸೌಂದರ್ಯವನ್ನು ಸಮೀಕರಿಸುವ ಪ್ರಯತ್ನವನ್ನು ಮಾಡುತ್ತಾರೆ.

ಸಮಾಜವಾದಿ ದೃಷ್ಟಿಕೋನವನ್ನು ಹೊಂದಿದ್ದ ಕವಿ ಡಾ॥ ದಿನಕರ ದೇಸಾಯಿಯವರ ಕವಿತೆಗಳಲ್ಲಿ ಸಾಮಾಜಿಕ ಪ್ರಜ್ಞೆಯು ಒಂದು ಸ್ಥಾಯಿಭಿತ್ತಿಯಾಗಿ ನಿಂತಿದೆ. ಡಾ॥ ದಿನಕರ ದೇಸಾಯಿಯವರ ಪ್ರತಿಯೊಂದು ನಡೆ-ನುಡಿಯೂ ಸಾಮಾಜಿಕ ದೃಷ್ಟಿಕೋನವನ್ನೇ ಹೊಂದಿದ್ದರಿಂದ ಅವರ ಕಾವ್ಯವೂ ಸಾಮಾಜಿಕ ಪ್ರಜ್ಞೆಯಿಂದ ಹೊರಗುಳಿಯುವುದು ಸಾಧ್ಯವಾಗಲಿಲ್ಲ. ಅವರ ಅನೇಕ ಕವನಗಳಲ್ಲಿ ಅವರ ಸಮಾಜವಾದಿ ಧೋರಣೆಯು ಸಹಜಾಭಿವ್ಯಕ್ತಿಯಿಂದ ತನ್ನ ಮೇಲ್ಮೆಯನ್ನು ಮೆರೆದಿದೆ.

*ಹರಿಗೆ ಎಂದು ಗುಡಿಯನೊಂದ*
*ಕಟ್ಟುತಿರುವೆಯಾ ?*
*ಹರಿಯ ಒಲುಮೆ ಪಡೆದು ಪುಣ್ಯ*
*ಗಳಿಸುತಿರುವೆಯಾ ?*
*ಹುಚ್ಚ ನೀನು ಹಳ್ಳಿಗೋಡು ;*
*ದೀನ ಜನರ ಪಾಡ ನೋಡು ;*
*ಇರಲು ಗುಡಿಲು ಇಲ್ಲವಲ್ಲ !*
*ಹೊಟ್ಟೆ ತುಂಬ ಅನ್ನವಿಲ್ಲ !*

– ಎಂಬ ಸಾಲುಗಳಲ್ಲಿ ಕವಿ ಮೊದಲು ಹರಿಗೆ ಗುಡಿಯನ್ನು ಕಟ್ಟಲು ಹೊರಟಿರುವ ಮಾನವನ ಮೂರ್ಖತನವನ್ನು ವಿಡಂಬಿಸಿ, ಮುಂದಿನ ಸಾಲುಗಳಲ್ಲಿ ಬಹುಸಂಖ್ಯಾತ ಹಳ್ಳಿಗಳಿರುವ ಭಾರತದ ಹಳ್ಳಿಗರ ಕಡುಬಡತನವನ್ನು ಕಣ್ಣಮುಂದೆ ನಿಲ್ಲಿಸುತ್ತಾರೆ. ವಾಸಮಾಡಲು ಚಿಕ್ಕ ಗುಡಿಸಲೂ ಇಲ್ಲದೆ, ಹೊಟ್ಟೆತುಂಬ ಅನ್ನಕ್ಕೂ ಗತಿಯಿಲ್ಲದೆ ಹಳ್ಳಿಯ ಜನರು ಬಡತನದ ಬೇಗೆಯಲ್ಲಿ ಬೇಯುತ್ತಿರುವಾಗ ಆಲಯವನ್ನು ಕಟ್ಟ ಹೊರಟಿರುವ ಉಳ್ಳವರ ಮೆರೆದಾಟವನ್ನು ವ್ಯಂಗ್ಯವಾಗಿ ತಿವಿಯುತ್ತಾರೆ. ವಿಶ್ವವ್ಯಾಪಿಯಾದ ಭಗವಂತನ ಮಹಿಮೆಯನ್ನು ಅರಿಯದ ಜನರ ಅಜ್ಞಾನವನ್ನು ಬಯಲುಮಾಡುತ್ತಾರೆ.

'ಉಗಿಬಂಡಿ' ಎನ್ನುವ ಕವನದಲ್ಲಿ ರೈಲಿನಲ್ಲಿರುವ ವಿವಿಧ ವರ್ಗಗಳನ್ನೇ ಸಮಾಜದ ವಿವಿಧ ವರ್ಗಗಳಿಗೆ ಹೋಲಿಸಿ, ಸಮಾಜದಲ್ಲಿರುವಂತೆ ರೈಲಿನಲ್ಲಿಯೂ ವಿವಿಧ ವರ್ಗಗಳ ನಡುವೆ ಇರುವ ಅಂತರವನ್ನು ಒಂದು ಕುತ್ತವೆಂಬುದಾಗಿ ವರ್ಣಿಸುತ್ತಾರೆ:

*ವರ್ಗಭೇದ ನಿನ್ನೊಳಗಿನ ಕುತ್ತ ;*
*ಮೊದಲ ವರ್ಗ - ಸುಖಶಾಂತಿಯ ಚಿತ್ತ,*
*ಕೊನೆಯ ವರ್ಗ ತಲೆಗೇರಿತು ಪಿತ್ತ ;*

ಉಗಿಬಂಡಿಯಲ್ಲಿ ಮೊದಲ ದರ್ಜೆಯಲ್ಲಿ ವಿಹರಿಸುವ ಜನರು ಯಾವ ಗೌಜುಗದ್ದಲವಿಲ್ಲದೆ ನೆಮ್ಮದಿಯ ಮನಸ್ಸನ್ನು ಹೊಂದಿರುವಂತೆಯೇ ಸಮಾಜದಲ್ಲಿ ಮೇಲ್ವರ್ಗದಲ್ಲಿರುವ ಉಳ್ಳವರು ನೆಮ್ಮದಿಯ ಸುಖಿ ಜೀವನ ನಡೆಸುತ್ತಿದ್ದಾರೆ. ಕೆಳಸ್ತರದಲ್ಲಿರುವ ಇಲ್ಲದವರು ರೈಲಿನ ಕೊನೆಯ ಬೋಗಿಯಲ್ಲಿರುವ ಪ್ರಯಾಣಿಕರಂತೆ ನೆಮ್ಮದಿಯಿಂದ ವಂಚಿತರಾಗಿರುವರೆಂಬುದನ್ನು ಇಲ್ಲಿ ಮನಮುಟ್ಟುವಂತೆ ಚಿತ್ರಿಸಿದ್ದಾರೆ:

*ಕೆಂಪು ಬಾವುಟವು ರೈತನದೋ ! ಈ –*
*ರಕ್ತ ಬಾವುಟವು ಕೂಲಿಯದೋ*

– ಎನ್ನುವ ಪಲ್ಲವಿಯಿಂದ ಆರಂಭವಾಗುವ 'ಕೆಂಪು ಬಾವುಟ' ಕವನದಲ್ಲಿ ದೇಸಾಯಿಯವರು ತಮ್ಮ ರೈತ ಕಾರ್ಮಿಕರ ಕುರಿತಾದ ಕಳಕಳಿಯನ್ನು ಮೆರೆದಿದ್ದಾರೆ. ಯಾವುದೇ ತರಹದ ಚಿನ್ಹವಿರದ ಸಾದಾ ಕೆಂಪು ಬಾವುಟವು ಶ್ರಮಜೀವಿ ವರ್ಗದ ಪತಾಕೆಯೆಂದು ಹೆಸರಾಗಿದ್ದು ಅದರ ಕುರಿತಾದ ಕವನವಿದೆಂದು ಸ್ಪಷ್ಟಪಡಿಸಿರುವ ದೇಸಾಯಿಯವರು,

*ಬಡವರ ಉರದಲಿ ಹಸಿವೆಯ ಸುಣ್ಣ*
*ಉರಿದೂ ಉರಿದೂ ಉರಿದೂ ಹುಣ್ಣ*
*ಹುಣ್ಣಿನ ನೆತ್ತರು ಧ್ವಜಕದು ಬಣ್ಣ !*

– ಇಲ್ಲಿ ಹಸಿವಿನ ಸುಣ್ಣದಿಂದ ಬೆಂದ ಬಡವರ ಹೊಟ್ಟೆಯಲ್ಲಿ ಹುಣ್ಣಾಗಿ ಆ ಹುಣ್ಣಿನ ನೆತ್ತರವೇ ಧ್ವಜಕ್ಕೆ ಕೆಂಬಣ್ಣವಾಗಿ ಮೆತ್ತಿಕೊಂಡಿತೆಂಬಂತೆ ವಿವರಿಸಿದ್ದಾರೆ.


**ಹುಳಗೋಳ ನಾಗಪತಿ ಹೆಗಡೆ**
ಪಿ. ಎಂ. ಹೈಸ್ಕೂಲ್, ಅಂಕೋಲಾ - ೫೮೧೩೧೪
ಉತ್ತರ ಕನ್ನಡ ಜಿಲ್ಲೆ


## ಉಗಾದಿ - ತಗಾದಿ

ಉಗಾದಿ ಬಂತು ತಗಾದಿ ತಂತು
ಉಗಾದಿ ಹಬ್ಬ ಹೊಸದಿನ,
ಹೊಸ ವರ್ಷ ಯಾರಿಗೆ ?
ಎಲ್ಲರಿಗೋ ಬರೆ ಹಣವಂತರಿಗೋ ?

ಹೊಸತನವ ಸೂಚಿಸುತ್ತ ನೀನೆಲ್ಲ ಬರುವೆ ಉಗಾದಿ... !
ಆದರೆ, ನಿನ್ನನ್ನು ಹೊಸ ರೀತಿಯಲ್ಲಿ
ಸ್ವಾಗತಿಸಲು ನಿಃಶಕ್ತನಾದ ನನ್ನ
ಪಾಲಿಗೆ ನೀನಾದೆ ತಗಾದಿ

ನಿನ್ನ ಆಗಮನವನ್ನು ಸೂಚಿಸುತ್ತಾ
ಪ್ರಕೃತಿಯೆಲ್ಲಾ ಚಿಗುರೊಡೆದಾಗ
ನನ್ನ ಹೃದಯಾಳದಲ್ಲೂ 'ಸಾಲ'ವೆಂಬ
ಚಿಂತೆ ಚಿಗುರೊಡೆದಿತ್ತು.

ನಿನ್ನ ಜೊತೆ ಜೊತೆಯಲ್ಲೆ ಒಂದೊಂದೇ
ಹೆಜ್ಜೆ ಹಾಕುತ್ತಾ ಬರುತ್ತಿರುವ ಸಾಲಗಾರ
ನಿಮ್ಮಿಬ್ಬರಲ್ಲಿ ನಾ ಆದರಿಸಲಿ
ಯಾರಿಗೆ ಮೊದಲು ?

ಅಂತೂ ನೀನೇ ಮುಂದೆ ಬಂದೆ
'ಬೇವ'ನ್ನೂ ತಂದೆ, ಹೇಗೋ ನಿನ್ನನ್ನು
ಸತ್ಕರಿಸಿ ಕಳಿಸಿದ ಮರುದಿನವೇ
ಸಾಲಗಾರನೂ ಬಂದ ಜೊತೆಗೆ 'ಸ್ಟ್ಯಾಂಪ'ನ್ನೂ ತಂದ...!

ಆದರೇನು ! ಹೋದ ಉಗಾದಿಗೆ
ಸಾಲದ ಸಮರ್ಥನೆಗಾಗಿ ಬರೆದುಕೊಟ್ಟ
ಎತ್ತಿನ ಬದಲಿಗೆ ಈ ಬಾರಿ
ಇನ್ನಷ್ಟು ಬಡ್ಡಿಯನ್ನು ಗಂಟಿನಲ್ಲಿ ಜಮಾಮಾಡಿ
ಇದ್ದಷ್ಟೂ ಹೊಲ ಬರೆದು ಕೊಡೆಂದಾಗ... ?

ಮುಂದೆ ಬರುವ ಉಗಾದಿಯಾದರೂ
ನನ್ನನ್ನು 'ಮುಕ್ತ'ಗೊಳಿಸಲಿ,
ಉಗಾದಿ ಬೇಗ ಬಾರದಿರಲಿ ಎಂದು
ಮನದಲ್ಲೇ ಬೇಡಿಕೊಳ್ಳುತ್ತಾ ಹೆಬ್ಬೆಟ್ಟೊತ್ತಿದ್ದೆ... !

ಇನ್ನಾದರೂ ನನ್ನ ಪಾಲಿಗೆ ತಗಾದಿ ಆಗದೆ
ಉಗಾದಿ - ಆಗಿ - ಬಾ - ಉಗಾದಿ ... ?


**ಅನಘ**
ದೊಡ್ಡಪ್ಪ ಎಸ್. ಸಿರವಾಳ, ಮು॥ ಅಂ॥ ಸಿರವಾಳ
ತಾಲೂಕು ಶಹಾಪೂರ, ಜಿಲ್ಲೆ ಗುಲಬರ್ಗಾ - ೫೮೫ ೨೨೩




# ಎಚ್.ಐ.ವಿ. ಹಾದಿಯಲ್ಲಿ ಹೊಸ ಬೆಳಕು



ಶಾಲೆಯಲ್ಲಿಯೇ ಮಕ್ಕಳಿಗೆ ಜೀವನ ಶಿಕ್ಷಣ ([illegible]) ದೊರಕಿದೆ. ಮಾನವ ಸಂಪನ್ಮೂಲಗಳೂ ಸೃಷ್ಟಿಯಾಗಿವೆ. ಸರ್ಕಾರದೊಂದಿಗೆ, ಸಂಘ ಸಂಸ್ಥೆಗಳು ಸಂಬಂಧಿಸಿದ ವಿವಿಧ ಇಲಾಖೆಗಳು ಕೈ ಜೋಡಿಸಿವೆ. ಮಾನವನ ಮನೋಭಾವ ಬದಲಾವಣೆಯಿಂದ ಎಚ್.ಐ.ವಿ. ತಡೆಗಟ್ಟುವ ಯತ್ನಗಳೂ ನಮ್ಮ ಮುಂದಿವೆ. ಜೊತೆಗೆ ಔಷಧಿ, ಲಸಿಕೆ, ಮನೋಪರಿವರ್ತನೆ ಮುಂತಾದ ವಿಷಯದಲ್ಲಿ ಸಂಶೋಧನೆಗಳಾಗುತ್ತಿವೆ. ಜನರಲ್ಲಿ ಎಚ್.ಐ.ವಿ. ಬಗ್ಗೆ ಜಾಗೃತಿ ಮೂಡಿಸಲು ಪ್ರತಿ ವರ್ಷ ಡಿಸೆಂಬರ್ ೧ ರಂದು 'ಏಡ್ಸ್ ದಿನಾಚರಣೆ'ಯನ್ನು ವಿಶ್ವದಾದ್ಯಂತ ಆಚರಿಸಲಾಗುತ್ತದೆ. ಸಲಿಂಗಕಾಮಿ ಗಂಡಸರಿಗೆ, ಲೈಂಗಿಕ ವೃತ್ತಿಪರರಿಗೆ ಪ್ರತ್ಯೇಕವಾಗಿ ಸಲಹೆ, ಚಿಕಿತ್ಸೆ ಮಾರ್ಗದರ್ಶನ ನೀಡುವ ಅನೇಕ ಕೇಂದ್ರಗಳನ್ನು ಸ್ವಯಂ ಸೇವಾಸಂಸ್ಥೆಗಳು ಸ್ಥಾಪಿಸಿವೆ.

ಡಾ|| ಬಿ. ಕೆ. ಮಹಾಬಲರಾಜು

'ಎಚ್.ಐ.ವಿ' ಸೋಂಕು ಹೊಸದಲ್ಲ. ಇದು ೧೯೮೧ರಲ್ಲಿ ಪ್ರಪ್ರಥಮವಾಗಿ ಅಮೆರಿಕಾದಲ್ಲಿ ಪತ್ತೆಯಾಗಿ ತದನಂತರ ಪ್ರಪಂಚದಲ್ಲೆಡೆ ಪಸರಿಸಿದೆ. ಇದು ಭಾರತಕ್ಕೆ ಬಂದಿದ್ದೇ ೧೯೮೬ರಲ್ಲಿ. ಹೀಗಾಗಿ ಈಗ ನಮ್ಮ ದೇಶದಾದ್ಯಂತ ನಮ್ಮ-ನಿಮ್ಮ ಊರುಗಳಲ್ಲಿಯೂ ಈಗ ಎಚ್.ಐ.ವಿ. ಸೋಂಕು ಹರಿದಾಡಿಕೊಂಡಿದೆ.

**ಭಯ ಬೇಡ – ಅಭಯತೆ ಇದೆ**

ಈ ಸೋಂಕು ಕಂಡುಬಂದ ಹೊಸತರಲ್ಲಿ ಕಾಯಿಲೆ ಹರಡುವ ರೀತಿಯಾಗಲೀ, ತಡೆಗಟ್ಟುವ ಉಪಾಯಗಳಾಗಲೀ, ಗುಣಪಡಿಸುವ ಔಷಧಿಗಳಾಗಲೀ, ಪ್ರತಿಬಂಧಿಸುವ ಲಸಿಕೆಯಾಗಲಿ ಗೊತ್ತಿರಲಿಲ್ಲ. ಹೀಗಾಗಿ ಕಾಯಿಲೆ ಬಂದವರು ನರಳಿ ಸಾಯುತ್ತಿದ್ದರು. ಆದುದರಿಂದ ಈ ಕಾಯಿಲೆಗೆ 'ಸಾವಿನ ರಣಕಹಳೆ', 'ಮರಣ ಮೃದಂಗ' ಎಂದೆಲ್ಲಾ ಉಪಮೇಯಗಳು ಅಂಟಿಕೊಂಡುಬಿಟ್ಟವು. ಅನೈತಿಕ ಲೈಂಗಿಕ ಸಂಪರ್ಕದಿಂದ ಈ ಕಾಯಿಲೆ ಉಂಟಾಗುತ್ತದೆ ಎಂದು ವಿಜ್ಞಾನಿಗಳು ಹೇಳಿದ್ದೇ ತಡ ಸಮಾಜದಲ್ಲಿ ಕೆಟ್ಟ ಕಳಂಕದ ನಿಂದನೆಯೂ ಅಂಟಿಕೊಂಡಿತು. ಈ ಎಲ್ಲ ಕಾರಣಗಳಿಂದ ಸಮಾಜದಲ್ಲಿ ಎಚ್.ಐ.ವಿ. ಎಂದಾಕ್ಷಣ ಜನ ಭಯದಿಂದ ಬೀಭತ್ಸಗೊಂಡು ನಡುಗುವ ಪರಿಸ್ಥಿತಿ ಉಂಟಾಯಿತು.

**ಮನ್ವಂತರದ ಕಾಲ**

ಈಗ ಪರಿಸ್ಥಿತಿ ಅದೇ ರೀತಿಯಲ್ಲಿ ಉಳಿದಿಲ್ಲ. ವಿಜ್ಞಾನಿಗಳು ಎಚ್.ಐ.ವಿ. ತಲೆಬುಡವನ್ನು ತಲಸ್ಪರ್ಶಿಯಾಗಿ ಆವಿಷ್ಕರಿಸಿದ್ದಾರೆ. ಸೋಂಕು ಹರಡುವ ಹಾದಿಗಳನ್ನೆಲ್ಲಾ ಪತ್ತೆ ಮಾಡಲಾಗಿದೆ. ಸೋಂಕೇ ತಗುಲದಂತೆ ರಕ್ಷಣೆ ಪಡೆವ ಸರಳ ಮಾರ್ಗೋಪಾಯಗಳನ್ನು ಕಂಡುಹಿಡಿಯಲಾಗಿದೆ. ತಾಯಿಗೆ ಸೋಂಕು ತಗುಲಿದ್ದರೂ, ಹೆರುವ ಮಗುವಿಗೆ ಆ ಸೋಂಕು ತಾಗದಂತೆ ತಡೆಗಟ್ಟುವ ಮದ್ದೂ ಲಭ್ಯವಿದೆ. ಸೋಂಕನ್ನು ಹದ್ದುಬಸ್ತಿನಲ್ಲಿ ಇರಿಸಿ ಬದುಕನ್ನು ಸುಖಮಯವನ್ನಾಗಿಸುವ ಔಷಧಿಗಳೂ ಇವೆ. ಸಾಮಾಜಿಕ ಕಳಂಕ ನಿವಾರಿಸುವ ನಿಟ್ಟಿನಲ್ಲೂ ಸಫಲತೆ ಉಂಟಾಗಿದೆ. ಈ ಎಲ್ಲ ಮನ್ವಂತರಗಳಿಂದ ಎಚ್.ಐ.ವಿ. ವಿಷಯದಲ್ಲಿ ಆಶಾಕಿರಣ ಮೂಡಿದೆ.

ಸೋಂಕಿನ ಬಗ್ಗೆ ಜನರಿಗೆಲ್ಲಾ ಸಲಹೆ, ಸಹಕಾರ, ಸಹಾಯ, ಪ್ರೋತ್ಸಾಹ, ಮಾರ್ಗದರ್ಶನ, ಚಿಕಿತ್ಸೆ, ದೊರಕಿಸುವ ಸಂಕಲ್ಪದಿಂದ ಸರ್ಕಾರ, ಸಂಘ ಸಂಸ್ಥೆ ಹಾಗೂ ಇಡೀ ವಿಶ್ವವೇ ಸ್ಪಂದಿಸುತ್ತಿದೆ. ಲಭ್ಯವಿರುವ ಇಂತಹ ಆವಿಷ್ಕರಣ ಹಾಗೂ ಅವಕಾಶ ಕೈಗೆಟುಕಿಸಿಕೊಂಡು ಉಪಕೃತರಾಗುವುದಷ್ಟೇ ನಮ್ಮ ಹೊಣೆಗಾರಿಕೆಯಾಗಿದೆ.

**ಎಲ್ಲಾ ಕಾಯಿಲೆಯಂತೆ ಇದೂ ಒಂದು ಕಾಯಿಲೆ**

ಸಕ್ಕರೆ ಕಾಯಿಲೆ, ಬಿ.ಪಿ.ಗಳಂತೆ ಎಚ್.ಐ.ವಿ./ಏಡ್ಸ್ ಕೂಡ ಒಂದು. ಇದನ್ನು ಅಕಟವಿಕಟವಾಗಿ, ಅನಾಮಿಕವಾಗಿ ಭಾವಿಸುವುದು ತಪ್ಪು. ಇವೆಲ್ಲವೂ ಮೂಲೋಚ್ಚಾಟನೆ ಮಾಡಲಾಗದಂತಹ ಕಾಯಿಲೆಗಳು. ಔಷಧಿ-ಆಹಾರ, ಜೀವನಶೈಲಿಯನ್ನು ಅನುರೂಪವಾಗಿ ಅಳವಡಿಸಿಕೊಂಡು ಆನಂದದಿಂದ - ಆರೋಗ್ಯದಿಂದ ಬದುಕುತ್ತಿರುವ ಬಿ.ಪಿ., ಸಕ್ಕರೆ ಕಾಯಿಲೆ ಇರುವ ಕೋಟಿ ಕೋಟಿ ಜನರು ಇರುವಂತೆಯೇ ಎಚ್.ಐ.ವಿ. ಸೋಂಕಿತರೂ ಕೂಡ ಸೂಕ್ತ ಸಲಹೆಗಳನ್ನು ಪಾಲಿಸಿ ಸುಖಮಯ ಬದುಕು ಸಾಗಿಸುತ್ತಾ ದೀರ್ಘಾಯುಷಿಗಳಾಗಬಹುದಾಗಿದೆ. ಇತರೆ ಕಾಯಿಲೆಗಳಿಗೆ ಅನೇಕಾನೇಕ ಕಾರಣಗಳು ಇರುವವಾದರು, ಎಚ್.ಐ.ವಿ. ಸೋಂಕಿಗೆ ಮಾತ್ರ ಮಾನವ ವರ್ತನೆಯೇ ಮೂಲ ಕಾರಣವಾಗಿದೆ. ಮನೋಪರಿವರ್ತನೆಯ ಮೂಲಕ ಇದನ್ನು ತಡೆಗಟ್ಟಬಹುದಾಗಿದೆ. ಭವಿಷ್ಯದ ಹಾದಿಯನ್ನು ನಿಚ್ಚಳಗೊಳಿಸಿಕೊಳ್ಳುವ ನಿಟ್ಟಿನಲ್ಲಿ ನಮ್ಮೆಲ್ಲರಿಗೂ ಎಚ್.ಐ.ವಿ. ಪರಿಜ್ಞಾನ ಅತ್ಯಗತ್ಯವಾಗಿದೆ.

**ವೈರಸ್‌ಗಳ ವರಸೆ**

ಎಚ್.ಐ.ವಿ. ವೈರಸ್ ದೇಹ ಸೇರಿದಾಗ ಉಂಟಾಗುವ ಸ್ಥಿತಿಯೇ ಎಚ್.ಐ.ವಿ. ಪಾಸಿಟಿವ್ (+) ವೈರಸ್‌ಗಳು ಅಲ್ಲಿರುವ ಪ್ರತಿ ಕಣಕಣಗಳನ್ನು ಹೊಕ್ಕು ಹಂತಹಂತವಾಗಿ ಬಾಹುಳ್ಯಗೊಳ್ಳುತ್ತಾ ದೇಹದ ರೋಗನಿರೋಧಕ ಶಕ್ತಿ ಉತ್ಪಾದಕ ಕೇಂದ್ರ ನಾಭಿಗಳಾದ, ಸಿ.ಡಿ೪ ಎಂಬ ರಕ್ತ ಕಣಗಳನ್ನು ನಾಶಪಡಿಸುತ್ತದೆ. ಇದರಿಂದಾಗಿ ರಕ್ಷಣಾ ವ್ಯವಸ್ಥೆಯೇ ಕುಸಿಯುವುದರಿಂದ, ದೇಹವನ್ನು ತರಾವರಿ ಸೋಂಕು ರೋಗಗಳು, ಕ್ಯಾನ್ಸರ್‌ನಂತಹ ರೋಗಗಳು ಆಕ್ರಮಿಸಿಕೊಳ್ಳುತ್ತವೆ. ಇಂತಹ ಹಂತಕ್ಕೆ ಏಡ್ಸ್ ಎಂದು ಕರೆಯಲಾಗುತ್ತದೆ.

ವೈರಸ್ ದೇಹ ಸೇರುವುದು, ದೇಹದ ರಕ್ಷಣಾ ವ್ಯವಸ್ಥೆಯನ್ನು ಭಗ್ನಗೊಳಿಸುವುದು, ದೇಹಕ್ಕೆ ಅನೇಕ ಕಾಯಿಲೆಗಳು ಅಂಟಿಕೊಳ್ಳುವುದು ಇವೇ ಏಡ್ಸ್ ಕಾಯಿಲೆ ಹುಟ್ಟು ಮತ್ತು ಬೆಳವಣಿಗೆಯ ಮೂರು ನಿಟ್ಟ-ನಿರ್ದಿಷ್ಟ ನಿಯಮಗಳು.

ಒಮ್ಮೆ ದೇಹ ಸೇರಿಕೊಂಡ ವೈರಸ್‌ಗಳು ಜೀವನ ಪರ್ಯಂತ ದೇಹದಲ್ಲಿಯೇ ಉಳಿದುಬಿಡುತ್ತವೆ. ಇದು ಈ ಸೋಂಕಿನ ವೈಶಿಷ್ಟ್ಯತೆ. ಹಾಗಿದ್ದಾಗ್ಯೂ ಉಂಟಾದ ಎಚ್.ಐ.ವಿ. ಸೋಂಕು ಪೂರ್ಣವಾಗಿ ಬಲಿತು ಏಡ್ಸ್‌ನ ರೂಪ ತಾಳಲು ಹತ್ತಿಪ್ಪತ್ತು ವರ್ಷಗಳೇ ಹಿಡಿಯುತ್ತವೆ. ಸೋಂಕಿಗೊಳಗಾದ ಬಹುತೇಕ ಜನರು ಮುಂದೆ ರೋಗ ಪೀಡಿತರಾಗುತ್ತಾರೆಯಾದರೂ, ಕೆಲವರು ರೋಗ ಮುಕ್ತರಾಗಿದ್ದುಕೊಂಡಿದ್ದೇ ತಮ್ಮ ಮೈಮುಸುರಿರುವ ವೈರಸ್‌ಗಳನ್ನು ಇತರರಿಗೆ ಹರಡುವ ರೋಗವಾಹಕರಾಗುತ್ತಾರೆ.

ಸೋಂಕಿಗೊಳಗಾದ ಜನರ ರಕ್ತ, ವೀರ್ಯ, ಯೋನಿ ದ್ರವದಲ್ಲಿಯಂತು ರೋಗಾಣುಗಳ ದಂಡೇ ಹೆಚ್ಚಾಗಿ ಮೇಳೈಸಿರುತ್ತವೆ. ಹೀಗಾಗಿ ವ್ಯಕ್ತಿಯ ರಕ್ತ, ವೀರ್ಯ, ಯೋನಿ ದ್ರವಗಳು ರೋಗ ಹರಡುವ ಬಹುಮುಖ್ಯ ಮೂಲಗಳಾಗಿವೆ. ಸಲಿಂಗ ಕಾಮಿಗಳಿಗಂತೂ ಎಚ್.ಐ.ವಿ. ಸೋಂಕು ತಗಲುವ ಸಾಧ್ಯತೆ ಬಹಳವಾಗಿರುತ್ತದೆ. ಗುದ ಸಂಭೋಗ, ಮುಷ್ಟಿ ಮೈಥುನಗಳಿಂದ ಸೋಂಕು ಅಂಟುವುದು ಹೆಚ್ಚು ಸುಲಭ.

**ಸಹೃದಯತೆ ಬೇಕು**

ಎಚ್.ಐ.ವಿ. ಕಾಯಿಲೆಯ ಬಗ್ಗೆ ಸಮಾಜದಲ್ಲಿ ಅನೇಕಾನೇಕ ತಪ್ಪು (ಅಪ) ಕಲ್ಪನೆಗಳು ಜನರ ಮನದಾಳದಲ್ಲಿ ನೆಲೆಗೊಂಡಿವೆ. ಇದರಿಂದಾಗಿ ಸಮಾಜ ಎಚ್.ಐ.ವಿ. ಸೋಂಕಿತರನ್ನು ದೂರವಿರಿಸುತ್ತದೆ. ವಾಸ್ತವವಾಗಿ ರೋಗಿಯ ಚರ್ಮ, ಬೆವರು, ಲಾಲಾರಸಗಳಲ್ಲಿ ಸೋಂಕಿಗೆ ಬೇಕಾಗುವಷ್ಟು ರೋಗಾಣು ಸಾಂದ್ರತೆಯೇ ಇರುವುದಿಲ್ಲ. ಆದುದರಿಂದ ರೋಗಿಯನ್ನು ಮುಟ್ಟುವುದು, ಅಪ್ಪಿಕೊಳ್ಳುವುದು, ಮುತ್ತಿಕ್ಕುವುದು, ಜೊತೆಗೆ ಓಡಾಡುವುದು, ಉಣ್ಣುವುದು. ಮುಂತಾದ ಅನ್ಯೂನತಾ ವ್ಯಕ್ತತೆಗಳಿಂದ ಎಚ್.ಐ.ವಿ. ತಗಲುವ ಸಂಭವವೇ ಇರುವುದಿಲ್ಲ. ಇದನ್ನು ತಿಳಿದುಕೊಂಡಾದರೂ ನಾವೆಲ್ಲಾ ಎಚ್ಚೆತ್ತುಕೊಂಡು ಎಚ್.ಐ.ವಿ. ಸೋಂಕಿತರನ್ನು ಸೌಹಾರ್ದವಾಗಿ ಸ್ವೀಕರಿಸುವ ಸಹೃದಯತೆ ಬೆಳೆಸಿಕೊಳ್ಳುವುದು ಅತ್ಯಗತ್ಯ. ಇದೇ ಎಚ್.ಐ.ವಿ. ಸೋಂಕಿನೊಂದಿಗೆ ಜೀವಿಸುತ್ತಿರುವ ಜನರ

ಜನರಿಗೆ ಅತ್ಯವಶ್ಯಕವಾಗಿ ಬೇಕಾಗಿರುವ ಹಿರಿಮದ್ದು. ನಾವೂ ಬದುಕಬೇಕು, ಅವರೂ ನಮ್ಮಂತೆ ಬದುಕಬೇಕು ಎಂಬ ಭಾವನೆಯು ಕೇವಲ ಅನುಕಂಪ, ಔದಾರ್ಯಗಳಾಗದೆ ಸಮಾಜದೊಡಲಾಳದಿಂದ ಮೂಡಿಬರುವಂಥದ್ದಾಗಿರಬೇಕು.

**ಎಚ್ಚರಿಕೆಯ ಅಗತ್ಯ ಎಲ್ಲೆಲ್ಲಿ?**

ಎಚ್.ಐ.ವಿ. ಪ್ರಮುಖವಾಗಿ ತಗುಲುವುದು ಲೈಂಗಿಕ ಸಂಪರ್ಕದಿಂದ. ಎಚ್.ಐ.ವಿ. ಸೋಂಕಿತರು ಮೊದಮೊದಲಿಗೆ ಎಲ್ಲರಂತೆ ಆರೋಗ್ಯಪೂರ್ಣವಾಗಿ ಕಂಗೊಳಿಸುತ್ತಿರುತ್ತಾರೆ. ಇವರಿಗೂ ತಮ್ಮಲ್ಲಿರುವ ಸೋಂಕಿನ ಬಗ್ಗೆ ತಿಳಿದೇ ಇರುವುದಿಲ್ಲ. ರಕ್ತಪರೀಕ್ಷೆಯಾಗದ ಹೊರತು ಎಚ್.ಐ.ವಿ. ಇರುವುದು ಗೊತ್ತಾಗುವುದಿಲ್ಲ. ಆದರೆ ವೈರಸ್‌ಗಳ ರಾಶಿ ರಾಶಿಯೇ ಅವರ ದೇಹದಲ್ಲಿ ಅಗೋಚರವಾಗಿ ಹುದುಗಿರುತ್ತದೆ. ಹೀಗಾಗಿ ಮುಕ್ತ ಲೈಂಗಿಕ ಕ್ರಿಯೆ ಎಚ್.ಐ.ವಿ. ಸೋಂಕಿನ ರಹದಾರಿಯಾಗುತ್ತದೆ. ಈ ಸೋಂಕಿನಿಂದ ಪಾರಾಗುವ ಉತ್ಕೃಷ್ಟ ವಿವೇಕದ ಹಾದಿಯೆಂದರೆ, ಮುಕ್ತ ಲೈಂಗಿಕತೆಯಿಂದ ಮುಕ್ತವಾಗಿರುವುದು ಮತ್ತು ಅಪರಿಚಿತರೊಂದಿಗೆ, ಸಂಶಯಾತ್ಮಕರೊಂದಿಗೆ ಲೈಂಗಿಕತೆ ನಡೆಸುವಾಗಲೆಲ್ಲಾ ಎಡೆಬಿಡದೆ ಎಚ್ಚರಿಕೆಯಿಂದ ನಿರೋಧ್ (ಕಾಂಡೋಮ್) ಬಳಸುವುದು. ಎಚ್.ಐ.ವಿ. ತಡೆಗೆ ನಿರೋಧ್ ರಾಮಬಾಣ. ಬಳಸುವವರಿಗೂ, ಸಂಗಾತಿಗೂ ಇದು ಸಂಪೂರ್ಣ ರಕ್ಷಣೆ ಒದಗಿಸುತ್ತದೆ. ಎಚ್.ಐ.ವಿ. ಅಂಟುವ ಇನ್ನೊಂದು ಮಾರ್ಗ ರಕ್ತ. ಆದುದರಿಂದ ರಕ್ತ ಸ್ವೀಕರಿಸುವಾಗ ಇಂಜೆಕ್ಶನ್ ಹಾಕಿಸಿಕೊಳ್ಳುವಾಗ ಅಪಾರ ಎಚ್ಚರಿಕೆ ಅಗತ್ಯ. ಸೋಂಕಿಗೊಳಗಾದ ಗರ್ಭಿಣಿಯ ರಕ್ತದ ಮೂಲಕ ಜನಿಸುವ ಮಗುವಿಗೂ ತಾಯಿಯ ಸೋಂಕು ತಗುಲುವುದುಂಟು. ಈ ರೀತಿ ಶಿಶು ಎಚ್.ಐ.ವಿ. ಪೀಡಿತವಾಗುವುದನ್ನು ತಪ್ಪಿಸುವ ಔಷಧಿಗಳೂ ಇವೆ. ಒಟ್ಟಿನಲ್ಲಿ ಸೋಂಕಿನ ಅಪಾಯಗಳು ಎಲ್ಲೆಲ್ಲಿ ಇವೆ, ಅವುಗಳನ್ನು ತಡೆಗಟ್ಟುವ ಉಪಾಯಗಳು ಏನೇನು, ಇವುಗಳ ಬಗ್ಗೆ ಮಾಹಿತಿ ಎಲ್ಲೆಲ್ಲಿ ದೊರೆಯುತ್ತದೆ, ಎಲ್ಲಿ ಸಿಗುತ್ತವೆ ಎಂಬುದನ್ನು ನಾವು ಮನವರಿಕೆ ಮಾಡಿಕೊಳ್ಳಬೇಕಿದೆ. ಸೋಂಕಿನ ಪರಿಹಾರಕ್ಕೆ ಅರಿವೇ ಮದ್ದು, ಸಮಸ್ಯೆಯ ಪರಿಹಾರಕ್ಕೆ ಮನಸ್ಸೇ ಮಹಾಮದ್ದು. ವೈದ್ಯಕೀಯ ಕಾರಣಗಳಲ್ಲದೇ ಸಾಮಾಜಿಕ ಕಾರಣಗಳಾದ ಬಡತನ, ಅಜ್ಞಾನ, ನಿರುದ್ಯೋಗ, ಉದ್ಯೋಗಕ್ಕಾಗಿ ಕುಟುಂಬ ಬಿಟ್ಟು ಊರೂರು ಅಲೆಯುವುದು, ಮದ್ಯಪಾನ, ವಾಸ ಪರಿಸರ, ಇತ್ಯಾದಿಗಳೂ ಸೋಂಕಿಗೆ ಕಾರಣವಾಗಬಲ್ಲವು. ಒಟ್ಟಿನಲ್ಲಿ ಎಚ್.ಐ.ವಿ. ಲೈಂಗಿಕ ಸ್ವೇಚ್ಛಾಚಾರಿಗಳಿಗಷ್ಟೇ ಸೀಮಿತವಾಗಿರದೆ, ಸಮಾಜದ ಎಲ್ಲ ಜನರಿಗೂ ತಗಲುವ ಸಾಧ್ಯತೆ ಇದೆ. ಹೀಗಾಗಿ ಎಚ್.ಐ.ವಿ. ವ್ಯಕ್ತಿಯೊಬ್ಬನ ವೈಯಕ್ತಿಕ ಸಮಸ್ಯೆ ಅಷ್ಟೇ ಅಲ್ಲ, ಇಡೀ ಸಮಾಜದ ಸಮಸ್ಯೆ ಎಂದು ಪರಿಗಣಿಸಬೇಕಾಗುತ್ತದೆ.

**ಮನಬಿಚ್ಚಿ ಮಾತನಾಡಿ**

ಎಚ್.ಐ.ವಿ. ಸೋಂಕಿತರು ಹಾಗೂ ಸೋಂಕು ತಗುಲಿದೆ ಎಂದು ಸಂಶಯಕ್ಕೊಳಗಾದವರು ತನಗೆ ಈ ಕಾಯಿಲೆ ಬಂದುಬಿಡ್ತೇ ಎಂದು ಗೋಳಾಡುತ್ತಾರೆ. ಕಾಯಿಲೆಯನ್ನು ಮುಚ್ಚಿಡಲು ಪ್ರಯತ್ನಿಸುತ್ತಾರೆ. ಆತ್ಮಹತ್ಯೆಯ ಬಗ್ಗೆಯೂ ಯೋಚಿಸುತ್ತಿರುತ್ತಾರೆ. ಹಾಗೆ ನೋಡಿದರೆ, ಎಚ್.ಐ.ವಿ. ಪೀಡಿತರು ಏಕಾಂಗಿಯಾಗಿ ಮನನೊಂದುಕೊಳ್ಳುವ ಅಗತ್ಯವಿಲ್ಲ. ಬದಲಿಗೆ ಸಮಾಜದಲ್ಲಿ ದೊರೆವ ಸಾಮಾಜಿಕ, ವೈದ್ಯಕೀಯ ಸವಲತ್ತುಗಳ ಬೆಂಬಲದಿಂದ ಧೈರ್ಯದಿಂದ ತಲೆಯೆತ್ತಿ ಬದುಕಿನಲ್ಲಿ ಹೂವು ಅರಳಿಸಬಹುದು. ಮೌನಿಯಾಗಿ ಉಳಿಯದೆ ಎಲ್ಲರೊಂದಿಗೆ ಬೆರೆತು ಮುಕ್ತವಾಗಿ ಮಾತನಾಡಬೇಕು, ಮನಃಸ್ಥೈರ್ಯ ಬೆಳೆಸಿಕೊಳ್ಳಬೇಕು.

ಹಾಗೆ ನೋಡಿದರೆ ಎಚ್.ಐ.ವಿ. ಸೋಂಕಿತರು ಎಂದೂ ಏಕಾಂಗಿಯಲ್ಲ. ಇವರ ಸಮಸ್ಥಿತಿಯವರು ವಿಶ್ವದಲ್ಲಿ ೪೦ ಮಿಲಿಯನ್‌ಗೂ ಹೆಚ್ಚು ಜನರಿದ್ದಾರೆ. ಭಾರತದಲ್ಲಿಯೇ ೫ ಮಿಲಿಯನ್‌ಗಿಂತ ಹೆಚ್ಚು ಜನರಿದ್ದಾರೆ. ಜೊತೆಗೆ ಸಮಾಜದ, ಸರಕಾರದ, ಸಂಘ-ಸಂಸ್ಥೆಗಳ ಬೆಂಬಲವೂ ಇದೆ.

**ಸಹಾಯ ಹಸ್ತ**

ಸರಕಾರವು ೧೯೮೭ರಲ್ಲಿಯೇ ರಾಷ್ಟ್ರೀಯ ಏಡ್ಸ್ ನಿಯಂತ್ರಣ (ಎನ್.ಎ.ಸಿ.ಪಿ) ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ. ಆರೋಗ್ಯ ಮಂತ್ರಾಲಯವು ರಾಷ್ಟ್ರೀಯ ಏಡ್ಸ್ ನಿಯಂತ್ರಣ ಸಂಸ್ಥೆ (ನ್ಯಾಕೋ) ಹುಟ್ಟುಹಾಕಿ ಹತ್ತಾರು ಹಾದಿ ಕ್ರಮಿಸಿ ಏಡ್ಸ್ ಪೀಡಿತರಿಗೆ ವರದಾನವಾಗಿದೆ. ಕೆಂಪು ಟೇಪಿನ ಲಾಂಛನ ಹೊತ್ತ ಇಂತಹ ಕಾರ್ಯಕ್ರಮದಡಿ ದೊರೆವ ಸೌಲಭ್ಯಗಳ ಬಗ್ಗೆ ಅರಿತುಕೊಳ್ಳುವುದು ಎಲ್ಲರಿಗೂ ಅನಿವಾರ್ಯವಾಗಿದೆ. ದೇಶದ ಉದ್ದಗಲಕ್ಕೂ ಸರಕಾರಿ ಆಸ್ಪತ್ರೆಗಳಲ್ಲಿ ಉಚಿತವಾಗಿ ಲಭ್ಯವಿರುವ ಸೌಲಭ್ಯಗಳಾವುವು ಎಂದು ನೋಡೋಣ. ಈಗಾಗಲೇ ಇಂತಹ ಪ್ರಯತ್ನಗಳಿಂದ ಸೋಂಕಿನ ಗತಿಯಲ್ಲಿ ಇಳಿಮುಖವಾಗುತ್ತಿರುವ ಸೂಚನೆ ದೊರೆತಿದೆ. ಭಾರತದಲ್ಲಿ ೫೦ ಲಕ್ಷದಷ್ಟಿದ್ದ ಸೋಂಕು ಈಗ ೨೭ ಲಕ್ಷಕ್ಕೆ ಇಳಿದಿರುವುದು ಸಫಲತೆಯ ಸೂಚನೆಯಾಗಿದೆ.

**ವಾಲಂಟರಿ ಕೌನ್ಸಿಲಿಂಗ್ ಅಂಡ್ ಟೆಸ್ಟಿಂಗ್ (ವಿ.ಸಿ.ಟಿ.ಸಿ)**

ಮನೋವರ್ತನೆಯೊಂದಿಗೆ ತಳುಕು ಹಾಕಿಕೊಂಡಿರುವ ಎಚ್.ಐ.ವಿ. ಸಮಸ್ಯೆಗಳಿಗೆ ಆಧುನಿಕ ಮನೋವೈಜ್ಞಾನಿಕ ತಂತ್ರ ಅನುಸರಿಸಿ, ಸ್ವಯಂ ಇಚ್ಛೆಯಿಂದ ಆಗಮಿಸುವವರಿಗೆ ಮಾರ್ಗದರ್ಶನ ನೀಡುವ ಉದ್ದೇಶದಿಂದ ವಿ.ಸಿ.ಟಿ.ಸಿ. ಕೇಂದ್ರಗಳು ಉದ್ಭವಿಸಿವೆ. ಯಾರಾದರೂ ಸ್ವಯಂ ಪ್ರೇರಿತರಾಗಿ ಇಂತಹ ಕೇಂದ್ರಗಳ ಪ್ರಯೋಜನ ಪಡೆಯಬಹುದು.

ಕೆಲವರಿಗೆ ಎಚ್.ಐ.ವಿ.ಯಿಂದ ಉಂಟಾಗಿರುವ, ಉಂಟಾಗಬಹುದಾದ ಅನುಮಾನಗಳಿರುತ್ತವೆ. ಜೊತೆಗೆ ಎಚ್.ಐ.ವಿ. ಬಗ್ಗೆ ಗೊಂದಲ ನಿವಾರಣೆ ಹಾಗೂ ಮಾರ್ಗದರ್ಶನ ಬೇಕಾಗಿರುತ್ತದೆ. ಇದೊಂದು ಬಹು ಸೂಕ್ಷ್ಮವಾದ ಗುರುತರವಾದ, ಗುಪ್ತವಾದ ಸಂಗತಿ. ಇಂತಹ ಸಂದರ್ಭಗಳಲ್ಲಿ ಎಚ್.ಐ.ವಿ. ಇರುವ ಜನರನ್ನು ಸಜ್ಜುಗೊಳಿಸುವುದು, ಅವರಲ್ಲಿ ಆತ್ಮಸ್ಥೈರ್ಯ ತುಂಬುವುದು, ಮಾನಸಿಕ ಸ್ಥೈರ್ಯ ನೀಡುವುದು ತುಂಬಾ ಅಗತ್ಯ. ಇದನ್ನೆಲ್ಲಾ ದೊರಕಿಸಿಕೊಡಲು ಈ ಕೇಂದ್ರಗಳು ಸ್ವಯಂಪ್ರೇರಿತ ರಕ್ತ ಪರೀಕ್ಷೆಗೆ ಮುನ್ನಾ ಸಮಾಲೋಚನೆ ಮಾಡಿ ವ್ಯಕ್ತಿಯನ್ನು ಮಾನಸಿಕವಾಗಿ ರಕ್ತಪರೀಕ್ಷೆಗೆ ಸಿದ್ಧಗೊಳಿಸುತ್ತವೆ. ರಕ್ತ ಪರೀಕ್ಷೆಯ ಫಲಿತಾಂಶ ನೀಡಬಹುದಾದ 'ಶಾಕ್' ನಿವಾರಣೆಗೂ ಸಹಾನುಭೂತಿಯಿಂದ ಸಾಂತ್ವನ, ಸಲಹೆಗಳನ್ನು ನೀಡುತ್ತವೆ. ಜೊತೆಗೆ ಮುಂದಿನ ಹಾದಿಯ ಬಗ್ಗೆ ಮಾರ್ಗದರ್ಶನ ತೋರಿಸಿಕೊಡುತ್ತವೆ. ಇಂತಹ ಕೇಂದ್ರಗಳೂ ಎಲ್ಲೆಲ್ಲೂ ಇರುತ್ತವೆ ಮತ್ತು ಇಲ್ಲಿ ಶತಾಂಶ ಗೌಪ್ಯತೆಯನ್ನು ಕಾಪಾಡಲಾಗುತ್ತದೆ.

**ತಾಯಿಯಿಂದ ಮಗುವಿಗೆ ಸೋಂಕು ತಗಲದಂತೆ ತಡೆಗಟ್ಟುವುದು**

ಪ್ರತಿ ನೂರು ಗರ್ಭಿಣಿಯರಲ್ಲಿ ಒಬ್ಬರಿಗೆ ಎಚ್.ಐ.ವಿ. ಸೋಂಕು ತಗುಲಿರುತ್ತದೆ ಎಂಬುದು ಸಂಶೋಧನೆಗಳಿಂದ ಗೊತ್ತಾಗಿದೆ. ಸೋಂಕಿತ ತಾಯಿಯಿಂದ ಮಗುವಿಗೂ ಸೋಂಕು ರವಾನೆಯಾಗುವ ಸಾಧ್ಯತೆ ಶೇಕಡಾ ೪೦ಕ್ಕಿಂತ ಹೆಚ್ಚು. ಸೂಕ್ತ ಸಮಯದಲ್ಲಿ ಗರ್ಭಿಣಿಯು ಸೋಂಕು ಪರಿಹಾರಕ ಮಾತ್ರೆಗಳನ್ನು ಸೇವಿಸಿದರೆ, ಅವಳಲ್ಲಿನ ಸೋಂಕು ಮಗುವಿಗೆ ಅಂಟುವ ಸಾಧ್ಯತೆ ಬಹಳ ಕಡಿಮೆಯಾಗುತ್ತದೆ. ಹೀಗಾಗಿ ಗರ್ಭಿಣಿ ಮಹಿಳೆಯರಿಗೆಂದೇ ರೂಪುಗೊಂಡ ಕಾರ್ಯಕ್ರಮದಡಿಯಲ್ಲಿ ಹಲವಾರು ಪಿ.ಎಂ.ಟಿ.ಸಿ.ಟಿ ಕೇಂದ್ರಗಳು ಕಾರ್ಯನಿರ್ವಹಿಸುತ್ತಿವೆ. ಇಲ್ಲಿ ತಾಯಿ ಗರ್ಭಿಣಿಯಾಗಿರುವಾಗ, ಪ್ರಸವದ ಸಮಯದಲ್ಲಿ ಮತ್ತು ಮಗುವಿಗೆ ಹಾಲು ಕುಡಿಸುವಾಗ ಎಚ್.ಐ.ವಿ. ಸೋಂಕು ತಗುಲದಂತೆ ಪ್ರತಿಬಂಧಿಸುವ ಮಾರ್ಗೋಪಾಯಗಳ ಸೇವಾ ಸೌಲಭ್ಯ ಲಭಿಸುತ್ತದೆ ಮತ್ತು ಮಗುವನ್ನು ಪಡೆಯಬೇಕೇ, ಬೇಡವೇ ಎಂಬ ಪ್ರಶ್ನೆಗೆ ಸೂಕ್ತ ಉತ್ತರ ಸಿಗುವಂತೆ ಹಿತವಚನ ಹೇಳಲಾಗುತ್ತದೆ.

**ಕಿಸೆಯೊಳಗಿನ ಕಾಗದ**

**ನನ್ನ ಕಿಸೆಯೊಳಗಿನ ನನ್ನ ಕಾಗದ**<br>
**ಸುಪ್ತ ಜ್ಞಾನದ ನದಿ ಸರೋವರ**<br>
**ಅವಿನಾಭಾವದ ಮಹಾಪೂರ**<br>
**ಶಬ್ದ ಸಂಕ್ಷಿಪ್ತ ಸಾಗರ**<br>
**ಸ್ಫೂರ್ತಿ ಸೆಲೆಯ ಉಗಮಸ್ಥಾನ**

**ಅರ್ಜುನ ಕೋರಟಕರ 'ಭಾವಜ್ಞ'**<br>
ಶ್ರೀ ರಾಘವೇಂದ್ರ ಬೋರ್ಡಿಂಗ್<br>
ಜಮಖಂಡಿ - ೫೮೭ ೩೦೧

**ಔಷಧಿ ಚಿಕಿತ್ಸೆ**

ಆರೋಗ್ಯ ಕೇಂದ್ರಗಳಲ್ಲಿ ಎಚ್.ಐ.ವಿ. ಸೋಂಕಿತರಿಗೆ ಉಚಿತವಾಗಿ ಔಷಧಿ ಆಂಟಿ ರೆಟ್ರೋವೈರಲ್ ಥೆರಪಿ (ಎ.ಆರ್.ಟಿ) ವಿವರಿಸುತ್ತಾರೆ. ಉತ್ತಮ ಗುಣಮಟ್ಟದ ಈ ಔಷಧಿಗಳು ತೊಂದರೆಗಳು ಉಲ್ಬಣಗೊಳ್ಳುವುದನ್ನು ತಡೆಗಟ್ಟುವ ಮೂಲಕ ಮುಂದೆ ಒದಗಬಹುದಾದ ಪ್ರಾಣಾಂತಿಕ ಅನಾರೋಗ್ಯದ ಅಪಾಯಗಳನ್ನೂ ನಿವಾರಿಸಿ ರೋಗಿಯ ಜೀವಿತಾವಧಿಯನ್ನೂ ಜೀವನ ಗುಣಮಟ್ಟವನ್ನೂ ಸುಧಾರಿಸುತ್ತವೆ.

**ಕ್ಷಯ ಮತ್ತು ಲೈಂಗಿಕ ರೋಗಗಳು**

ಎಚ್.ಐ.ವಿ. ಸೋಂಕಿತರಿಗೆ ಕ್ಷಯ ತಗಲುತ್ತದೆ. ಹೀಗೆ ತಗುಲಿದ ಕ್ಷಯ ವಿಪರೀತ ಉಗ್ರರೂಪ ತಳೆಯುವ ಸಾಧ್ಯತೆಗಳಿವೆ. ಸಾಮಾನ್ಯವಾಗಿ ಕ್ಷಯ ರೋಗಕ್ಕೆ ಆಧುನಿಕ ಔಷಧಿ ನೀಡುವ ಚಿಕಿತ್ಸಾ ಕೇಂದ್ರಗಳಲ್ಲಿ (ಆರ್.ಎನ್.ಟಿ.ಸಿ.ಟಿ) ಎಚ್.ಐ.ವಿ. ಸೋಂಕಿತರಿಗೆ ಅಂಟಿರುವ ಕ್ಷಯವನ್ನು ಗುಣಪಡಿಸುವ ವಿಶೇಷ ವ್ಯವಸ್ಥೆ ಇರುತ್ತದೆ.

ಲೈಂಗಿಕ ರೋಗಗಳು ಎಚ್.ಐ.ವಿ. ಸೋಂಕನ್ನು

ರತ್ನಗಂಬಳಿ ಹಾಸಿ ಆಹ್ವಾನಿಸುವ ದ್ವಾರಗಳು ಎಂದು ಕರೆಯಬಹುದು. ಹೀಗಾಗಿ ಲೈಂಗಿಕ ರೋಗಗಳಿಗೆ ಚಿಕಿತ್ಸೆ ನೀಡುವ, ನಿವಾರಣೆಗೆ ಮಾರ್ಗ ತೋರುವ ಕೇಂದ್ರಗಳ ಸೌಲಭ್ಯಗಳನ್ನೂ ಮಾಡಲಾಗಿದೆ. ಮೂಲದಲ್ಲೇ ಎಚ್.ಐ.ವಿ. ಸೋಂಕನ್ನು ಹತ್ತಿಕ್ಕುವ ಸಲುವಾಗಿ ಇಂತಹ ಕಾರ್ಯಕ್ರಮಗಳನ್ನು ಯೋಜಿಸಲಾಗಿದೆ. ಲೈಂಗಿಕ ರೋಗವನ್ನು ನಾಚಿಕೆಯಿಂದ ಮುಚ್ಚಿಡದೆ ಚಿಕಿತ್ಸೆಗೆ ಒಳಗಾಗುವುದು ಒಳ್ಳೆಯ ಕ್ರಮ.

**ಕಳಂಕ ನಿವಾರಣೆ**

ಎಚ್.ಐ.ವಿ. ಸೋಂಕಿಗೆ ಲಗತ್ತಾಗಿರುವ ಕಳಂಕವನ್ನು ನಿವಾರಿಸಲು ಶತಪ್ರಯತ್ನಗಳು ನಡೆದಿವೆ. ಆ ಜನರಲ್ಲಿ ಎಚ್.ಐ.ವಿ. ಬಗ್ಗೆ ಮೂಡಿರುವ ವಕ್ರನೋಟವನ್ನು ತಿದ್ದುವ ಯತ್ನಗಳಿಂದ ಸಮಾಜದಲ್ಲಿ ಸಾಕಷ್ಟು ಪರಿವರ್ತನೆಯಾಗಿದೆ. ಇಂತಹ ಬದಲಾವಣೆಯಿಂದ ಜನರಲ್ಲಿ ಎಚ್.ಐ.ವಿ. ಬಗ್ಗೆ ಮುಕ್ತವಾಗಿ ಮಾತನಾಡಲು ಇರುವ ಅಂಜಿಕೆಗಳು ತೊಲಗುತ್ತವೆ.

**ಮಾನವ ಹಕ್ಕುಗಳ ರಕ್ಷಣೆ**

ಎಚ್.ಐ.ವಿ. ಪೀಡಿತರೂ ಮಾನವರೆ, ಇವರ ಹಕ್ಕಿನ ರಕ್ಷಣೆಗಾಗಿ ಸರಕಾರ ಕಂಕಣಬದ್ಧವಾಗಿ ನಿಂತಿದೆ. ವ್ಯಕ್ತಿಯ ವಯಸ್ಸು, ಲಿಂಗ, ಆರ್ಥಿಕತೆ, ವಿದ್ಯಾಮಟ್ಟ ಎಲ್ಲವನ್ನೂ ಒತ್ತಟ್ಟಿಗಿರಿಸಿ, ಎಲ್ಲರನ್ನೂ ಏಕಭಾವದಿಂದ ನೋಡುವ, ತಾರತಮ್ಯವಿಲ್ಲದೆ ಚಿಕಿತ್ಸೆ, ನೌಕರಿ, ವಿದ್ಯಾಭ್ಯಾಸ, ಸಾಮಾಜಿಕ ಜೀವನ, ವ್ಯಕ್ತಿಗತ ಗೌಪ್ಯತೆಯ ರಕ್ಷಣೆ ಇತ್ಯಾದಿ ಎಲ್ಲ ವಿಷಯಗಳ ಮೇಲೂ ಸರಕಾರದ ಕಣ್ಗಾವಲಿನ ರಕ್ಷಣೆ ಇದೆ.

**ಸಹಾಯಹಸ್ತಗಳು ನೂರಾರು**

**ಇತರೆ ಸವಲತ್ತುಗಳು :**

ಎಚ್.ಐ.ವಿ. ಸೋಂಕನ್ನು ಹತ್ತಿಕ್ಕುವ ನಿಟ್ಟಿನಲ್ಲಿ ಎಚ್.ಐ.ವಿ. ಬಗ್ಗೆ ವ್ಯಾಪಕ ಆಂದೋಲನಗಳು ಆವಿರ್ಭವಿಸಿವೆ. ಮಾಧ್ಯಮಗಳ ಮೂಲಕ, ಪ್ರಕಟಣೆಗಳ ಮೂಲಕ, ಮಾತುಕತೆಯ ಮೂಲಕ ಜನರಲ್ಲಿ ಸೋಂಕಿನ ಸಮಗ್ರ ಅರಿವು ಮೂಡಿಸುವ ಪ್ರಯತ್ನಗಳು ನಡೆದಿವೆ. ಸೋಂಕು ತಗಲಿಸಿಕೊಳ್ಳದಂತೆ ತಿಳುವಳಿಕೆ ನೀಡಲಾಗುತ್ತಿದೆ. ನಿರೋಧ್‌ಅನ್ನು ವ್ಯಾಪಕವಾಗಿ ಲಭಿಸುವಂತೆ ಮಾಡಿರುವುದು ಜೊತೆಗೆ ಅದರ ಸಮರ್ಥ ಬಳಕೆಗೆ ತಿಳುವಳಿಕೆ ಮತ್ತು ಉತ್ತೇಜನ ನೀಡಲಾಗುತ್ತಿದೆ. ಸುರಕ್ಷಿತ ರಕ್ತ ಪೂರೈಕೆಗೆ ಕಟ್ಟೆಚ್ಚರ ವಹಿಸಲಾಗಿದೆ. ಕುಟುಂಬ ಹಾಗೂ ಲೈಂಗಿಕ ಜೀವನದ ಬಗ್ಗೆ ವಿವಾಹಪೂರ್ವ ಸಮಾಲೋಚನೆಗಳಿಂದ ಸುರಕ್ಷಿತ ಮಾರ್ಗದರ್ಶನವನ್ನು ಒದಗಿಸಲಾಗುತ್ತಿದೆ. ಎಚ್.ಐ.ವಿ. ಸೋಂಕಿನ ಅಪಾಯವಿರುವ ಜನರಿಗೆ ಆದ್ಯತೆ ನೀಡಿ ವಿಶೇಷ ಗಮನ ಹರಿಸಲಾಗುತ್ತದೆ. ವಿಕೇಂದ್ರೀಕರಣ ಆಡಳಿತದಿಂದ ಎಲ್ಲಾ ರೀತಿಯ ಪ್ರಯೋಜನಗಳು ಎಲ್ಲೆಡೆಯೂ ಲಭ್ಯವಾಗುವುದು ಸಾಧ್ಯವಾಗಿದೆ. ಶಾಲೆಯಲ್ಲಿಯೇ ಮಕ್ಕಳಿಗೆ ಜೀವನ ಶಿಕ್ಷಣ (ಬಿಚ್ಚುಮಾತು) ದೊರೆತಿದೆ. ಮಾನವ ಸಂಪನ್ಮೂಲಗಳೂ ಸೃಷ್ಟಿಯಾಗಿವೆ. ಸರಕಾರದೊಂದಿಗೆ, ಸಂಘ ಸಂಸ್ಥೆಗಳು, ಸಂಬಂಧಿಸಿದ ವಿವಿಧ ಇಲಾಖೆಗಳು ಕೈ ಜೋಡಿಸಿವೆ. ಮಾನವನ ಮನೋಭಾವ ಬದಲಾವಣೆಯಿಂದ ಎಚ್.ಐ.ವಿ. ತಡೆಗಟ್ಟುವ ಯತ್ನಗಳೂ ನಮ್ಮ ಮುಂದಿವೆ. ಜೊತೆಗೆ ಔಷಧಿ, ಲಸಿಕೆ, ಮನೋಪರಿವರ್ತನೆ ಮುಂತಾದ ವಿಷಯದಲ್ಲಿ ಸಂಶೋಧನೆಗಳಾಗುತ್ತಿವೆ. ಜನರಲ್ಲಿ ಎಚ್.ಐ.ವಿ. ಬಗ್ಗೆ ಜಾಗೃತಿ ಮೂಡಿಸಲು ಪ್ರತಿ ವರ್ಷ ಡಿಸೆಂಬರ್ ೧ರಂದು 'ಏಡ್ಸ್ ದಿನಾಚರಣೆ'ಯನ್ನು ವಿಶ್ವದಾದ್ಯಂತ ಆಚರಿಸಲಾಗುತ್ತದೆ. ಸಲಿಂಗಕಾಮಿ ಗಂಡಸರಿಗೆ, ಲೈಂಗಿಕ ವೃತ್ತಿಪರರಿಗೆ ಪ್ರತ್ಯೇಕವಾಗಿ ಸಲಹೆ, ಚಿಕಿತ್ಸೆ, ಮಾರ್ಗದರ್ಶನ ನೀಡುವ ಅನೇಕ ಕೇಂದ್ರಗಳನ್ನು ಸ್ವಯಂ ಸೇವಾಸಂಸ್ಥೆಗಳು ಸ್ಥಾಪಿಸಿವೆ.

ಈ ಎಲ್ಲಾ ಬೆಳವಣಿಗೆಗಳ ಸದ್ವಿನಿಯೋಗ ಮಾಡಿಕೊಳ್ಳುವುದು ನಮ್ಮೆಲ್ಲರ ಜವಾಬ್ದಾರಿ. ಈ ಹೊಣೆಗಾರಿಕೆಗೆ ನಾವೆಲ್ಲರೂ ಅದರಲ್ಲೂ ಮುಖ್ಯವಾಗಿ ಯುವ ಜನಾಂಗ ಬದ್ಧರಾದರೆ ಏಡ್ಸ್ ಗತಕಾಲದ ಕಥೆಯಾಗಿಬಿಡುವ ದಿನಗಳು ದೂರವಿಲ್ಲ. ಎಚ್.ಐ.ವಿ. ನಿವಾರಣೆಯಲ್ಲಿ ಮಹಿಳೆಯರ ಜವಾಬ್ದಾರಿ ಅತಿ ಮುಖ್ಯ. ಆದುದರಿಂದ ಮಹಿಳೆಯರು ಈ ಕಾರ್ಯಕ್ರಮದಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಳ್ಳುವುದು ವಿಹಿತ.

**ಎಚ್.ಐ.ವಿ.ಯಿಂದ ಬದುಕುತ್ತಿರುವವರಿಗೆ ಹೊಸ ಯೋಜನೆಗಳು**

* ಎಚ್.ಐ.ವಿ. ಪಾಸಿಟಿವ್ ಇರುವವರಿಗೆ ಅನುಕೂಲವಾಗಲೆಂದು ವೆಬ್‌ಸೈಟ್ ಹೊರಡಿಸಲಾಗಿದೆ. ಎಲ್ಲಾ ರಾಜ್ಯಗಳಲ್ಲಿಯೂ ಈ ಸೌಲಭ್ಯವಿದೆ. ಕರ್ನಾಟಕದ ವೆಬ್ ವಿಳಾಸ (KNP+)
* ಔಷಧಿ, ಚಿಕಿತ್ಸೆ ಪಡೆಯುತ್ತಿರುವ ಎಲ್ಲರಿಗೂ ಬಿ.ಪಿ.ಎಲ್. ಕಾರ್ಡ್ ನೀಡಲು ಸರಕಾರ ಆಯೋಜಿಸುತ್ತಿದೆ.
* ಸ್ಟಾರ್ ಮತ್ತಿತರ ಜೀವವಿಮಾ ಕಂಪನಿಗಳು ಎಚ್.ಐ.ವಿ. ಪಾಸಿಟಿವ್ ಇರುವವರಿಗೆ ಜೀವವಿಮೆ ನೀಡಲು ಮುಂದಾಗಿವೆ, ಸರಕಾರದೊಂದಿಗೆ ಸಮಾಲೋಚಿಸುತ್ತಿವೆ.
* ಎಚ್.ಐ.ವಿ./ ಏಡ್ಸ್ ಬಗ್ಗೆ ತಿಳುವಳಿಕೆ ನೀಡಲು ಉಚಿತ ದೂರವಾಣಿ (ನಂ. ೧೦೯೭) ಸೌಲಭ್ಯವಿದೆ.
* ಸರಕಾರೇತರ ಸಂಸ್ಥೆಗಳು ಪುರುಷ ಹಾಗೂ ಮಹಿಳೆಯರಿಗೆ ಪ್ರತ್ಯೇಕ ಕೇಂದ್ರಗಳನ್ನು ತೆರೆದಿವೆ.


ಡಾ|| ಡಿ. ಕೆ. ಮಹಾಬಲರಾಜು

'ನಯನ' ೩೬೮೦/೨೨, ಹೌಸಿಂಗ್ ಬೋರ್ಡ್, ಎಂ.ಸಿ.ಸಿ. 'ಬಿ' ಬ್ಲಾಕ್,
ಮೆಡಿಕಲ್ ಹಾಸ್ಟೆಲ್ ರಸ್ತೆ, ದಾವಣಗೆರೆ - ೫೭೭ ೦೦೪


## ಹುಟ್ಟುತ್ತೇನೆ ಹುಲ್ಲಾಗಿ

ನಮ್ಮಮ್ಮ ಹೇಳ್ತಿದ್ಲು

''ದೊಡ್ಡವ್ರು ಸತ್ರೆ
ಆಕಾಶದಾಗೆ ಚುಕ್ಕಿ ಆಗ್ತಾರೆ
ನಮ್ಮಂತೋರು ಸತ್ರೆ
ಗುಡ್ಡದಾಗಿನ ಕಲ್ಲು, ಹೊಲದಾಗಿನ ಹುಲ್ಲು
ಆಗ್ತೀವಿ'' ಅಂತ.

ಹುಡುಕುವುದಿಲ್ಲ
ಸತ್ತ ಅಪ್ಪನ ಆಕಾಶದಲ್ಲಿ
ಕಳೆದುಹೋದ ಅಮ್ಮನ ಚುಕ್ಕಿಯಲ್ಲಿ...

ಎದುರಾಗುವ
ಕಲ್ಲು ಬೆಟ್ಟಗಳಲ್ಲಿ ಕಾಣುತ್ತೇನೆ
ಅಪ್ಪನ ಗಟ್ಟಿತನವನ್ನ
ಹೊಲದ ಬದುವಿನ ಹುಲ್ಲಿನಲ್ಲಿ
ಹುಡುಕುತ್ತೇನೆ ಅಮ್ಮನ ಮಮತೆಯನ್ನ...

ಯಾರಿಗೂ ಸಿಗದ 'ಆಕಾಶ
ದ ಚುಕ್ಕಿ' ಆಗೋದಕ್ಕಿಂತ
ಬದುಕಿಗೆ ಆಸರೆಯಾಗೋ 'ಕಲ್ಲೋ,
ಹುಲ್ಲೋ, ಮಣ್ಣೋ' ಆಗೋದೇ ಸುಖ...

ಇರಲಿ ನಿಮಗೇ
'ಚುಕ್ಕಿ ಚಂದ್ರಮ'ರ ಬದುಕು
ಸಾಕೆನಗೆ
ಈ ಮಣ್ಣಿನ ಗೆಣೆತನ !!!


ವಿ. ಹರಿನಾಥ ಬಾಬು
ಸದಾಶಿವನಗರ, ಸಿರುಗುಪ್ಪ - ೫೮೩ ೧೨೧




# ಕ್ರಾಂತಿ ಬಲಗೊಳಿಸುವ ಹಾದಿಯಲ್ಲಿ ವೆನೆಜುವೇಲ




**ಸೀಯಾರ್ಕೆ**

ದಕ್ಷಿಣ ಅಮೆರಿಕಾದಲ್ಲಿ ಒಂದು ದಶಕದ ಹಿಂದೆ ಪ್ರಾರಂಭವಾದ ಕ್ರಾಂತಿ ಈಗ ಬಲಗೊಳಿಸುವಿಕೆಯತ್ತ ಸಾಗುತ್ತಿದೆ. ತೀವ್ರ ವಿರೋಧದ ನಡುವೆಯೂ ಮತಗಟ್ಟೆಯಲ್ಲಿ ಜಯಗಳಿಸಿ ಸಮಾಜವಾದಿ ಸಮಾಜ ನಿರ್ಮಾಣದತ್ತ ಹೆಜ್ಜೆ ಇರಿಸಿ ಮುಂದುವರಿಯುತ್ತಿರುವ ವೆನೆಜುವೇಲ, ಬೊಲಿವಿಯ ಮತ್ತು ಈಕ್ವೆಡಾರುಗಳ ನಾಯಕರು ಸಂವಿಧಾನಕ್ಕೆ ಅಗತ್ಯವಾದ ತಿದ್ದುಪಡಿಗಳನ್ನು ತಂದು ಅಧಿಕಾರವನ್ನು ದೃಢ ಗೊಳಿಸಿದ್ದಾರೆ. ಲ್ಯಾಟಿನ್ ಅಮೆರಿಕಾದಲ್ಲಿ ಹಿರಿಯಣ್ಣ ಅಮೆರಿಕಾದ ಅಧಿನಾಯಕತ್ವ ಪರಿಣಾಮವನ್ನು ತೊಡೆದುಹಾಕುವ ಗುರಿಯತ್ತ ಮುನ್ನಡೆಯುತ್ತಿದ್ದಾರೆ. ಹತ್ತು ವರ್ಷಗಳ ಕಾಲದಲ್ಲಿ ವೆನೆಜುವೇಲ ಹೊಸ ಹಾದಿಯಲ್ಲಿ ಸಾಧಿಸಿರುವ ಪ್ರಗತಿ ಗಮನಾರ್ಹ. ಹ್ಯೂಗೊ ಚಾವೆಜ್ ಆಡಳಿತೆಯಲ್ಲಿ ಎರಡು ಮಿಲಿಯಕ್ಕೂ ಹೆಚ್ಚು ಮಂದಿ ಬಡಜನರ ಜೀವನ ಸುಧಾರಿಸಿದೆ. ದೇಶಾದ್ಯಂತ ಉಚಿತ ವೈದ್ಯಕೀಯ ಸೌಲಭ್ಯ ಲಭ್ಯವಿದೆ. ಕನಿಷ್ಠವೇತನವನ್ನು ಹೆಚ್ಚಿಸಲಾಗಿದೆ. ನಿರುದ್ಯೋಗದ ಪ್ರಮಾಣ ವೆನೆಜುವೇಲ ಇತಿಹಾಸದಲ್ಲೇ ಕನಿಷ್ಠ ಮಟ್ಟಕ್ಕೆ ಇಳಿದಿದೆ. ಸುಮಾರು ಮೂರು ಮಿಲಿಯ ಹೆಕ್ಟೇರ್ ಭೂಮಿಯನ್ನು ಬಡರೈತರಿಗೆ ಹಂಚಲಾಗಿದೆ. ಜಾಗತಿಕ ಬಂಡವಾಳಶಾಹಿ ಆರ್ಥಿಕ ಬಿಕ್ಕಟ್ಟಿನ ಬಿಸಿ ಲ್ಯಾಟಿನ್ ಅಮೆರಿಕಾದ ಈ ದೇಶಗಳಿಗೆ ತಟ್ಟಿದ್ದಾಗ್ಯೂ ಬಡ ಜನರ ಜೀವನ ದುಸ್ತರವಾಗದಂತೆ ನೋಡಿಕೊಳ್ಳಲು ಸರಕಾರ ಕ್ರಮ ಕೈಗೊಂಡಿದೆ. ಬಲಪಂಥೀಯ ಶಕ್ತಿಗಳ ವಿರೋಧ, ಅಮೆರಿಕಾದ ಒತ್ತಡಗಳು ಮತ್ತು ಕುತಂತ್ರಗಳ ನಡುವೆಯೂ ಪ್ರಗತಿಪರ ಸುಧಾರಣೆಗಳಾಗುತ್ತಿರುವುದು ಸ್ತುತ್ಯರ್ಹ. ಇತ್ತೀಚೆಗಷ್ಟೇ ಎಲ್ ಸಾಲ್ವಡೋರ್‌ನಲ್ಲಿಯೂ ಎಡಪಕ್ಷ ಜಯ ಗಳಿಸಿದೆ.

ವೆನೆಜುವೇಲದ ಸಂವಿಧಾನದ ಪ್ರಕಾರ ರಾಷ್ಟ್ರಾಧ್ಯಕ್ಷರ ಅಧಿಕಾರಾವಧಿ ಎರಡು ಸಲಕ್ಕೆ ಸೀಮಿತ. ಎರಡು ವರ್ಷಗಳ ಹಿಂದೆ ಈ ನಿರ್ಬಂಧವನ್ನು ತೆಗೆದುಹಾಕಲು ವೆನೆಜುವೇಲದಲ್ಲಿ ಜನಮತಗಣನೆ ನಡೆಯಿತು. ವಿರೋಧ



ಪಕ್ಷಗಳಿಗೆ ಕುಮ್ಮಕ್ಕು ನೀಡಿ ಅಮೆರಿಕಾ ಚಾವೆಜ್‌ರ ಪಕ್ಷ ವೆನೆಜುವೇಲದ ಸಂಯುಕ್ತ ಸಮಾಜವಾದಿ ಪಕ್ಷ ತಂದಿದ್ದ ತಿದ್ದುಪಡಿಯನ್ನು ಪರಾಜಯಗೊಳಿಸಲು ಹಣದ ಹೊಳೆಯನ್ನೇ ಹರಿಸಿ, ಸಫಲಗೊಂಡಿತು. ಅತಿ ಕಡಿಮೆ ಅಂತರದಲ್ಲಿ ತಿದ್ದುಪಡಿ ಬಿದ್ದುಹೋಯಿತು. ಆದರೆ ಈಚೆಗೆ ಜರುಗಿದ ಜನಮತಗಣನೆಯಲ್ಲಿ ಅಪಾರವಾದ ಬಹುಮತ ಗಳಿಸಿ ಅಧಿಕಾರಾವಧಿಯ ನಿರ್ಬಂಧ ತೆಗೆದುಹಾಕುವ ತಿದ್ದುಪಡಿ ಅಂಗೀಕಾರವಾಗಿದೆ. ಇದರಿಂದ ಮುಂದೆ ನಡೆಯುವ ಚುನಾವಣೆಗಳಲ್ಲಿ ಹ್ಯೂಗೋ ಚಾವೆಜ್ ಅಭ್ಯರ್ಥಿಯಾಗಿ ನಿಲ್ಲಲು ಅಡ್ಡಿಯಿಲ್ಲ. ಇದೇ ರೀತಿಯ ತಿದ್ದುಪಡಿಗಳನ್ನು ಈ ಹಿಂದೆಯೇ ಬೊಲಿವಿಯ ಮತ್ತು ಈಕ್ವೆಡಾರ್‌ಗಳಲ್ಲಿ ತರಲಾಗಿದೆ. ಹಾಗಾಗಿ ಎಡಪಂಥದ ಅಧ್ಯಕ್ಷರುಗಳಾದ ಇವೋ ಮೊರಾಲೆಸ್ ಮತ್ತು ರಾಫೆಲ್ ಕೊರಿಯ ಅಧಿಕಾರದಲ್ಲಿ ಮುಂದುವರಿಯಲು ಅಡ್ಡಿಯಿಲ್ಲ. ಅಮೆರಿಕಾ ತಿದ್ದುಪಡಿಯನ್ನು ತಡೆಯಲು ಸಾಕಷ್ಟು ಪ್ರಯತ್ನಿಸಿ, ಹಣ ವ್ಯಯಿಸಿ ವಿಫಲಗೊಂಡಿತು.

ಎರಡು ಅವಧಿಗಿಂತ ಹೆಚ್ಚು ಕಾಲ ಅಧಿಕಾರದಲ್ಲಿ ಮುಂದುವರಿದರೆ ಅದು ಸರ್ವಾಧಿಕಾರಕ್ಕೆಡೆಕೊಡುತ್ತದೆ ಎನ್ನುವುದು ಅಮೆರಿಕಾದ ವಾದ. ಅಮೆರಿಕಾದಲ್ಲಿ ಅಂಥ ನಿರ್ಬಂಧವಿದೆ (ಮೊದಲು ಇದ್ದಿರಲಿಲ್ಲ). ಅದನ್ನೇ ಎಲ್ಲರ ಮೇಲೂ ಹೇರಿಸುವುದು ಅದರ ಅಪೇಕ್ಷೆ. ಅನುಕೂಲಕ್ಕೆ ತಕ್ಕಂತೆ ಸರ್ವಾಧಿಕಾರಿ ಆಡಳಿತಗಳಿಗೆ, ನಿರಂಕುಶಾಡಳಿತಗಳಿಗೆ ಪೋಷಣೆ ನೀಡುವ ಅಮೆರಿಕಾ ತನಗೆ ಬೇಡವಾದ, ಅದರಲ್ಲೂ ಎಡಪಕ್ಷಗಳ ನಾಯಕರು ಅಧಿಕಾರದಲ್ಲಿರುವ ದೇಶಗಳ ಮೇಲೆ ಹರಿಹಾಯುತ್ತದೆ. ವೆನೆಜುವೇಲದಲ್ಲಿ ಚಾವೆಜ್ ಮೂರನೇ ಅವಧಿಗೆ ಅಧ್ಯಕ್ಷ ಪದವಿಗೆ ಸ್ಪರ್ಧಿಸುವುದನ್ನು ವಿರೋಧಿಸುವವರು ಇತರ ದೇಶಗಳಲ್ಲಿ ಅಂಥದ್ದು ಸಂಭವಿಸಿದಾಗ ಮೌನವಾಗಿ ಇರುತ್ತಾರೆ ಏಕೆ ಎಂಬುದೇ ಪ್ರಶ್ನೆ. ಬ್ರಿಟನ್ನಿನಲ್ಲಿ ಮಾರ್ಗರೇಟ್ ಥ್ಯಾಚರ್ ಮತ್ತು ಟೋನಿ ಬ್ಲೇರ್, ಭಾರತದಲ್ಲಿ ಜವಹಾರಲಾಲ್ ನೆಹರು ಮತ್ತು ಇಂದಿರಾ ಗಾಂಧಿ ಮೊದಲಾದವರು ಮೂರು ಅವಧಿ ಅಧಿಕಾರ ದಲ್ಲಿದ್ದಾಗ ಯಾರೂ ಚಕಾರವೆತ್ತಲಿಲ್ಲ. ಎರಡು ಅವಧಿ ಗಿಂತ ಹೆಚ್ಚು ಕಾಲ ಅಧಿಕಾರದಲ್ಲಿದ್ದರೆ ಆಜೀವ ಪರ್ಯಂತ ಅಧಿಕಾರದಲ್ಲಿ ಉಳಿದುಬಿಡುತ್ತಾರೆ ಎಂಬುದೊಂದು ಆರೋಪ. ಸರ್ವಾಧಿಕಾರಿ ಆಡಳಿತಗಳಲ್ಲಿ ಹಾಗಾಗಲು ಸಾಧ್ಯ. ಜನತೆಯ ವಿಶ್ವಾಸ ಇರುವವರೆಗೂ ಅಧಿ ಕಾರದಲ್ಲಿದ್ದು ಉತ್ತಮವಾಗಿ ಕಾರ್ಯ ನಿರ್ವಹಿಸಿದರೆ ಅಡ್ಡಿ ಏನು? ಜನಪ್ರಿಯ ನಾಯಕರುಗಳಾದ ನೆಲ್ಸನ್ ಮಂಡೆಲಾ, ಫಿಡಲ್ ಕ್ಯಾಸ್ಟ್ರೋ ತಾವಾಗಿಯೇ ಅಧಿಕಾರ ತ್ಯಜಿಸಲಿಲ್ಲವೆ? ಇಲ್ಲಿ ಮುಖ್ಯವಾದ ಪ್ರಶ್ನೆ ಅಧಿಕಾರದ ಅವಧಿಗಿಂತ ಅಧಿಕಾರದಲ್ಲಿರುವವರು ಏನು ಕೆಲಸ ಮಾಡುತ್ತಿದ್ದಾರೆ, ಹೇಗೆ ಮಾಡುತ್ತಿದ್ದಾರೆ, ಎನ್ನುವುದು. ವೆನೆಜುವೇಲ ಜನತೆ ಅಧ್ಯಕ್ಷರ ಅಧಿಕಾರಾವಧಿಯ ಮುಂದುವರಿಕೆಗೆ ಒಪ್ಪಿಗೆ ನೀಡುವುದರ ಮೂಲಕ ಸುಧಾರಣೆಗಳನ್ನು ಮುಂದೆ ಕೊಂಡೊಯ್ಯುವುದಕ್ಕೆ ಸಮ್ಮತಿ ಸೂಚಿಸಿದ್ದಾರೆ. ಜನತೆ ನೀಡಿರುವ ಈ ಆದೇಶ ಪಟ್ಟಭದ್ರ ಹಿತಾಸಕ್ತಿಗಳಿಗೆ ನಡುಕ ಹುಟ್ಟಿಸಿದೆ.

ಲ್ಯಾಟಿನ್ ಅಮೆರಿಕಾದ ಈ ಮೂರು ದೇಶಗಳು ವೆನೆಜುವೇಲ, ಬೊಲಿವಿಯ ಮತ್ತು ಈಕ್ವೆಡಾರ್ ಸಾಧಿಸಿ ರುವ ಪ್ರಗತಿ, ಈ ಭೂಭಾಗದ ಇತರ ದೇಶಗಳ ಮೇಲೂ ಪ್ರಭಾವ ಬೀರಿದೆ. ಅಮೆರಿಕಾ ಹೊಂದಿದ್ದ ಸರ್ವಾಧಿಕಾರದ ಪ್ರಭಾವ ಕುಗ್ಗಿದೆ. ಇದರಿಂದ ಅಮೆರಿಕಾ ಗಾಬರಿಗೊಂಡಿದೆ. ಅಮೆರಿಕಾ ಪ್ರೇರಿತ ಮುಕ್ತವಾಣಿಜ್ಯ ಕ್ಷೇತ್ರಕ್ಕೆ ಪ್ರತಿಯಾಗಿ ವೆನಿಜುವೇಲ ಸೂಚಿಸಿರುವ ಪ್ರಾದೇಶಿಕ ವಾಣಿಜ್ಯ ಕೂಟ ಹೆಚ್ಚು ಸ್ವೀಕಾರಾರ್ಹವಾಗಿ ಕಂಡುಬಂದಿದೆ. ಇದರ ಮೇಲೆ ವೆನೆಜುವೇಲ ಕ್ಯೂಬ, ರಷ್ಯಾ ಮತ್ತು ಇತರ ದೇಶಗಳ ಜೊತೆ ಸ್ಥಾಪಿಸಿಕೊಂಡಿರುವ ಮೈತ್ರಿ ಸಂಬಂಧಗಳು ಅಮೆರಿಕಾವನ್ನು ಕಂಗೆಡಿಸಿದೆ. ಜನಮತಗಣನೆ ಫಲಿತಾಂಶ ಹೊರಬೀಳುತ್ತಿದ್ದಂತೆ ''ವೆನೆಜುವೇಲ ಇನ್ನೆಂದೂ ಹಿಂದಿನ ಸ್ಥಿತಿಗೆ ಮರಳದು'' ಎಂದು ಹೇಳಿದ ಮಾತು ಯಥಾರ್ಥವಾಗಿದೆ. ಲ್ಯಾಟಿನ್



ಅಮೆರಿಕಾ ಈ ದೇಶಗಳ ಹಾದಿ ಇತರ ಅಭಿವೃದ್ಧಿಶೀಲ ದೇಶಗಳಿಗೂ ಮಾರ್ಗದರ್ಶಿಯಾದೀತು. ಬಂಡವಾಳಶಾಹಿ ಜಗತ್ತಿನ ಆರ್ಥಿಕ ಕುಸಿತ, ಜಾಗತೀಕರಣದ ವೈಫಲ್ಯದ ಹಿನ್ನೆಲೆಯಲ್ಲಿ ಪರ್ಯಾಯ ಮಾರ್ಗಕ್ಕೆ ಲ್ಯಾಟಿನ್ ಅಮೆರಿಕಾ ದೇಶಗಳು ನಾಂದಿ ಹಾಡಿವೆ.

# ಎಲ್‌ಟಿಟಿಇ ಹತಾಶೆ - ಆಪತ್ತಿನಲ್ಲಿ ನಾಗರಿಕರು

**ಈ**ಚೆಗೆ ಕೆಲದಿನಗಳ ಹಿಂದೆ ಶ್ರೀಲಂಕಾದ ರಾಜಧಾನಿ ಕೊಲಂಬೋದಲ್ಲಿ ನಡೆದ ಎಲ್‌ಟಿಟಿಇ ಆತ್ಮಾಹುತಿ ದಾಳಿಯಲ್ಲಿ ಹತ್ತಾರು ಮಂದಿ ಅಮಾಯಕ ನಾಗರಿಕರು ಸಾವನ್ನಪ್ಪಿದರು. ಸ್ವತಂತ್ರ ತಮಿಳು ರಾಜ್ಯಸ್ಥಾಪನೆಯ ಗುರಿ ಹೊಂದಿರುವ ಎಲ್‌ಟಿಟಿಇ ಸೋಲನ್ನನುಭವಿಸಿ ಹತಾಶಗೊಂಡಿರುವ ಹಿನ್ನೆಲೆಯಲ್ಲಿ ಈ ದಾಳಿ ಮುಂದಿನ ಭಯೋತ್ಪಾದಕ ಕೃತ್ಯಗಳಿಗೆ ಮುನ್ಸೂಚನೆಯಾಗಿದೆ. ಸುಮಾರು ಮೂರು ದಶಕಗಳಿಂದ ಪ್ರತ್ಯೇಕತಾವಾದಿ ತಮಿಳು ಸಂಘಟನೆ ಎಲ್‌ಟಿಟಿಇ ಶ್ರೀಲಂಕಾ ಸೇನೆಯೊಂದಿಗೆ ಸಶಸ್ತ್ರ ಘರ್ಷಣೆಯಲ್ಲಿ ತೊಡಗಿದೆ. ಈ ಘರ್ಷಣೆಗಳಲ್ಲಿ ಸಹಸ್ರಾರು ಮಂದಿ ಹತರಾಗಿದ್ದಾರೆ. ಈ ಮಧ್ಯೆ ನಡೆದ ಸಂಧಾನಗಳು ವಿಫಲಗೊಂಡಿವೆ. ಪ್ರತಿಸಲ ಯುದ್ಧ ಸ್ತಂಭನ ಏರ್ಪಟ್ಟು ಕದನವಿರಾಮ ಘೋಷಣೆಯಾಗಿ ಸಂಧಾನಗಳು ನಡೆದಿತ್ತಾದರೂ, ಅದು ಘರ್ಷಣೆ ಮತ್ತಷ್ಟು ತೀವ್ರವಾಗುವುದಕ್ಕೆ ಎಡೆಕೊಟ್ಟಿದೆ. ಶ್ರೀಲಂಕಾ ಸರಕಾರ ಮತ್ತು ಎಲ್‌ಟಿಟಿಇಯ ಮೊಂಡುತನವೇ ಸಂಧಾನಗಳ ವೈಫಲ್ಯತೆಗೆ ಕಾರಣ. ಎರಡು ಕಡೆಯೂ ಯುದ್ಧವಿರಾಮ ಕಾಲವನ್ನು ಬಲವರ್ಧನೆಗೆ ಬಳಸಿ ಕೊಂಡಿವೆ. ಈಗ ಶ್ರೀಲಂಕಾ ಸರಕಾರಿ ಸೇನೆ ಮೇಲುಗೈ ಸಾಧಿಸಿದೆ.

ಎರಡು ಮೂರು ವರ್ಷಗಳ ಹಿಂದೆ ಸುಮಾರು ೧೫,೦೦೦ ಚ.ಕಿ.ಮೀ. ಪ್ರದೇಶದಲ್ಲಿ ಅಧಿಕಾರ ಚಲಾಯಿಸುತ್ತಿದ್ದ ಎಲ್‌ಟಿಟಿಇ ಈಗ ಮೂಲೆ ಗುಂಪಾಗಿದೆ. ಅದು ಈಗ ಸುಮಾರು ೫೦ ಚ.ಕಿ.ಮೀ. ಪ್ರದೇಶಕ್ಕೇ ಸೀಮಿತಗೊಂಡಿದೆ. ಪರಾಭವದಿಂದ ಹತಾಶಗೊಂಡಿರುವ ಎಲ್‌ಟಿಟಿಇ ಸುಮಾರು ೭೫,೦೦೦ ಮಂದಿ ನಾಗರಿಕರನ್ನು ಹೆಚ್ಚು ಕಡಿಮೆ ಒತ್ತೆಯಾಳುಗಳಾಗಿ ಬಳಸಿಕೊಳ್ಳುತ್ತಿದೆ. ಶ್ರೀಲಂಕಾ ಸೇನೆಯ ವಿರುದ್ಧ ಹೋರಾಟದಲ್ಲಿ ಈ ಅಮಾಯಕರನ್ನು ದಾಳವಾಗಿ ಬಳಸಿಕೊಳ್ಳುತ್ತಿದೆ ಅಮಾನುಷ ರೀತಿಯಲ್ಲಿ. ಹಿಂದೆಲ್ಲ ಎಲ್‌ಟಿಟಿಇ ಹತ್ತು ಹದಿನೈದು ವರ್ಷದ ಬಾಲಕರನ್ನು ಯುದ್ಧಕ್ಕಾಗಿ ಬಳಸಿ ಕೊಳ್ಳುತ್ತಿದ್ದುದು ತಿಳಿದಿರುವ ವಿಚಾರ. ಮತ್ತೆ ಎಳೆ ವಯಸ್ಸಿನವರನ್ನು ಆತ್ಮಾಹುತಿ ದಳವಾಗಿ ಬಳಸುತ್ತಿರುವುದೂ ಅಂತರರಾಷ್ಟ್ರೀಯವಾಗಿ ಖಂಡನೆಗೀಡಾಗಿದೆ. ಈಗಂತೂ ಎಲ್‌ಟಿಟಿಇ ಎಲ್ಲ ಮಹಿಳೆ ಹೆಂಗಸರು - ಮಕ್ಕಳು, ಮುದುಕರೆನ್ನದೆ ಎಲ್ಲರನ್ನೂ ಮಾನವಕೋಟೆಯಾಗಿ ಬಳಸಿಕೊಳ್ಳಲು ಹೊರಟಿದೆ. ಈ ಅಮಾನುಷಕೃತ್ಯ ಖಂಡನೀಯ. ಮಾನವೀಯತೆಯ ದೃಷ್ಟಿಯಿಂದ ನಾಗರಿಕರು ಸುರಕ್ಷಿತ ಪ್ರದೇಶಗಳಿಗೆ ಹೋಗಲು ಅನುವು ಮಾಡಿಕೊಡುವಂತೆ ಅಂತರರಾಷ್ಟ್ರೀಯ ಸಮುದಾಯ ಒತ್ತಾಯಿಸಿದೆ. ಕದನ ವಿರಾಮಕ್ಕೆ ಹಾತೊರೆಯುತ್ತಿರುವ ಎಲ್‌ಟಿಟಿಇ ಪ್ರಾಮಾಣಿಕತೆಯಿಂದ ಶರಣಾಗಿ ಮಾತುಕತೆಯಲ್ಲಿ ತೊಡಗುವುದು ಒಳಿತು.

ಎಲ್‌ಟಿಟಿಇ ಪರಾಜಯಗೊಂಡ ಮಾತ್ರಕ್ಕೆ ಶ್ರೀಲಂಕಾ ತಮಿಳರ ಪ್ರಶ್ನೆ ಇತ್ಯರ್ಥವಾದಂತೇನಲ್ಲ. ಈ ಹಿಂದೆ ನಾರ್ವೆಯ ಮಧ್ಯಸ್ಥಿಕೆಯಲ್ಲಿ ಶ್ರೀಲಂಕಾ ಸರಕಾರ ತಮಿಳರು ಅಧಿಕ ಸಂಖ್ಯೆಯಲ್ಲಿರುವ ಪ್ರದೇಶಗಳಲ್ಲಿ ಸಂವಿಧಾನ ಬದ್ಧವಾಗಿ ಸ್ವಾಯತ್ತತೆ ನೀಡುವ ಆಶ್ವಾಸನೆ ನೀಡಿತ್ತು. ಶ್ರೀಲಂಕಾ ಸರಕಾರ ಅದನ್ನು ಪುನರುಚ್ಚರಿಸಿದೆ. ಆದರೆ ಅದನ್ನು ಅದು ಪ್ರಾಮಾಣಿಕವಾಗಿ ಕಾರ್ಯರೂಪಕ್ಕೆ ತರಬೇಕಾಗಿದೆ. ಎಲ್‌ಟಿಟಿಇ ಬೆಂಬಲಿಗರು ಸ್ವತಂತ್ರ ತಮಿಳು ರಾಜ್ಯ ಸ್ಥಾಪನೆಯ ವಿಚಾರವನ್ನು ಕೈಬಿಟ್ಟು ಶಾಂತಿಯುತ ಇತ್ಯರ್ಥಕ್ಕೆ ಬೆಂಬಲ ನೀಡುವುದು ಅಗತ್ಯ. ಸ್ವಾತಂತ್ರ್ಯ ಹೋರಾಟಗಾರರೆಂದು ಕೆಲವು ಐರೋಪ್ಯ ದೇಶಗಳಲ್ಲಿ ಹಾಗೂ ಇತರ ದೇಶಗಳಲ್ಲಿ ಮನ್ನಣೆ ಪಡೆದಿದ್ದ ಎಲ್‌ಟಿಟಿಇ ಇಂದು ಭಯೋತ್ಪಾದಕ ಸಂಘಟನೆಯಾಗಿ ಪರಿಗಣಿಸಲ್ಪಟ್ಟಿದೆ. ಈಗ ಅನುಭವಿಸುತ್ತಿರುವ ಸೋಲಿಗೆ ಅದೂ ಒಂದು ಕಾರಣ. ಪರಿಸ್ಥಿತಿಯ



ಸತ್ಯವನ್ನು ಅರಿತು ಎಲ್‌ಟಿಟಿಇ ವರ್ತಿಸಬೇಕಾಗಿದೆ. ಅಮಾಯಕ ಜನರನ್ನು ಬಲಿಕೊಡುವ ದುಸ್ಸಾಹಸವನ್ನು ತ್ಯಜಿಸಬೇಕಾಗಿದೆ.

ಶ್ರೀಲಂಕಾದ ತಮಿಳರ ರಕ್ಷಣೆಗೆ ಭಾರತ ಸರಕಾರ ಕ್ರಮಕೈಗೊಳ್ಳಬೇಕೆಂದು ತಮಿಳು ನಾಡಿನ ವಿವಿಧ ರಾಜಕೀಯ ಪಕ್ಷಗಳ ಒತ್ತಾಯವಿದೆ. ಶ್ರೀಲಂಕಾದ ಆಂತರಿಕ ವಿಷಯ ಇದಾಗಿರುವುದರಿಂದ ಭಾರತ ಸರಕಾರ ಮಧ್ಯಪ್ರವೇಶಿಸುವ ಪ್ರಶ್ನೆಯೇ ಏಳುವುದಿಲ್ಲ. ಶಾಂತಿಯುತವಾಗಿ ಪ್ರಶ್ನೆಯನ್ನು ಇತ್ಯರ್ಥಗೊಳಿಸಬೇಕೆಂದು ಒತ್ತಾಯ ತರಬಹುದು ಅಷ್ಟೆ. ನಾಗರಿಕರ ಸುರಕ್ಷತೆಯ ದೃಷ್ಟಿಯಿಂದ ಎಲ್‌ಟಿಟಿಇ ದುಸ್ಸಾಹಸವನ್ನು ತ್ಯಜಿಸಿ ಶರಣಾಗುವಂತೆ ಒತ್ತಾಯ ತರುವುದು ಲೇಸು.

ಸೀಯಾರ್ಕೆ
'ಚೌಬೀನ', ೪೮೯, ಬನಶಂಕರಿ ೩ನೇ ಹಂತ, ಕತ್ರಿಗುಪ್ಪೆ, ಬೆಂಗಳೂರು – [illegible]

# ಕರ್ಣ ಕಾರಣ

ವಸುಮತಿ ಉಡುಪ

**ಒಂ**ದು ಮದುವೆಯ ಆರತಕ್ಷತೆ ಸಮಾರಂಭದಲ್ಲಿ ಸಡಗರದಿಂದ ಓಡಾಡುತ್ತಿದ್ದ ಪಡ್ಡೆಗಳ ಪೈಕಿ ಒಂದು ಕಿವಿ ಚುಚ್ಚಿಸಿಕೊಂಡು ಅದಕ್ಕೆ ನಕ್ಷತ್ರದಂತೆ ಮಿನುಗುವ ವಂಟಿಯನ್ನೋ, ರಿಂಗನ್ನೋ ಧರಿಸಿ ಮಿಂಚುತ್ತಿದ್ದ ಅವರನ್ನು ನೋಡಿದಾಗ ಏನೇನೋ ನೆನಪುಗಳು ನನ್ನನ್ನು ಕಾಡತೊಡಗಿದುವು. ಇದಕ್ಕೂ ಮುನ್ನ ಇಂಥ ಕರ್ಣಾಭರಣಭೂಷಿತ ಯುವಕರನ್ನು ನೋಡಿರಲಿಲ್ಲ ವೆಂದಲ್ಲ. ಸಾನಿಯಾಳ ಮೂಗುತಿಯಂತೆ ಇದು ಇವತ್ತಿನ ಹುಡುಗರ ಫ್ಯಾಷನ್ನು ಅನ್ನುವುದು ಎಲ್ಲರೂ ಬಲ್ಲ ಸಂಗತಿ. ಆದರೆ ಇಷ್ಟು ಪುರುಸೊತ್ತಾಗಿ ಕೂತು ಈ ಕುರಿತು ಮನಸ್ಸು ಹರಿಬಿಟ್ಟಿರಲಿಲ್ಲವಾಗಿ ಈಗ ನೆನಪಿಗೆ ಬರುತ್ತಿರುವ ವಿವರಗಳು ಆಗ ನನ್ನ ಮೇಲೆ ದಾಳಿ ಮಾಡಿರಲಿಲ್ಲ. ಕಾಲಪ್ರವಾಹ ಹಿಂದುಹಿಂದಕ್ಕೆ ಸಾಗುತ್ತಿರುವ ಸೋಜಿಗಕ್ಕೆ ಈ ಮುನ್ನ ಸೇರ್ಪಡೆಯಾಗಿದ್ದ ಪಟ್ಟಿಗೆ ಇದನ್ನೂ ಸೇರಿಸಿಕೊಂಡೆ. ಅಥವಾ ಕಾಲಚಕ್ರ ತಿರುಗುತ್ತಿರುತ್ತದೆ ಎಂದರೆ ಹೆಚ್ಚು ಸರಿಯಾಗುತ್ತದೆಯಾ ? ಇರಲಿ. ಷೋಡಶ ಕರ್ಮಗಳಲ್ಲಿ ಒಂದಾಗಿ, ಕೆಲವು ಸಂಪ್ರದಾಯಸ್ಥ ಕುಟುಂಬ ಗಳಲ್ಲಿ ನಾಮಕರಣ ಮಹೋತ್ಸವದ ದಿನ ಕಡ್ಡಾಯ ವಾಗಿದ್ದ ಈ ಕಿವಿಚುಚ್ಚುವ ಕಾರ್ಯಕ್ರಮ ನಂತರದ ದಿನಗಳಲ್ಲಿ ಹೆಚ್ಚೂ ಕಮ್ಮಿ ಹೆಣ್ಣುಮಕ್ಕಳಿಗೆ ಮಾತ್ರ ಸೀಮಿತ ಗೊಂಡಿತು. ಎಳೆಬಾಲೆಯನ್ನು ತೊಡೆಯಮೇಲೆ ಮಲಗಿಸಿಕೊಂಡು ಕರುಣಾರ್ದ್ರ ನಯನಗಳಿಂದ ಒಂದು ಹಿಂಸೆಗೆ ಸಾಕ್ಷಿಯಾಗಿರುತ್ತಿದ್ದ ಸೋದರಮಾವ, ಮಗುವಿನ ಕಿವಿಯ ಆಲೆಗಳ ನಡುಮಧ್ಯೆ ಸರಿಯಾದ ಜಾಗದಲ್ಲಿ ಸುಣ್ಣದ ಬೊಟ್ಟಿಡುವ ಶಾಸ್ತ್ರ ಮಾಡುತ್ತಿದ್ದ ಸುಮಂಗಲಿಯರು, ತಮ್ಮ ಕರುಳ ಕುಡಿಯನ್ನು ನೋಯಿಸಿ ಅಳಿಸುವುದನ್ನು ಸಹಿಸಲಾಗದೆ ಆ ಜಾಗದಿಂದ ಆದಷ್ಟು ದೂರದಲ್ಲಿ ಠಳಾಯಿಸುತ್ತಿದ್ದರೂ, ಇನ್ನೊಂದು ಕ್ಷಣಕ್ಕೋ ಕಿವಿಗೆ ಅಪ್ಪಳಿಸುವ ಅಸಹಾಯ ಚೀತ್ಕಾರಕ್ಕೆ ಮೈಯೆಲ್ಲಾ ಕಿವಿಯಾಗಿರುತ್ತಿದ್ದ ಹೆತ್ತವರು, ಚಿನ್ನದ ಮುರದಿಂದ ಎಳೆಕಿವಿಯನ್ನು ಚುಚ್ಚಿ, ಕೊಬರಿ ಜಗಿದು ಕಿವಿ ಊದಲು ಸನ್ನದ್ಧನಾಗಿರುತ್ತಿದ್ದ ಸೊನೆಗಾರ, ಎಲ್ಲರೂ ಮನೋಪಟಲದೆದುರು ಸಾಗಿಹೋದರು. ಎಳೆಮಗುವಿನ ಕಿವಿ ಚುಚ್ಚಿದರೆ ಗಾಯದ ನೋವಿಗೆ, ವಾಸಿಯಾಗುವ ಹೊತ್ತಿನ ತುರಿಕೆಗೆ ಅದು ಕಿವಿ ಮುಟ್ಟಿಕೊಂಡು ಗಾಯವನ್ನು ಕೆರಳಿಸಿಕೊಳ್ಳುವುದಿಲ್ಲವೆಂಬ ಕಾರಣದಿಂದ ಹನ್ನೊಂದನೇ ಅಥವಾ ಹನ್ನೆರಡನೇ ದಿನ ಮಗುವಿನ ಕಿವಿ ಚುಚ್ಚಿ ಮುರ ಹಾಕುವುದು ಪದ್ಧತಿ. ಮುರ ಅಂದರೆ ಒಂದು ತುದಿಯಲ್ಲಿ ಸೂಜಿಮೊನೆಯಂತೆ ಚೂಪಾಗಿರುವ ಹಗುರಾದ ಪುಟ್ಟ ರಿಂಗು. ಚೂಪು ತುದಿಯಿಂದ ಕಿವಿ ಚುಚ್ಚಿ ಆಚೀಚಿನ ಬದಿಗಳನ್ನು ಸೇರಿಸಿ ಚೆನ್ನಾಗಿ ತಿರುಚಿಬಿಟ್ಟರೆ ಕತ್ತರಿಸಿ ತೆಗೆಯುವವರೆಗೆ ಪುಟ್ಟ ಕಿವಿಗಳಲ್ಲಿ ಅವು ಭದ್ರ. ಈ ಮುರಕ್ಕೆ ನೇತಾಡುವ ಪುಟ್ಟ ಹರಳುಗಳ ಅಲಂಕಾರವೂ ಇರುತ್ತದೆ. ಅಯ್ಯೆ ಅವರವರಿಗೆ ಬಿಟ್ಟದ್ದು. ಮುರದ ತುದಿಗಳನ್ನು ಸರಿಯಾಗಿ ತಿರುಚಿ ಬಗ್ಗಿಸಿರದಿದ್ದರೆ ಈ ತುದಿ ತೊಟ್ಟಿಲ ಹಾಸಿಗೆಗೋ, ಎತ್ತಿಕೊಂಡವರ ಬಟ್ಟೆಗೋ ಚುಚ್ಚಿಕೊಂಡು ಒಂದು ದಯನೀಯ ಪರಿಸ್ಥಿತಿ ಉಂಟಾಗುತ್ತದೆ. ಬಿಡಿಸುವುದರಲ್ಲಿ ಚೂರು ಹೆಚ್ಚು ಕಮ್ಮಿಯಾದರೂ ಮಗುವಿನ ಕಿವಿಗೆ ಆಪತ್ತು. ಕತ್ತರಿ ಹುಡುಕಿ ಮುರಕ್ಕೆ ಸಿಕ್ಕಿಕೊಂಡ ನೂಲಿನೆಳೆ ಕತ್ತರಿಸುವ ಧಾವಂತದಲ್ಲಿ ಕೈಕಾಲು ನಡುಕ. ತನ್ನ ಕೆಲಸವನ್ನು ಅಚ್ಚುಕಟ್ಟಾಗಿ ಪೂರೈಸದಿದ್ದವನಿಗೆ ಶಾಪ. ಕಿವಿಯ ಗಾಯ ಕೀತುಕೊಳ್ಳದಂತೆ ದಿನವೂ ನಿಗಾ. ಗಾಯ ಒಣಗುವವರೆಗೆ ಎಚ್ಚರದ ಕಣ್ಣು. ಸ್ವಲ್ಪ ದೊಡ್ಡವರಾಗುತ್ತಿದ್ದಂತೆ ಹುಡುಗರ ಕರ್ಣಾಭರಣ ಮಾಯವಾಗುತ್ತದೆ. ಕಿವಿ ಚುಚ್ಚಿದ ಕುರುಹಾದ ಸಣ್ಣ ತೂತುಗಳು ಕಿವಿಯಲ್ಲಿ ಉಳಿದುಕೊಳ್ಳುತ್ತವೆ. ಹುಟ್ಟುವ ಮಕ್ಕಳು ಆಯುಷ್ಯ ಪಡೆದುಕೊಂಡು ಹುಟ್ಟದೆ ಎಳವೆಯಲ್ಲೇ ತೀರಿಕೊಳ್ಳುತ್ತಿದ್ದರೆ ಅವು ಕಲ್ಲುಗುಂಡಿನ ಹಾಗೆ ಗಟ್ಟಿಮುಟ್ಟಾಗಿ ನೂರ್ಕಾಲ ಬದುಕಲಿ, ತಿಪ್ಪೆಯ ಹಾಗೆ ಆಯುಷ್ಯ ವರ್ಧಿಸಲಿ, ಎನ್ನುವ ಕಾರಣಗಳಿಂದ 'ಗುಂಡ, ಗುಂಡಿ, ತಿಪ್ಪ, ತಿಪ್ಪಿ...' ಮುಂತಾದ ಹೆಸರುಗಳನ್ನಿಟ್ಟು ಕರೆಯುತ್ತಿದ್ದಂತೆ, ಇದೇ ಉದ್ದೇಶದಿಂದ ಗಂಡಾಗಿರಲಿ, ಹೆಣ್ಣಾಗಿರಲಿ, ಅವುಗಳ ಮೂಗು ಚುಚ್ಚಿಸುವ ಕ್ರಮ ಕೆಲ ಜನಾಂಗಗಳಲ್ಲಿ ಚಾಲ್ತಿಯಲ್ಲಿತ್ತು. ಹುಡುಗರ ಕಿವಿಗಳಲ್ಲಿನ ಮುರ ತೆಗೆದಮೇಲೆ ಒಂದು ಹರಳಿರುವ ವಂಟಿ ಹಾಕುವುದು ಹಿಂದಿನಕಾಲದ ಪದ್ಧತಿಯಾಗಿತ್ತು. ಹುಡುಗಿಯರಿಗೆ ನಾನಾ ರೀತಿಯ ವಾಲೆ, ಜುಂಕಿ, ಲೋಲಾಕುಗಳ ಶೃಂಗಾರ. ಕಿವಿಗೆ ಇನ್ನೂ ಕೆಲವು ತೂತು ಕೊರೆಸಿಕೊಂಡು ಅವುಗಳನ್ನು ತಕ್ಕ ಆಭರಣಗಳಿಂದ ಅಲಂಕರಿಸಿಕೊಳ್ಳುವುದು ಕೆಲವರ ಖುಷಿ. ಈಗಂತೂ ನಾನಾ ನಮೂನೆಯ ಕೃತಕ ಆಭರಣಗಳು ಲಭ್ಯವಿದ್ದು ತಂತಮ್ಮ ಉಡುಪಿಗೆ, ಮನಃಸ್ಥಿತಿಗೆ ತಕ್ಕಂತೆ ಅಲಂಕರಿಸಿಕೊಳ್ಳಬಹುದಾದ ಸದವಕಾಶ. ಹರಳು, ಹವಳ, ಮುತ್ತು, ಕರಿಮಣಿ ಮುಂತಾದುವುಗಳ ಸೆಟ್‌ಗಳು ಪ್ರೌಢ ಮಹಿಳೆಯರಿಗೆ ಪ್ರಿಯ. ವಜ್ರ ಅಂದೂ, ಇಂದೂ, ಬಹುಶಃ ಮುಂದೂ ಕೂಡಾ ಘನಸ್ತಿಕೆಯ ಸಂಕೇತ. ವಜ್ರದ ಬೆಂಡೋಲೆ ಧರಿಸಿದವಳ ತೂಕ ಸರೀಕರಲ್ಲಿ ಒಂದು ಸುತ್ತು ಜಾಸ್ತಿ. ವಜ್ರ ಎಲ್ಲರಿಗೂ ಆಗಿಬರುವುದಿಲ್ಲ ಎನ್ನುವ ಹೇಳಿಕೆ, ನಂಬಿಕೆ, ನಾನಾ ದೃಷ್ಟಾಂತಗಳ ಮೂಲಕ ಇದರ ಪುಷ್ಟೀಕರಣ. ನೀಲದ ಹರಳಿಗೂ ಈ ಹೇಳಿಕೆ ಅನ್ವಯವಾಗುತ್ತದೆ ಎನ್ನುವಾಗ ತೀರಿಕೊಂಡ ತಂದೆಯ ನೆನಪಾಗುತ್ತಿದೆ. ಅಪ್ಪನ ಕುತ್ತಿಗೆಯ ಒಂದೆಳೆಯ ಸರದ ನಡುವೆ ನೀಲದ ಹರಳೊಂದು ಕೊಂಡಿಯಿಂದ ತೂಗಾಡುತ್ತಿತ್ತು. ಮತ್ತು ಅಪ್ಪನ ಎರಡೂ ಕಿವಿಗಳಲ್ಲಿ ಹತ್ತಕಡಕಿನ ಮಾದರಿಯ ವಂಟಿಗಳು. 'ಆದರೆ ನೀಲ, ತೆಗೆದರೆ ಮೂಲ' ಎನ್ನುವುದು ವ್ಯಾಪಕವಾಗಿರುವ ನಂಬಿಕೆ. ಕೆಲವು ಚಿನ್ನದಂಗಡಿಗಳಲ್ಲಿ ನೀಲವನ್ನು ತಂದಿಟ್ಟುಕೊಳ್ಳುವುದಿಲ್ಲ. ಗಿರಾಕಿಗಳು ಬಯಸಿದರೆ ತರಿಸಿಕೊಡುತ್ತಾರೆ. ಅಕ್ಕಸಾಲಿಗರಿಗೆ ಹೇಳಿ ಹೊರಹೊರಗೇ ಅವುಗಳ ಆಭರಣ ತಯಾರಿಸಿ ದಾಟಿಸಿಬಿಡುತ್ತಾರೆ. ನೀಲ ತಂದಿಟ್ಟುಕೊಂಡಾಗಲೆಲ್ಲಾ ವ್ಯಾಪಾರ ಡಲ್ ಹೊಡೆಯುತ್ತಿದ್ದ ಮಾತನ್ನು ಇಂಥವರ ಬಾಯಿಂದ ಕೇಳಿದ್ದೇನೆ. ಗಿರಾಕಿಗಳು ಇಚ್ಛಿಸಿದಾಗಲೂ ಎಚ್ಚರಿಕೆ ಮಾತನ್ನು ಹೇಳುವವರುಂಟು. ''ನೀಲದ ಹರಳನ್ನು ಒಂದುವಾರ ಮನೆಯಲ್ಲಿಟ್ಟುಕೊಂಡು ಮನೆಯಲ್ಲಿ ಏನೂ ಅವಘಡಗಳು ನಡೆಯದಿದ್ದರೆ ನಂತರ ಆಭರಣ ಮಾಡಿಸಿಕೊಳ್ಳಿ'' ಎನ್ನುವುದು ಇಂತಹ ವ್ಯಾಪಾರಿಗಳ ಹಿತವಚನ. ನವಗ್ರಹಗಳಲ್ಲಿ ಶನಿಗೆ ಪ್ರಿಯವೆನ್ನುವ ಹೇಳಿಕೆ ಇರುವ ಈ ಹರಳು ಬಹುಶಃ ಶನಿಯೊಂದಿಗೆ ಜೋಡಣೆ ಹೊಂದಿರುವುದರಿಂದ ಜನಸಾಮಾನ್ಯರಿಗೆ ಭಯ, ಭೀತಿ ಸಹಜವಾಗಿರಬಹುದು ಕೂಡ. ಬಿಡಿ, ಈ ವಿಷಯ. ಹಿಂದೊಂದು ಕಾಲದಲ್ಲಿ ಪುರುಷರ ಕರ್ಣದ್ವಯಗಳಲ್ಲಿ ಶೋಭಿಸುತ್ತಿದ್ದ ವಂಟಿ ಈಗ ಒಕ್ಕಾಲು ಮುಂದಿಟ್ಟು ಯುವಕರ ಒಂದು ಕಿವಿಯಲ್ಲಿ ಸ್ಥಾನ ಗಿಟ್ಟಿಸಿಕೊಂಡಿದೆ. ವಂಟಿಯ ಬದಲಿಗೆ ಕಿವಿ ರಿಂಗೂ ತೂಗಾಡುತ್ತಿದೆ. ಸನಾತನತೆಯ ಸಂಕೇತವಾಗಿದ್ದ ಜುಟ್ಟು ಒಂದಲ್ಲ ಬದಲಾವಣೆಯೊಂದಿಗೆ ರಬ್ಬರ್‌ಬ್ಯಾಂಡ್‌ನಲ್ಲಿ ಬಂಧಿತವಾಗಿ ಯುವಕರ ಫ್ಯಾಷನ್ ಆಗಿರುವಂತೆ ಕರ್ಣಾಭರಣವೂ ಸ್ಥಾನ ಗಿಟ್ಟಿಸಿಕೊಂಡಿದ್ದರಲ್ಲಿ ಆಶ್ಚರ್ಯವಿಲ್ಲ. ಮೊದಲೇ ಹೇಳಿದಂತೆ ಕಾಲಚಕ್ರ ಹೊಸತರ ಕಡೆಗಿನ ತುಡಿತದಲ್ಲಿ ಒಂದೊಮ್ಮೆ ಹೊಸದಾಗಿದ್ದದ್ದು ಹಳಸಿ, ಹಳೆಯದಾಗಿದ್ದು ಮತ್ತೆ ಚಲಾವಣೆಗೆ ಬಂದು... ಹೀಗೆ ಎಷ್ಟು ಉದಾಹರಣೆಗಳು ಬೇಕು ? ಕೈತುಂಬಾ ಝುಣಗುಟ್ಟುವ ಗಾಜಿನ ಬಳೆಗಳು, ಮೂಗುತಿ, ಸೀರೆ ಈಗ ಫ್ಯಾಷನ್

ಪ್ರಿಯ ನೀರೆಯರ ಮೆಚ್ಚಿನ ಉಡುಪು ಅನ್ನುವುದು ಇತ್ತೀಚೆಗೆ ಪತ್ರಿಕೆಯಲ್ಲಿ ಓದಿದ ಸಂಗತಿ. ಕಿವಿ, ಮೂಗು ಚುಚ್ಚಿಸಿಕೊಳ್ಳುವುದು ಆಕ್ಯುಪಂಕ್ಚರ್ ಚಿಕಿತ್ಸಾಕ್ರಮದ ಒಂದು ವಿಧಾನವೂ ಹೌದು ಎನ್ನುವುದು ಕೇಳಿಬಲ್ಲ ಸಂಗತಿ. ಹೀಗೆ ಆಭರಣ ಧರಿಸುವುದರಿಂದ ಕೆಲಕೆಲವು ನರಗಳ ಮೇಲೆ ಒತ್ತಡ ಉಂಟಾಗಿ ದೇಹಾರೋಗ್ಯ, ಬುದ್ಧಿಶಕ್ತಿಯ ಮೇಲೆ ಉಂಟಾಗುವ ವಿವಿಧ ಪರಿಣಾಮಗಳ ಕುರಿತು ವಿವರ ನೀಡುವ ಲೇಖನಗಳಿವೆ.

ಕಿವಿಯ ವಿಷಯ ಮಾತಾಡುವಾಗ ಕಿವಿನೋವನ್ನು ಮರೆಯುವುದುಂಟೆ ? ಚಿಕ್ಕಂದಿನ ನೆನಪು ನಾನಿದ್ದೇನೆ ಎಂದು ಹಣಿಕುತ್ತಿದೆ. ಸಾಸಿವೆಕಾಳು, ಬೆಳ್ಳುಳ್ಳಿಯನ್ನು ಸೇರಿಸಿ ಕಾಯಿಸಿದ ಎಣ್ಣೆಯನ್ನು ಬೆಚ್ಚಗಾಗುವಷ್ಟು ತಣಿಸಿ ಒಂದೊಂದೇ ಹುಂಡನ್ನು ನೋವಿರುವ ಕಿವಿಗೆ ಹನಿಸುವಾಗ ಎಣ್ಣೆ ಕಿವಿಯೊಳಗೆ ಬೀಳುವಾಗಿನ ಕ್ಷಣಕ್ಕೆ ಮೈಯೆಲ್ಲಾ ಕಿವಿಯಾಗಿ ಉಸಿರು ಬಿಗಿ ಹಿಡಿದು ಕಾಯುತ್ತಿದ್ದ ಗಳಿಗೆ, ಗುಳುಗುಳುಗುಟ್ಟುತ್ತಾ ಕಿವಿಯ ಸುರಂಗದ್ವಾರದಲ್ಲಿಳಿದು ಒಳ ಸೇರುತ್ತಿದ್ದ ಎಣ್ಣೆಯ ಹರಿವು, ಈಗ ನೆನಪಿಸಿಕೊಂಡರೆ ಕಚಗುಳಿ ಕೊಡುವ ಅನುಭವಗಳು. ರಾತ್ರಿ ಮಲಗುವಾಗ ಮಂಚಗಳ ಬಳಕೆ ವ್ಯಾಪಕವಾಗಿಲ್ಲದಿದ್ದ ಆ ಕಾಲದಲ್ಲಿ ನೆಲದ ಮೇಲೆ ಲೇಪು ಹಾಸಿ ಮಲಗುವುದು, ಗಾಢ ನಿದ್ದೆಯಲ್ಲಿರುವಾಗ ಯಾವುದೋ ಕೀಟ ಕಿವಿಯ ಒಳಹೊಕ್ಕು ಮುಲುಗುಟ್ಟುವಾಗ ಥಟ್ಟನೆ ಎಚ್ಚರವಾಗಿ, ಮೈ ಬೆವರಿ, ಎದೆ ಧಡಗುಟ್ಟುವುದು, 'ಅಮ್ಮಾ...' ಎನ್ನುವ ಆಕ್ರಂದನ, ಕೊನೆಯಲ್ಲಿ ''ಉಪ್ಪು ನೀರನ್ನು ಕಿವಿಗೆ ಹಾಕಿ, ಈ ವೈದ್ಯದಿಂದ ಕೀಟ ಕಿವಿಯಲ್ಲಿ ಸಾಯುತ್ತದೆ'' ಎನ್ನುವ ಹೇಳಿಕೆ, ಬಾಲ್ಯ ಕಾಲದ ಮತ್ತೊಂದಿಷ್ಟು ಸವಿನೆನಪುಗಳು. ಭತ್ತದ ಮೂಟೆಗಳನ್ನು ಒಂದರಮೇಲೊಂದು ಜೋಡಿಸಿಟ್ಟು ಬೇಕಾದಾಗ ಮಿಲ್ಲಿಗೆ ಹಾಕಿ ಅಕ್ಕಿ ಮಾಡಿಸಿಕೊಳ್ಳುತ್ತಿದ್ದ ಸಂದರ್ಭದಲ್ಲಿ ಭತ್ತದ ಮೂಟೆಗಳಲ್ಲಿ ಹಾತೆಗಳಾಗುವುದು, ಈ ಹಾತೆಗಳು ಕಿವಿ ಸೇರಿಕೊಳ್ಳುವುದು ಎಲ್ಲವೂ ಮಾಮೂಲಿನ ಸಂಗತಿಗಳಾಗಿದ್ದವು. ಜಾನುವಾರುಗಳ ಮೈಮೇಲೆ ಕಚ್ಚಿಕೊಂಡು ರಕ್ತ ಹೀರುವ ಉಣುಗು ಕೆಲವೊಮ್ಮೆ ಮನುಷ್ಯರ ಕಿವಿ ಸೇರಿ, ಒಳ ಭಾಗದಲ್ಲಿ ಕಚ್ಚಿಕೊಂಡು, ಅಲ್ಲೇ ಮೊಟ್ಟೆ ಇಟ್ಟು ಮರಿಗಳಾಗಿ, ಇವು ಕಿವಿಯ ಮುಖಾಂತರ ಮೆದುಳಿನವರೆಗೂ ತಲುಪುತ್ತವೆ ಎನ್ನುವ ಹೇಳಿಕೆ ಜಾನುವಾರು ಕೊಟ್ಟಿಗೆಗಳಿದ್ದ ಹಳ್ಳಿಮನೆಗಳಲ್ಲಿ ಪ್ರಚಲಿತದಲ್ಲಿತ್ತು. ಮನೆ ವೈದ್ಯಕ್ಕೆ ಕಿವಿನೋವು, ಅರೆತಲೆ ನೋವು, ಕ್ಯಾರೇ ಅನ್ನದಿದ್ದಲ್ಲಿ, 'ಎಲ್ಲಾದ್ರೂ ಉಣುಗು ಸೇರ್‍ಕೊಂಡಿರಬಹುದಾ ?' ಎನ್ನುವ ಅನುಮಾನ. ಹಾಗಿದ್ದಲ್ಲಿ ಅದಕ್ಕೆ ಪೇಟೆ ಡಾಕ್ಟರ ಹತ್ತಿರವೇ ಹೋಗಬೇಕಾದ ಅನಿವಾರ್ಯತೆ. ಈಗಿನ ಹಾಗೆ ಮೃದುಹತ್ತಿಯ ಬಡ್ಸ್‌ಗಳಿರದೆ ಕಿವಿಯ ಕುಗ್ಗಿ ತೆಗೆಯಲು ಹಿತ್ತಾಳೆಯ ಕುಗ್ಗೆಕಡ್ಡಿ ಎಲ್ಲರ ಮನೆಯಲ್ಲಿ ಇದ್ದೇ ಇರುತ್ತಿತ್ತು. ಕಿವಿಯೊಳಗಿನ ಮೆದುಭಾಗಕ್ಕೆ ಹೂ ಎಂದೂ, ಕಿವಿಯ ಹೂವಿಗೆ ಪೆಟ್ಟಾದರೆ ಕಿವಿ ಕೆಪ್ಪಾಗುತ್ತದೆಂದೂ, ಪಾಠವಾಗಿರುತ್ತಿದ್ದುದರಿಂದ ಕುಗ್ಗೆಕಡ್ಡಿ ಉಪಯೋಗಿಸುವಾಗ ಆವಶ್ಯಕತೆಗಿಂತ ಹೆಚ್ಚಿನ ಎಚ್ಚರಿಕೆ ಎಲ್ಲರಲ್ಲೂ ಇರುತ್ತಿತ್ತು. ಕುಗ್ಗೆಕಡ್ಡಿ ಅನ್ನುವಾಗ ಅದ್ಯಾಕೋ ಬೆಂಡೋಲೆ ಸ್ವಚ್ಛಗೊಳಿಸಲು ಉಪಯೋಗಿಸುತ್ತಿದ್ದ ವರಾಕೇಸರಿಯ ನೆನಪಾಗುತ್ತಿದೆ. ವರಾಕೇಸರಿ ಅಂದರೆ ವರಾಹಕೇಸರಿ. ಮುಳ್ಳುಹಂದಿಯ ಕಣೆಮುಳ್ಳುಗಳನ್ನು ಒಗ್ಗೂಡಿಸಿ ನಡುಮಧ್ಯೆ ಕಟ್ಟಿ ಬ್ರಶ್ಶಿನಂತೆ ಮಾಡಿಕೊಂಡಿರುತ್ತಿದ್ದ ಸಾಧನ. ಬೆವರಿನ ಕಮಟು ಹಿಡಿದು ಮಂಕಾದ ಹರಳೋಲೆಗಳನ್ನು ಹೆಮ್ಮಕ್ಕಳು ಅಂಟುವಾಳಕಾಯಿಯ ನೀರಲ್ಲಿ ನೆನೆಸಿಟ್ಟು, ವರಾಕೇಸರಿಯಿಂದ ಉಜ್ಜಿ ಫಳಗುಟ್ಟುವಂತೆ ಮಾಡಿಕೊಳ್ಳುತ್ತಿದ್ದರು. ನಮ್ಮ ಸಂಬಂಧಿಯೊಬ್ಬರಿಗೆ ಒಂದು ದುರಭ್ಯಾಸ ಇರುವ ಕುರಿತು ಗುಸುಗುಸು ಇತ್ತು. ಮಣಕು ಹಿಡಿದ ಬೆಂಡೋಲೆಗಳನ್ನು ಅನ್ನದ ಚೆರಿಗೆಯ ನೀರಿಗೆ ಹಾಕಿಡುವುದು. ಅವು ನೀರಿನ ಜೊತೆ ಕಾದು, ಅಕ್ಕಿಯ ಜೊತೆ ಬೇಯುವಾಗ ಕಸ, ಕೊಳೆ ಬಿಟ್ಟುಕೊಂಡು ಶುಭ್ರವಾಗುತ್ತಿದ್ದುವು. ಅನ್ನದ ತಿಳಿ ಬಸಿದಮೇಲೆ ಈ ಬೆಂಡೋಲೆಗಳನ್ನು ಅನ್ನದ ತಪ್ಪಲೆಯಲ್ಲಿ ಹುಡುಕಿ ತೊಳೆದು ತೆಗೆದಿಟ್ಟುಕೊಳ್ಳುವುದು. 'ವ್ಯಾಕ್...' ಅನ್ನಿಸುತ್ತಿದೆಯಾ ? ಕೇಳಿದ ವಿಷಯ ಹೇಳಿದ್ದೇನೆ.

'ಬಿಚ್ಚೋಲೆ ಗೌರಮ್ಮ' ಅನ್ನುವುದು ಕಡುಬಡತನದ ಮುತ್ತೈದೆಯ ಕುರಿತಾದ ಹೇಳಿಕೆ. ಕಿವಿಯಲ್ಲಿ ಒಂದು ಜೊತೆ ಬೆಂಡೋಲೆಗೂ ಗತಿ ಇಲ್ಲ. ವಾಲೆಗರಿಯ ಸುರುಳಿ ಕಿವಿಗಳಿಗೆ ಅಲಂಕಾರ. ಈ ಕುರಿತು ಬರೆಯುತ್ತಿರುವಾಗ ಪೌರಾಣಿಕ ಕಥಾಪಾತ್ರಗಳ ಚಿತ್ರಪಟಗಳ ಬಗ್ಗೆ ನೆನಪಿಸದೆ ಮುಂದೆ ಹೋಗಲಾಗುತ್ತಿಲ್ಲ. ಋಷ್ಯಾಶ್ರಮಗಳಲ್ಲಿ ಲತೆಗಳಂತೆ ಬೆಳೆದು ನಳನಳಿಸುತ್ತಿರುವ ಸೊಬಗಿಯರಿಗೆ ವಿವಿಧ ಜಾತಿಯ ಅರೆಬಿರಿದ ಪುಷ್ಪಗಳೇ ಆಭರಣಗಳು. ಇವರು ಅಡಿಯಿಂದ ಮುಡಿಯವರೆಗೆ ದಿನದಿನವೂ ನವೀಕರಣಗೊಳ್ಳಬೇಕಾದ ಪುಷ್ಪಾಲಂಕೃತ ವನರಾಣಿಯರು. ತಾಳಿ, ಇನ್ನೊಂದೇನೋ ನೆನಪಾಗುತ್ತಿದೆ. ಪುಟ್ಟ ನಕ್ಷತ್ರದಿಂದ ಬೆಂಡೋಲೆಗೆ ಬದಲಾವಣೆಗೊಳ್ಳಲು ಉತ್ಸುಕಳಾದ ಷೋಡಶಿ ಕಿವಿತೂತು ದೊಡ್ಡದಾಗಿಸಿಕೊಳ್ಳಲು ಬೆಂಡಿನ ಸುರುಳಿ ಅಥವಾ ತುಳಸಿ ಕಡ್ಡಿಯನ್ನು ದೊಡ್ಡವರ ಸಲಹೆಯಂತೆ ನಾಲ್ಕೆಂಟು ದಿನ ಕಿವಿಗೆ ಚುಚ್ಚಿಕೊಂಡಿರುತ್ತಿದ್ದಳು. ಇವು ದಿನವೂ ಸ್ನಾನ ಮಾಡುವಾಗ ನೀರು ಹೀರಿಕೊಂಡು ದಪ್ಪಗಾಗಿ ಬೆಂಡೋಲೆ ಧರಿಸಲು ಹುಡುಗಿಯನ್ನು ಅನುವಾಗಿಸುತ್ತಿದ್ದುವು. ದೊಡ್ಡ ದೊಡ್ಡ ಬೆಂಡೋಲೆಗಳಿಂದ ಕಿವಿಯ ರಂಧ್ರ ಹಿಗ್ಗಿ, ಜಗ್ಗಿ, ನೇತಾಡುತ್ತಿರುವಂತಹ ಕರ್ಣಯುಗಳಗಳ ವೃದ್ಧೆಯರು ಅಲ್ಲಲ್ಲಿ ಕಾಣಸಿಗುವುದುಂಟು. ಇಂತಹ ತೂಕದ ಬೆಂಡೋಲೆಗಳನ್ನು ಧರಿಸುವುದು ಸಮಾಜದ ಕೆಲ ವರ್ಗಗಳ ಸಂಪ್ರದಾಯ. ಕುತ್ತಿಗೆಯ ಸರದಂತೆ ಕಿವಿಯ ಬೆಂಡೋಲೆಗಳೂ ಕಳ್ಳರಿಗೆ ಸುಲಭದ ತುತ್ತು. ಬೆಂಡೋಲೆ ಕಸಿಯುವ ಭರದಲ್ಲಿ ಕಿವಿ ಹರಿದುಹೋಯಿತೆಂಬ ಸುದ್ದಿ ಬೇಕಾದಷ್ಟು ಸಲ ಕೇಳಿದ್ದಿದೆ.

ಸಣ್ಣದೊಂದು ಕತೆ ಹೇಳಬೇಕೆನಿಸುತ್ತಿದೆ. ಒಬ್ಬ ರಾಜನಿಗೆ ನೆರೆಯ ರಾಜನಿಂದ ಮೂರು ಪ್ರತಿಮೆಗಳು ಕಾಣಿಕೆಯಾಗಿ ಬಂದುವಂತೆ. ಮೂರೂ ಒಂದೇ ಥರ. ಸೂಕ್ಷ್ಮಾವಲೋಕನಕ್ಕೆ ಸಣ್ಣದೊಂದು ವ್ಯತ್ಯಾಸವೂ ಕಾಣುತ್ತಿಲ್ಲ. 'ಇವುಗಳಲ್ಲಿನ ವ್ಯತ್ಯಾಸ ಕಂಡು ಹುಡುಕಿ' ಎನ್ನುವುದು ಕಾಣಿಕೆ ಕಳಿಸಿದ ರಾಜನ ಸವಾಲು. ಈ ರಾಜ್ಯದಲ್ಲಿ ಬುದ್ಧಿವಂತರಿದ್ದಾರೆಯೇ ಎಂದು ಕಂಡು ಹುಡುಕುವ ಹುನ್ನಾರು. ರಾಜನ ತಲೆ ಕೆಟ್ಟು ಮೊಸರಾಯ್ತು. ಹೀಗಿರುವಾಗ ಆಸ್ಥಾನದ ಬುದ್ಧಿವಂತನೊಬ್ಬ ತಂತಿಯ ತುಂಡೊಂದನ್ನು ತರಿಸಿದ. ಮೊದಲ ಪ್ರತಿಮೆಯ ಕಿವಿಯಲ್ಲಿ ತಂತಿ ತೂರಿಸಿದಾಗ ಅದು ಬಾಯಿಯಿಂದ ಹೊರಬಂತು. ಎರಡನೆಯದರಲ್ಲಿ ಕಿವಿಯ ತಂತಿ ಮತ್ತೊಂದು ಕಿವಿಯಿಂದ ಹೊರಬಿತ್ತು. ಮತ್ತು ಮೂರನೆಯದರಲ್ಲಿ ಪ್ರತಿಮೆಯಿಂದಾಚೆ ಹೊರಬರಲಿಲ್ಲ. ಅಧಮ, ಮಧ್ಯಮ, ಉತ್ತಮ ವ್ಯಕ್ತಿತ್ವದ ಪ್ರತೀಕಗಳಂತೆ ಪ್ರತಿಮೆಗಳನ್ನು ರಚಿಸಲಾಗಿತ್ತು ಎನ್ನುವುದು ಕಥೆ. 'ಹಿತ್ತಾಳೆಕಿವಿ'ಯ ವಿಷಯ ತಮಗೆಲ್ಲಾ ಗೊತ್ತೇ ಇದೆ. 'ಕಿವಿ ಕಚ್ಚುವುದು' ಕೆಲವರ ದುರಭ್ಯಾಸ ಮತ್ತು ಇಂತಹ ಕೇಳಿಕೆ ಮಾತುಗಳನ್ನು ನಂಬುವುದು ಹಿತ್ತಾಳೆಕಿವಿಯವರ ದೌರ್ಬಲ್ಯ. ಕೇಳಿಕೆ ಮಾತುಗಳಿಗೆ ಕಿವಿ ಜೋಲು ಬಿಡುವುದರಿಂದ ಉಂಟಾಗುವ ಅನರ್ಥಗಳು ಅಷ್ಟಿಷ್ಟಲ್ಲ.

ಕಿವುಡರೂ ಮೂಕರೂ ಆಗಿರಬೇಕಾದ ಸಂದರ್ಭ ಈಗಿಲ್ಲ. ಕಿರಿವಯಸ್ಸಿನಲ್ಲಿ ಸೂಕ್ತ ಕಲಿಕಾಕ್ರಮದಿಂದ ಕಿವಿ ಕೇಳದಿದ್ದರೂ ತುಟಿ ಚಲನೆಯನ್ನು, ಆಂಗಿಕ ಅಭಿನಯವನ್ನು, ಗಮನಿಸಿ ಅವರು ಮಾತಾಡಬಲ್ಲರು ಮತ್ತು ಹೇಳಿದ್ದನ್ನು ಅರ್ಥ ಮಾಡಿಕೊಳ್ಳಬಲ್ಲರು. ಈ ಕುರಿತಾದ ಜಾಗೃತಿಯ ಆವಶ್ಯಕತೆಯೊಡನೆ ಆರ್ಥಿಕ, ಸಾಂಸಾರಿಕ ಸ್ಥಿತಿಗತಿಗಳೂ ತಳುಕು ಹಾಕಿಕೊಂಡಿರುವುದು ನಮ್ಮ ಸಮಾಜದ ದುರಂತ. ಇಳಿವಯಸ್ಸಿನ ಕಿವುಡುತನಕ್ಕೆ ತಕ್ಕ ಶ್ರವಣ ಯಂತ್ರಗಳು ಲಭ್ಯವಿರುವುದರಿಂದ ಕಿವುಡು ಒಂದು ವೈಕಲ್ಯವಾಗಿ ಉಳಿದುಕೊಂಡಿಲ್ಲದಿರುವುದು ಸಮಾಧಾನದ ಸಂಗತಿ.

ಗರ್ಭಿಣಿ ಹೆಣ್ಣು ಬಯಸಿದ ತಿನಿಸನ್ನು 'ಬಯಕೆ'ಯ ಹೆಸರಲ್ಲಿ ತಯಾರಿಸಿಕೊಟ್ಟು ಅವಳನ್ನು ತೃಪ್ತಿಪಡಿಸುವುದು ನಮ್ಮಲ್ಲಿಯ ಪದ್ಧತಿ. ಹೀಗೆ ಬಯಕೆ ತೀರಿಸದಿದ್ದರೆ ಹುಟ್ಟಿದ ಮಗುವಿಗೆ ಕಿವಿ ಸೋರುತ್ತದೆಯಂತೆ ಎನ್ನುವ ಹೇಳಿಕೆ ಉಂಟು...

ಯಾರೋ ನಾಲ್ಕಾರು ಪ್ರಾಯದ ಯುವಕರು ಕಿವಿ ಚುಚ್ಚಿಸಿಕೊಂಡು ಓಡಾಡುತ್ತಿದ್ದುದನ್ನು ನೋಡಿದ್ದರ ಫಲಶ್ರುತಿ ಈ ಕರ್ಣ ಕಾರಣ. ಆ ಸಂದರ್ಭದಲ್ಲಿ ಹೊಳೆದದ್ದಿಷ್ಟು. ಹೊಳೆಯದೆ ತಪ್ಪಿಸಿಕೊಂಡದ್ದು ಇನ್ನೆಷ್ಟೋ...

**ವಸುಮತಿ ಉಡುಪ**

ನಂ. ೧೨೦, ೩ನೇ ಅಡ್ಡರಸ್ತೆ, ವಿಜಯನಗರ ರೈಲ್ವೆ ಬಡಾವಣೆ, ಮೈಸೂರು - ೫೭೦ ೦೧೬

# ಆಪರೇಟರ್ ಶಂಕ್ರಣ್ಣನ ಹಾಡು-ಪಾಡು

**ಎಸ್. ಬಿ. ಜೋಗುರ**

**ಶಂಕರನ ಅವ್ವ ಸುಡೊ ಬಿಸಿ... ಬಿಸಿ... ರೊಟ್ಟಿ ತಟ್ಟಿಗೆ ಬೀಳೊ ಮೊದಲೇ ಖಾಲಿ ಆಗತಾ ಇದ್ದು. ಅವತ್ತೊಂದಿನ ಮೂರ್ನಾಲ್ಕು ಧಾಂಡಿಗರು ಬಂದು, ಎಂಟತ್ತು ರೊಟ್ಟಿ ತಿಂದು, ನಶೆದಾಗ ಹ್ಯಾಂಗ ಬೇಕು ಹಾಂಗ ಮಾತಾಡಿ, ದುಡ್ಡ ಕೊಡದೇ ಹೋದರು. ಶಂಕರ ಏನೂ ಅನ್ನಲಿಲ್ಲ. ಪಕ್ಕದ ಗಾಡಿಯವರು "ಅವರು ಬಂದರೆ ಸುಮ್ಮನೇ ಕೊಡ್ತಾ ಇರಬೇಕು. ದುಡ್ಡು ಗಿಡ್ಡು ಕೇಳಿದರೆ ನಿನ್ನ ಅಂಗಡಿ ಜೋಡಿ ನಿನ್ನ ಕೈಕಾಲೂ ನೆಟ್ಟಗಿರುವಂಗಿಲ್ಲ"**



**ಈ**ಶ್ವರ್ ಚಿತ್ರಮಂದಿರ ಮದುವಣಗಿತ್ತಿಯ ಹಾಗೆ ಸಿಂಗಾರಗೊಂಡಿದೆ.

ಬೆಳಿಗ್ಗೆ ಗೇಟಿಗೆ ಬಿಗಿದ ಪುಟ್ಟ ಬಾಳೆದಿಂಡುಗಳು, ಮಾವಿನ ತೊಳಲು, ತೆಂಗಿನ ಗರಿ ಅದ್ಯಾಕೋ ಮ್ಯಾಟ್ನಿ ಶೋ ಶುರು ಆಗೋ ಮೊದಲೇ ಮುಖ ಕಿವುಚಿಕೊಂಡಿದ್ದವು.

ಥೇಟರ್ ನೆತ್ತಿಯ ಮೇಲಿನ ಬುಂಗಾದಲ್ಲಿ ನಿನ್ನಿಂದಲೇ... ನಿನ್ನಿಂದಲೇ... ಅನ್ನೋ ಹಾಡು ಒತ್ತರಿಸಿ ಬರುತ್ತಿತ್ತು.

ಜನ ಥೇಟರ್ ಮುಂದಿನ ಬಯಲಲ್ಲಿ ಜಮಾಯಿಸುತ್ತಿದ್ದರು.

ಬಹುತೇಕರ ಕಣ್ಣುಗಳು ಎದುರು ಬಿಗಿದ ಕಟ್‌ಔಟ್ ಕಡೆಗೆ ಹೊರಳಿ ಅಗಲಗೊಳ್ಳುತ್ತಿದ್ದವು.

ಅದು ಮೊದಲ ದಿನದ ಮೊದಲ ಪ್ರದರ್ಶನ.

ಅಲ್ಲಿ ನೆರೆದ ಜನರನ್ನು ನೋಡಿದರೆ ತಕ್ಕಮಟ್ಟಿಗೆ ಕಲೆಕ್ಷನ್ ಆಗುವದರಲ್ಲಿ ಯಾವ ಸಂಶಯವೂ ಇರಲಿಲ್ಲ.

ಈ ಚಿತ್ರಮಂದಿರದಲ್ಲಿ ಮೊದಲ ಮತ್ತು ಎರಡನೇ ದಿನ ಮಾತ್ರ ಕೌಂಟರಲ್ಲಿ ಕುಳಿತವನ ಕೈಗಳು ಚುರುಕಾಗುತ್ತಿದ್ದವು. ಇನ್ನೇನು ಮ್ಯಾಟ್ನಿ ಶೋ ಶುರುವಾಗಲು ಕೇವಲ ಅರ್ಧ ಘಂಟೆ ಮಾತ್ರವಿದೆ. ಮ್ಯಾನೇಜರ್ ಕಂ ಮಾಲಿಕ ಅನ್ನೋ ಮನುಷ್ಯ ಮಾತ್ರ ಅದೇಕೋ ಒಂದೇ ಸವನೇ ಗಡಿಬಿಡಿಯಿಂದ ಅತ್ತಿಂದಿತ್ತ ಓಡಾಡುತ್ತಿದ್ದ.

ಸಿನೇಮಾ ನೋಡಲು ಬಂದ ಹಳ್ಳಿಯ ಜನ ಅವನ ಕಿವಿಗೆ ಬೀಳೋ ಹಾಗೆ 'ಇವರೇ ಈ ಥೇಟರ್ ಮಾಲಿಕರು' ಅಂತ ಮಾತನಾಡಿದ್ದು ಕೇಳಿ ಆತನ ಹೆಜ್ಜೆಗಳು ಇನ್ನಷ್ಟು ನೇಟಾಗುತ್ತಿದ್ದವು. ಬರಬರನೆ ಮುಖ್ಯ ಗೇಟ್ ಬಳಿಗೆ ಹೋಗಿ, ಆ ಬದಿ ಈ ಬದಿ ಹೊರಳಿ ಮತ್ತೆ ಅದೇ ವೇಗದಲ್ಲಿ ಹಿಂತಿರುಗಿ ಬಂದು ಗೇಟ್‌ಕೀಪರ್ ಒಬ್ಬನನ್ನು ಕೂಗಿ "ಆಪರೇಟರ್ ಎಲ್ಲಿ ಸತ್ತ ನೋಡು, ಸಿನೇಮಾ ಶುರು ಆಗೋ ಟೈಮ್ ಆಗಲಿಕ್ಕ ಬಂದರೂ ಪತ್ತೆ ಇಲ್ಲ. ಹೇಳಿಯಾದರೂ ಹೋಗಬೇಕಲ್ಲ? ಇವರಿಗೆಲ್ಲಾ ಸೊಕ್ಕ ಬಂದೈತಿ" ಅನ್ನೋಂತ ಮ್ಯಾನೇಜರ್ ಎಂದು ಬೋರ್ಡ್ ಇರೋ ಕೋಣೆ ಸೇರಿದ. ಗೇಟ್‌ಕೀಪರ್ ಸೀನೂ ಆಪರೇಟರ್ ಶಂಕ್ರಣ್ಣನ ಮನೆಗೆ ಗಡಬಡಿಸಿ ಬಂದರೆ ಮನೆಗೆ ಬೀಗ! ಪಕ್ಕದ ಮನೆಯಲ್ಲಿ ವಿಚಾರಿಸಿದಾಗ "ಅವರ ತಂದೆಗೆ ಹುಷಾರಿರಲಿಲ್ಲ ಆಸ್ಪತ್ರೆಗೆ ಹೋಗ್ಯಾರ" ಅನ್ನೋ ಉತ್ತರ.

ಆಪರೇಟರ್ ಶಂಕ್ರಣ್ಣ ಹಿರೇಕೆರೂರಿನ ಸರಕಾರಿ ಆಸ್ಪತ್ರೆಯಲ್ಲಿ ಹೊರರೋಗಿಗಳ ವಿಭಾಗದ ಕೋಣೆ ಮುಂದೆ ಇರೋ ಬೆಂಚ್ ಮೇಲೆ ಕಲ್ಲಾಗಿದ್ದ. ಒಳಗಡೆ ತಂದೆಯ ಮೆತ್ತನೆಯ ನರಗಳಿಗೆ ಗ್ಲುಕೋಸ್ ಹನಿ ಹನಿಯಾಗಿ ಇಳಿಯುತ್ತಿತ್ತು. ತಾಯಿ ಅಲ್ಲೇ ಪಕ್ಕದಲ್ಲಿ ಅತ್ಯಂತ ನಿತ್ರಾಣಾದವಳಂತೆ ಮಂಚದ ಬದಿಗೆ ಒರಗಿ ಗಂಡನ ತಲೆದಿಂಬನ್ನು ಸರಿಪಡಿಸುತ್ತಿದ್ದಳು. ಆಗಾಗ ಬಂದು ಮುಕುರುವ ನೊಣಗಳಿಗಾಗಿ ಆಕೆಯ ಕೈ ಅಲುಗಾಡುತ್ತಿತ್ತು. ಆಕೆಯ ಬಳೆಗಳು ನಾದ ಕಳೆದುಕೊಂಡಿದ್ದವು.

ಲಗುಬಗೆಯಿಂದ ಬಂದ ಸೀನೂ "ಏನು ಶಂಕ್ರಣ್ಣ ನೀನು, ಸಿನೇಮಾ ಟೈಮು ಇಲ್ಲಿ ಬಂದು ಕುಂತಿಯಲ್ಲ! ಮಾಲಕ್ ಒಂದೇ ಸವನ ಹೊಡ್ಕೋಳಾಕತ್ತಾನ. ಮೊದಲ ದಿನಾ ಮೊದಲ ಶೋ ಬ್ಯಾರೆ, ನಡಿ ಹೋಗಮ್ಮು. ಹ್ಯಾಂಗೂ ಅವ್ವ ಇಲ್ಲೇ ಇರ್ತಾಳ" ಅಂದ. ಹಂಗ ನೋಡದರ ಶಂಕ್ರಣ್ಣಂದೇ ಒಂದು ದೊಡ್ಡ ಸಿನೇಮಾ ಕಥೆ ಆಗಿತ್ತು. ಅವನಪ್ಪಗ ದಮ್ಮು ಸೇರಕೊಂಡಿತ್ತು. ಅವತ್ತು ಇದ್ದಕ್ಕಿದ್ದಂಗ ಮುಂಜಾನೆ ಎದಿ ಕಟ್ಟದಂಗಾಗಿ ಮ್ಯಾಲಿನ ಉಸರ ಮ್ಯಾಲ... ಕೆಳಗಿನ ಉಸರ ಕೆಳಗ ಆಗಿ ಇನ್ನೇನು ಮುಗದೇ ಹೊಯ್ತು ಅನ್ನೋದರೊಳಗ ರಿಕ್ಷಾ ಮಾಡಕೊಂಡು ಆಸ್ಪತ್ರೆಗೆ ಕರಕೊಂಡು ಬಂದ. ಕೂಡಲೇ ಆಕ್ಸಿಜನ್ ಕೊಟ್ಟಮ್ಯಾಲ ಕಣ್ಣಾಗ ಜೀವ ಮತ್ತ ತೇಲದಂಗ ಆಗಿತ್ತು. ಆ ದಮ್ಮು ಅಪ್ಪನ ಮೈಯಾಗ ಹೊಕ್ಕೊಂಡು ಬಾಳ ದಿನದಿಂದ ಅವನ್ನ ಒಳಗೊಳಗ ಮೆತ್ತಗ ಮಾಡತಾ ಬಂದಿತ್ತು. ಆ ಯೋಚನೆಯೊಳಗೇ ಅಂವಾ ಕಳದುಹೋಗಿದ್ದ. ಈಗ ಸೀನೂ ಬಂದು ಹೇಳದ ಮ್ಯಾಲ ಹೆಗಲ ಮ್ಯಾಲಿನ ಹೊಣೆಗಾರಿಕೆ ತಟ್ಟಂತ ಅರಿವಾಗಿ, ಹೊರಳಿ ಅವ್ವನ ಕಡಿ ನೋಡದಾ. ಅವ್ವ ಹೋಗು ಅನ್ನೋ ಥರಾ ತಲಿ ಆಡಿಸಿದಳು. ಸೀನೂ ತನ್ನ ಸೈಕಲ್ ಹಿಂದ ಕುಳ್ಳರಿಸಿಕೊಂಡು ಪೆಡಲ್ ತುಳದ.

ಇತ್ತ ಥೇಟರ್ ಮಾಲೀಕನ ಕಣ್ಣು ಕೆಂಪಾಗಿದ್ದು, ದೇಶಾವರಿ ಹೈಗಳು ಜಾಯಿಗಿ ಬಂದು ತಲಿ ಸಿಡಗಿಟ್ಟು ಆದರೂ ತಡಕೊಂಡ. ಥೇಟರ್‌ದೊಳಗ ಜಿದ್ದಿಗಿ ಬಿದ್ದವರ ಹಾಗೆ ಸೀಟಿ ಬ್ಲ್ಯಾಕ್ ಮತ್ತು ಫಸ್ಟ್ ಕ್ಲಾಸ್ ಹಾಗೂ ಸೆಕೆಂಡ್ ಕ್ಲಾಸ್ ಫುಲ್ ಆಗಿತ್ತು. ಬಾಲ್ಕನಿಯೊಳಗ ಮುಂದಿನ ಒಂದೆರಡು ಸಾಲು ಖಾಲಿ ಉಳಿದಿದ್ದು ಬಿಟ್ಟರೆ ಅವತ್ತು ಗಲ್ಲಾ ಪೆಟ್ಟಿಗೆ ಫುಲ್ ಆಗಿತ್ತು. ಬೇಗ ಬೇಗ ರೀಲ್ ಸುತ್ತಿ ಲೈಟ್ ಆಫ್ ಆಗಿದ್ದೇ ಮತ್ತೆ ಥೇಟರ್ ತುಂಬಾ ಕಿರ್ರೋ... ಅನ್ನೋ ಸದ್ದು. ಶುರು ಮಾಡಲೇ ಅನ್ನೋ ಅವಾಜ್‌ದಿಂದ ಹಿಡದು ಬೈಗುಳಗಳೂ ಇರುತ್ತಿದ್ದವು. ಶಂಕ್ರಣ್ಣ ಸಿನೇಮಾ ಶುರು ಮಾಡಿ ಕಿಂಡಿಯೊಳಗ ಮುಖ ಇಟ್ಟು ಪರದೆ ಮೇಲೆ ಕಣ್ಣಾಡಿಸಿದರೆ ಅಲ್ಲೂ ಅವರ ತಂದೆಯ ಗೋಳಿನ ಚಿತ್ರಣವೇ ಕಾಣುತ್ತಿತ್ತು. ನಿಧಾನವಾಗಿ ಹೊರಗೆ ಬಂದು ರಸ್ತೆಯ ಮೇಲೆ ಕಣ್ಣು ಹಾಯಿಸಿದ. ಥೇಟರ್ ಮಾಲಿಕನ ಮಗಳು ಲತಾ ಕೈಯಲ್ಲಿ ಊಟದ ಡಬ್ಬಿ ಹಿಡಕೊಂಡು ಬರುತ್ತಿರುವದು ಕಣ್ಣಿಗೆ ಬಿತ್ತು. ಪ್ರತಿನಿತ್ಯ ಅವಳೇ ಮಾಲಿಕರಿಗೆ ಊಟ ತೆಗೆದುಕೊಂಡು ಬರುವವಳು. ಸಿನೇಮಾ ಬದಲಾದಾಗ ಒಂದು ಸುತ್ತು ಮೇಲೆ ಹತ್ತಿ ಬಾಲ್ಕನಿಯೊಳಗೆ ನಿಂತು ಅವತ್ತಿನ ಕಲೆಕ್ಷನ್ ಬಗ್ಗೆ ಒಂದು ಅಂದಾಜು ಹಾಕುವವಳು. ಹೋಗುವಾಗ ಶಂಕ್ರಣ್ಣನನ್ನು ಮಾತಾಡಿಸಿ ''ನಿಮ್ಮ ತಂದೆ ಆರೋಗ್ಯ ಈಗ ಹೇಗಿದೆ ?'' ಅಂತ ಕೇಳುವವಳು. ಅವಳು ಹಾಗೆ ಕೇಳಿದ್ದು ತನ್ನ ಇಡೀ ಬಂಧು-ಬಳಗವೇ ಕೇಳಿದಷ್ಟು ಸಂತಸ ಅವನಿಗಾಗುತ್ತಿತ್ತು. ಚಿಕ್ಕ ವಯಸ್ಸಿನಲ್ಲಿಯೇ ಅಪಘಾತದಲ್ಲಿ ಗಂಡನನ್ನು ಕಳೆದುಕೊಂಡ ಲತಾ ಬಿಸಿಲು ಬರೋ ಮುಂಚೆಯೇ ಬಾಡಿದ ಹೂವಿನಂಗಿದ್ದಳು. ಥೇಟರಲ್ಲಿರೋ ಎಲ್ಲಾ ಗೇಟ್‌ಕೀಪರ್‌ಗಳನ್ನು, ಅಲ್ಲಿ ಕುಳಿತು ತಿಂಡಿ ಮಾರುವವರನ್ನು, ಕಸಗುಡಿಸುವವರನ್ನು ಅತ್ಯಂತ ಮಾನವೀಯವಾಗಿ ಮಾತನಾಡಿಸುವವಳು. ಪ್ರತಿ ದೀಪಾವಳಿಯಲ್ಲಿ ಎಲ್ಲರಿಗೂ ಬಟ್ಟೆ ತರಲು ತಂದೆಗೆ ಶಿಫಾರಸು ಮಾಡುವವಳು.

ಒಂದು ವಾರದಲ್ಲಿ ಥೇಟರ್ ಖಾಲಿ. ಶಂಕ್ರಣ್ಣ ಎಂದಿನಂತೆ ರೀಲ್ ಸುತ್ತಿ ರೆಡಿ ಇಟ್ಟು ಕಿಂಡಿಯಲ್ಲಿ ಮುಖವಿಟ್ಟು ಥೇಟರ್ ಒಳಗಿನ ಖುರ್ಚಿಗಳ ಮೇಲೆ ದೃಷ್ಟಿ ಬೀರಿದ. ಬಾಲ್ಕನಿಯಲ್ಲಿ ನಾಲ್ಕೇ ಜನ. ಕೆಳಗಡೆ ಒಂದು ಹತ್ತು ಹದಿನೈದು ಜನ. ಒಟ್ಟು ಎಣಿಸಿದರೆ ಇಪ್ಪತ್ತು ಜನ. ಮೊದಲ ದಿನದ ಸಿಳ್ಳುಗಳು ಎರಡನೇ ದಿನದಿಂದಲೇ ಕರಗುತ್ತಾ ಬಂದು ಈಗ ಎಲ್ಲವೂ ಸ್ತಬ್ಧ. ಈಗೀಗ ಎಂಥದೇ ಸಿನೇಮಾ ಬಂದರೂ ಹೆಚ್ಚೆಂದರೆ ಎರಡು ವಾರ. ಹೀಗಾಗಿ ಮಾಲಿಕ ಪರಮೇಶಪ್ಪನಿಗೂ ಮೊದಲಿನ ಉಮೇದು ಉಳಿದಿಲ್ಲ. ಕೆಲ ಬಾರಿ ಒಂದು ದಿನದ ಗಲ್ಲಾ ಪೆಟ್ಟಿಗೆ ಮೂರು ನೂರು ರೂಪಾಯಿ ದಾಟದಿರುವದೂ ಇದೆ. ಆ ಕಾರಣದಿಂದಾಗಿಯೇ ಅನೇಕ ಬಾರಿ ಈ ಸಿನೇಮಾ ಮಂದಿರ ಕೆಡವಿ, ಒಂದು ಕಲ್ಯಾಣ ಮಂಟಪ ನಿರ್ಮಿಸುವ ಬಗ್ಗೆಯೂ ಯೋಚಿಸಿಯಾಗಿದೆ. ಹಾಗಾಗಿಯೇ ಕಳೆದ ಅನೇಕ ವರ್ಷಗಳಿಂದ ಚಿತ್ರಮಂದಿರಕ್ಕೆ ಸುಣ್ಣಬಣ್ಣ ಬಳಿಯುವ ಗೋಜಿಗೂ ಹೋಗಿಲ್ಲ. ಸಿನೇಮಾ ಮಂದಿರ ಅಂದಗೇಡಿಯಾಗಿ ಕಾಣುತ್ತದೆ. ಚಿತ್ರ ಮಂದಿರದ ಒಳಗಡೆ ಹಾಯಾಗಿ ಕುಳಿತು ಸಿನೇಮಾ ನೋಡುವ ಸ್ಥಿತಿಯೂ ಇಲ್ಲ.

ಶಂಕ್ರಣ್ಣ ಹಿರೇಕೆರೂರ ತಾಲ್ಲೂಕಿನ ಕಡೂರು ಗ್ರಾಮದವನು. ತಂದೆ ತಾಯಿಗೆ ಒಬ್ಬನೇ ಮಗ. ಹೇಳಿಕೊಳ್ಳುವಂಥ ಆಸ್ತಿಯೂ ಇಲ್ಲ. ಅಷ್ಟಾಗಿ ಕಲಿತವನೂ ಅಲ್ಲ. ಹಿರೇಕೆರೂರಿಗೆ ಬಂದು ಅದಾಗಲೇ ಹದಿನೈದು ವರ್ಷಗಳು ಉರುಳಿದವು. ಮೊದಲು ಗೇಟ್‌ಕೀಪರ್ ಆಗಿ ಈಶ್ವರ್ ಚಿತ್ರಮಂದಿರ ಸೇರಿಕೊಂಡ ಶಂಕ್ರಣ್ಣ ಆಗ ಆಪರೇಟರ್ ಆಗಿದ್ದ ಕಾಸೀಮ್ ಬಳಿ ಅಲ್ಪ ಸ್ವಲ್ಪ ಆ ವಿದ್ಯೆ ಕಲಿತು, ಅವನು ಬಿಟ್ಟ ನಂತರ ಅವನೇ ಆ ಜಾಗೆ ತುಂಬಿದ. ಮೊದಮೊದಲು ಕೇವಲ ಐದುನೂರು ರೂಪಾಯಿಗೆ ಕೆಲಸ ಮಾಡಿದ ಶಂಕ್ರಣ್ಣ ಈಗ ತಿಂಗಳಿಗೆ ಸಾವಿರದಾ ಐದು ನೂರು ರೂಪಾಯಿ ಸಂಬಳ ಪಡೆಯುತ್ತಾನೆ. ಅಪ್ಪನ ಜಡ್ಡು ಜಾಪತ್ರಿ ಎಂದು ಈಗೀಗ ಹೆಚ್ಚು ಹಣ ಖರ್ಚಾಗುತ್ತಿದೆ. ಬರೋ ಸಂಬಳ ಸಾಲುತ್ತಿಲ್ಲ. ಬಾಡಿಗೆ ಮನೆ, ಪ್ರತಿಯೊಂದನ್ನು ಕೊಳ್ಳಬೇಕು. ಬಾಳ ದಿನಗಳಿಂದ ತುಸು ಸಂಬಳ ಹೆಚ್ಚು ಮಾಡಲು ಮಾಲಿಕ ಪರಮೇಶಪ್ಪನನ್ನು ಕೇಳಬೇಕು ಅಂದರೂ ಖಾಲಿ ಥೇಟರ್ ನೋಡಿ ಮನಸಾಗುವದಿಲ್ಲ. ಆದರೂ ಒಂದು ಬಾರಿ ಮನಸು ಗಟ್ಟಿ ಮಾಡಿ ''ಎಲ್ಲಾ ಕೊಂಡು ತಗೋಬೇಕು, ಮನೆ ಬಾಡಿಗೆ, ಕರಂಟ್ ಬಿಲ್ಲು ಬಟ್ಟೆಬರೆ ಸಾಲದಕ್ಕೆ ಅಪ್ಪ ಬ್ಯಾರೆ ಮ್ಯಾಲಿಂದ ಮ್ಯಾಲೆ ದವಾಖಾನೆ... ತುಸು ಸಂಬಳ ಹೆಚ್ಚು ಮಾಡಿದರೆ...'' ಅನ್ನೋದರೊಳಗ ಪರಮೇಶಪ್ಪ ಶಂಕ್ರಣ್ಣನ ಕೈ ಹಿಡಿದು ಎಳಕೊಂಡು ಹೋಗಿ ಥೇಟರ್ ಒಳಗೆ ನಿಲ್ಲಿಸಿ, ''ಎಷ್ಟು ಜನ ಇದ್ದಾರೆ ಎಣಿಸು. ಜೊತೆಗೆ ಕಾರ್ಬನ್ ಬೆಲೆ ಎಷ್ಟು? ಹತ್ತು ಜನ ಕಾರ್ಮಿಕರು, ಲೈಟ್ ಬಿಲ್ಲು, ಪೆಟ್ಟಿಗೆ ಬಾಡಿಗೆ ಎಲ್ಲಾ ಯೋಚನೆ ಮಾಡಿದರೆ... ಈ ಥೇಟರ್ ಕೆಡವಿಬಿಡಬೇಕು ಅನ್ನಿಸ್ತದೆ. ಇದೇ ಕೊನೆ ಇನ್ನೊಂದ್ಸಾರಿ ಸಂಬಳ ಹೆಚ್ಚು ಮಾಡಲಿಕ್ಕೆ ಹೇಳದರೆ'' ಅನ್ನೋದರೊಳಗ ಮಗಳು ಲತಾ ಕೈಯಲ್ಲಿ ಬುತ್ತಿ ಹಿಡಿದು ''ಸ್ವಲ್ಪ ಹೆಚ್ಚು ಮಾಡು ಪಾಪ!'' ಎಂದು ದನಿಗೂಡಿಸಿದರೂ ಪರಮೇಶಪ್ಪ ಕರಗಿರಲಿಲ್ಲ.

ಸಿನೇಮಾ ನಡೆದಿತ್ತು. ರೀಲು ಬರ್... ಎನ್ನುವ ಸದ್ದು. ಶಂಕ್ರಣ್ಣ ಹೊರಗೆ ತಿಂಡಿ ಮಾರುವ ಹುಡುಗರ ಜೊತೆ ತಮಾಷೆ ಮಾಡುತ್ತಾ ಬೀಡಿ ಸೇದುತ್ತಾ ನಿಂತಿರುವ ಗಳಿಗೆಯಲ್ಲಿ ಗೇಟ್‌ಕೀಪರ್ ಸೀನೂ ಓಡಿಬಂದು ''ಶಂಕ್ರಣ್ಣ ನಿಮ್ಮ ತಂದೆ ತುಂಬಾ ಸೀರಿಯಸ್ ಅಂತೆ'' ಎಂದು ಏದುಸಿರು ಬಿಡುತ್ತಾ ಹೇಳಿದ. ''ಸ್ವಲ್ಪ ನೋಡ್ತಾ ಇರು, ರೀಲ್ ಸುತ್ತಿ ಇಟ್ಟೇನಿ. ಹ್ಯಾಂಗೂ ನಿನಗ ಬರತೈತಿ, ಬರೀ ಹಾಕೋದು ಅಷ್ಟೇ'' ಎಂದವನೇ ಓಡಿದ. ಮನೆಗೆ ಹೋಗುವಷ್ಟರಲ್ಲಿ ಜೀವ ತಣ್ಣಗಾಗಿತ್ತು. ತುಸು ಹೊತ್ತು ಕಳೆದಾದ ಮೇಲೆ ಮಾಲಿಕ ಪರಮೇಶಪ್ಪ, ಮಗಳು ಲತಾ ಬಂದರು. ಶಂಕ್ರಣ್ಣನ ಹೆಗಲ ಮೇಲೆ ಕೈ ಇಟ್ಟು ''ಆಗಿದ್ದು ಆಗಿ ಹೋಯ್ತು, ಪುಣ್ಯ ಮಾಡಕೊಂಡಾರ. ತ್ರಾಸು ಯಾರಿಗೂ ಬ್ಯಾಡ ಮುಂದಿನ ಕಾರ್ಯ ನೋಡು'' ಎಂದು ಅಂತ್ಯಕ್ರಿಯೆಗೆ ಅಣಿಗೊಳಿಸಿದರು.

ಮಗನ ಮದುವೆ ನೋಡಬೇಕು ಎಂದು ತಂದೆಯ ಆಸೆಯಾಗಿತ್ತು. ಕೊನೆಯ ಪಕ್ಷ ತನ್ನ ಪಾಲಿಗಾದರೂ ಆ ಭಾಗ್ಯ ಇದೆಯೋ ಇಲ್ಲವೋ ಎಂದು ಶಂಕ್ರಣ್ಣನ ತಾಯಿ ಗೋಗರೆಯತೊಡಗಿದಳು. ನಮ್ಮ ಊರಲ್ಲಿ ಒಬ್ಬರು ಸಂಬಂಧಿಗಳಿದ್ದಾರೆ, ಅವರಿಗೆ ಒಬ್ಬಳೆ ಮಗಳು. ಅವರೇನು ಹೊರಗಿನವರಲ್ಲ ಎಂದೆಲ್ಲಾ ಹೇಳಿ ಮಗನನ್ನು ಒಪ್ಪಿಸಿದಳು. ಆದರೆ ಶಂಕ್ರಣ್ಣ ''ನೋಡಮ್ಮಾ ಈಗೆಲ್ಲಾ ಕಾಲ ಹ್ಯಾಂಗಿದೆ ಅಂದರೆ ನಗುವಾಗ ಎಲ್ಲ ನೆಂಟರು ಅಳುವಾಗ ಯಾರೂ ಇಲ್ಲ. ನಮ್ಮ ಈ ಪರಿಸ್ಥಿತಿಯೊಳಗ ನಮಗ ಅವರು ಹೊತ್ತಿಗಾಗತಾರ ಅಂತ ಅನಿಸೋದಿಲ್ಲ'' ಅಂದಾಗ ತಾಯಿ ''ಆ ಹುಡುಗಿ ಅಪ್ಪ ನನಗ ದೂರದ ಅಣ್ಣನೇ ಆಗಬೇಕು'' ಅಂತ ಹೇಳಿ ಮಗನ್ನ ಕರಕೊಂಡು ಹೋದರ ''ನಿಮಗೇ ನೆಟ್ಟಗ ಹೊಟ್ಟೆ ಬಟ್ಟಿಗಿ ಆಗೂವಂಗಿಲ್ಲ ಅಷ್ಟೈತಿ ನಿನ್ನ ಮಗನ ಕಮಾಯಿ. ನನಗ ಒಬ್ಬಳೆ ಮಗಳು. ಕನಡ ಸಾಲಿ ಮಾಸ್ತರೇ ಆಗಿರಲಿ ನೌಕರಿ ಇದ್ದವರಿಗಿ ಕೊಡಬೇಕು ಅಂತ ಅವರವ್ವನ ಆಸೆ'' ಅಂತ ಹೇಳಿದ ಮ್ಯಾಲ ಒಂದು ಹೆಣ್ಣಿನ ತಂದೆ ಆಗಿ ಅಂವಾ ಹೇಳೂದು ಸರಿ ಐತಿ ಅನಿಸಿ, ಶಂಕ್ರಣ್ಣ ಒಂದು ಮೆಟ್ಟಿಗೆ ಹತ್ತೂವರೆಗೆ ಮದುವೆ ಅಂತ ಆಗೂದಿಲ್ಲ ಅಂತ ನಿರ್ಧಾರ ಮಾಡಿದ್ದ. ಅವ್ವನ ಮನಸು ಬಾಳ ನೊಂದಕೊಂಡಿತ್ತು. ''ಇದು ಹಿಂಗೇ ಆಗತೈತಿ ಅಂತ ನನಗ ಮೊದಲೇ ಗೊತ್ತಿತ್ತು... ಆದರ ನಿನ್ನ ಮನಸ ನೋಯಿಸಬಾರದು ಅಂತ ನಾ ಹುಂ ಅಂದಿದ್ದೆ. ಸರಿ ನಾ ಇನ್ನ ಬರ್ತೀನಿ ಟೈಮ್ ಆಯ್ತು'' ಅಂತ ಹೊರಟ.

ಸಿನೇಮಾ ರೀಲ್ ಸುತ್ತುವಾಗ ಗೇಟ್‌ಕೀಪರ್ ಸೀನೂ ಬಂದು ''ಅಣ್ಣಾ ಹೆಣ್ಣ ನೋಡಲಿಕ್ಕ ಹೋಗಿದ್ದೆಲ್ಲ ಏನಾಯ್ತು'' ಅಂದ. ರೀಲು ಸುತ್ತುತ್ತಲೇ ''ಮದುವೆಯಾಗಿ ಮಕ್ಕಳೂ ಆದವು ಸಾಕಾ ?'' ಎಂದ. ''ಹೋಗಲಿ ಬಿಡು ಅವಳಿಲ್ಲಾ ಅಂದರೆ ಇನ್ನೊಬ್ಬಳು. ನಾನು ಒಂದು ಮಾತು ಹೇಳಲಾ ? ನೀನು ಸಿಟ್ಟು ಮಾಡಕೋಬಾರದು ಅಷ್ಟೆ'' ಅಂದ. ''ಅದೇನು ಹೇಳು.'' ''ಏನಿಲ್ಲ ನಮ್ಮ ಲತಕ್ಕ ಹೆಂಗೆ ? ವಿಧವೆಯಾದರೆ ಏನಂತೆ ? ಒಳ್ಳೆ ಮನಸು, ಅಂದ ಚಂದ... ಹೌದಿಲ್ಲೋ ?'' ''ಏಳು ಇಲ್ಲಿಂದ ನಡಿ ಹೋಗು ಟೈಮ್ ಆಯ್ತು ಗೇಟಿಗೆ ನಿಲ್ಲು'' ಅಂತ ಅವನನ್ನು ದಬ್ಬಿದ. ರೀಲು ಮಶೀನಿಗೆ ಜೋಡಿಸಿದ. ಸಿನೇಮಾ ಶುರು ಆಯ್ತು. ಇದ್ದಕ್ಕಿದ್ದಂಗೆ ಒಂದು ಹಗಲು ಕನಸು. ಲತಾ ಅವನನ್ನು ಆಪ್ತವಾಗಿ ಮಾತನಾಡಿಸುವದು, ಮನೆಗೆ ಬಂದು ಉಡುಗೊರೆ ಕೊಟ್ಟು ಹೋಗುವದು, ತಂದೆ ತೀರಿಕೊಂಡಾಗ ಸಾಂತ್ವನ ಹೇಳಿದ್ದು ಎಲ್ಲವೂ ನೆನಪಾಗಿ ಕೆಲ ಹೊತ್ತು ಕಳೆದುಹೋಗುತ್ತಾನೆ. ಎಚ್ಚರವಾದಾಗ ತೆರೆಯ ಮೇಲೆ ''ಈ ಸಂಬಂಧ ಸಾಧ್ಯವೇ ಇಲ್ಲ'' ಎನ್ನುವ ಡೈಲಾಗ್ ಕೇಳಿ ಬರುತ್ತಿತ್ತು.



ಜೊತೆಗೆ ನೀವು ಯಾವತ್ತೋ ಹಾಕಿದ್ದ 'ಅಡಿಗಲ್ಲು' ಸಹ ಪತ್ತೆಯಾಗಿದೆಯಂತೆ... ಸಾರ್ !?

ಆ ದಿನ ಬೆಳಿಗ್ಗೆ ಯಾರೋ ಬಂದು ಮನೆಯ ಬಾಗಿಲು ಬಡಿದ ಹಾಗಾಯ್ತು. ತೆಗೆದು ನೋಡಿದರೆ ಕೈಯಲ್ಲೊಂದು ಸೂಟ್ಕೇಸ್, ಕಪ್ಪು ಕನ್ನಡಕ, ಟೀ ಶರ್ಟ್ ಧರಿಸಿದ ಆಸಾಮಿಯೊಬ್ಬ ನಿಂತಿರುವದು ಕಂಡು ''ಯಾರು ಬೇಕು ನಿಮಗೆ ?'' ಎಂದು ಕೇಳಿದಾಗ ''ನನ್ನ ಚಡ್ಡಿ ದೋಸ್ತಿ ಲಗೋರಿ, ಬುಗರಿ, ಚಿಣ್ಣಿದಾಂಡು, ಗಿಡಮಂಗ ಕೂಡಿ ಆಡಿದ ಶಂಕರೂ ಬೇಕು'' ಅಂದ. ನಾನೇ ಶಂಕರ, ಯಾರು ನೀವು ? ಎಂದಾಗ ಕನ್ನಡಕ ತೆಗೆಯುತ್ತ ''ನಾನಲೇ ನಿನ್ನ ಗೆಳೆಯ ಮ್ಯಾಲಿನ ಮನಿ ಬಸವರಾಜು'' ಅಂದ. ಶಂಕರ ಖುಷಿಯಿಂದ ''ಯಲಾ ಇವನ ಎಟ್ಟು ಬದಲೀ ಆಗೀ ಮಾರಾಯಾ. ಲಾಟರಿ ಗೀಟರಿ ಹೊಡೆತೋ ಹ್ಯಾಂಗ. ಬಾ ಒಳಗ'' ಅಂತ ಕರದು ಅವರಮ್ಮಗ ಹೇಳಿದ. ಅವಳಿಗೂ ವಿಚಿತ್ರ ಎನಿಸಿತು. ಬಸವರಾಜು ಹೇಳಿಕೊಳ್ಳುವಂಥಾ ಜಾಣ ಹುಡುಗ ಅಲ್ಲ. ಮನೆಯಲ್ಲಿ ಜಗಳ ತಗದು ಬೆಂಗಳೂರು ಸೇರಿ ಈಗ ಈ ಥರಾ ಆಗಿದ್ದು ನೋಡಿ ಅವ್ವ ಮಗ ಇಬ್ಬರೂ ಹೌಹಾರಿದರು. ''ಏನಪಾ ನಿನ್ನ ಕಥೆ'' ಎಂದು ಅವ್ವ ಕೇಳಿದ್ದೇ ಬಸವರಾಜು ಕಥಿ ಶುರು ಮಾಡಿದ. ''ಹಿಂಗೇ ಹಿರೇಕೆರೂರಲ್ಲಿ ಇನ್ನೂ ಇಪ್ಪತ್ತು ವರ್ಷ ನೀನು ಕತ್ತಿ ದುಡದಂಗ ದುಡದರೂ ನೀ ಉದ್ದಾರ ಆಗಲ್ಲ. ನನ್ನ ನೋಡು, ಕೆಟ್ಟೆ, ಪಟ್ಟಣ ಸೇರಿದೆ. ಈಗ ಲಕ್ಷಾಧೀಶ್ವರ. ಯಶ್ವಂತಪುರದಲ್ಲಿ ತೊಗರಿಬೇಳೆ ಪಾಲಿಷ್ ಮಾಡೊ ಮಶಿನ್ ಹಾಕಿದೆ. ಈಗ ನನ್ನ ಕೈಯಲ್ಲಿ ಇಪ್ಪತ್ತು ಹುಡುಗರು ಕೆಲಸಾ ಮಾಡ್ತಾರೆ'' ಎಂದು ಹೆಮ್ಮೆಯಿಂದ ಹೇಳಿಕೊಂಡ. ಅವ್ವ ಮಗ ಬಾಯಿ ತೆಗೆದು ಅವನ ಕಥಿ ಕೇಳಿದರು.



''ಅದೆಲ್ಲಾ ಸರಿ ಅಲ್ಲಿ ಹೋಗಿ ಏನು ಮಾಡೂದು ?'' ''ಅದು ಬೆಂಗಳೂರು ಅಲ್ಲಿ ಬಂದವರಿಗೆಲ್ಲಾ ಅದು ಒಂದು ದಿಕ್ಕು-ದಾರಿ ತೋರಸ್ತದೆ. ತಗೊ ಈ ಕಾರ್ಡು ಹಿಂದೆ ನನ್ನ ಅಡ್ರೆಸ್ ಹಾಗೂ ಫೋಟೋ ಇದೆ. ಬಂದರೆ ನನ್ನನ್ನು ಭೇಟಿ ಮಾಡು'' ಎಂದವನೇ ತಾನೀಗ ಹೋಗಬೇಕು ತುಂಬಾ ಕೆಲಸ ಎಂದು ಹೊರಟೇಬಿಟ್ಟ. ''ಊಟ ಮಾಡಿಕೊಂಡು ಹೋಗ ಬಹುದಿತ್ತು'' ಅಂದಾಗ ''ಅದು ನಿನ್ನಂಥಾ ಕೆಲಸ ಇಲ್ಲದವರು ಮಾಡೋದು, ನನ್ನಂಥಾ ಬ್ಯುಸಿ ಯಾಗಿರವರಲ್ಲ'' ಎಂದವನೇ ನಡದೇಬಿಟ್ಟ.

ಶಂಕರನಿಗೆ ಅವನದೇ ಯೋಚನೆ, ಅವನ ಮಾತುಗಳದ್ದೇ ರಿಂಗಣ. ಅವನು ಹೇಳಿದ್ದರಲ್ಲಿ ಒಂದು ಅರ್ಥ ಇದೆ. ತಾನೂ ಬೆಂಗಳೂರಿಗೆ ಹೋಗಬೇಕು. ಹೇಗೂ ಆಪರೇಟರ್ ಕೆಲಸ ಬಂದೇ ಬರುತ್ತದೆ ಎನ್ನುವ ಭರವಸೆ. ಹಳ್ಳಿಯಲ್ಲಿರೋ ಎರಡೆಕರೆ ಜಮೀನು ಮಾರಿ, ಆ ದುಡ್ಡ ಇಟ್ಕೊಂಡು ತಾಯಿ ಸಮೇತ ಬೆಂಗಳೂರಿಗೆ ನಡೆದ. ಥೇಟರ್ ಮಾಲಿಕನಿಗೆ ಒಂದು ಮಾತು ತಿಳಿಸಿ ಹೊರಡುವದೆಂದು ಅವನ ಮನೆಯ ಬಳಿ ಬಂದು ವಿಷಯ ತಿಳಿಸಿದ್ದೇ ''ಬೆಂಗಳೂರು ನಿನ್ನ ಗೆಳೆಯ ಹೇಳಿದಂತೆನೂ ಇಲ್ಲ, ನೀನು ತಿಳಿದಂತೆಯೂ ಇಲ್ಲ. ಇಲ್ಲಿ ನೀನಗೇನು ತೊಂದರೆ ಆರಾಮಾಗಿರುವಿ. ನಾನು ಹೇಳ್ಳೂದು ಕೇಳು. ಅಲ್ಲಿಗೆ ಹೋಗಬೇಡ ಅದು ನರಕ'' ಎಂದೆಲ್ಲಾ ಹೇಳಿದ ಮಾತುಗಳನ್ನು ಹಾರಿಹೊಡೆದು ರಾಜಧಾನಿಯ ಹಾದಿ ಹಿಡಿದಿದ್ದ. ಲತಾ ಆತ ನಡೆಯುವ ಹಾದಿಯಲ್ಲಿ ತನ್ನ ಕಣ್ಣುಗಳನ್ನು ಹಾಸಿ ನಿಂತಿದ್ದಳು. ಅದ್ಯಾಕೋ ಅವಳ ಮನಸು ಭಾರವಾದಂತಿತ್ತು. ಶಂಕರನ ಕಣ್ಣುಗಳಲ್ಲಿ ಆಕೆ ಒಂದು ಅಪೂರ್ವವಾದ ಭರವಸೆಯನ್ನು ಕಂಡಿದ್ದಳು. ಅವನ ಆಸೆಗಳು, ಕನಸುಗಳು ಕೈಗೂಡಲಿ ಎಂದು ಎದೆ ತುಂಬಿ ಹರಿಸಿದ್ದಳು.

* * *

ಅದು ಬೆಂಗಳೂರಿನ ಮೆಜೆಸ್ಟಿಕ್. ದಿನದ ಇಪ್ಪತ್ತನಾಲ್ಕು ಘಂಟೆ ಕಿರ್ರೋ ಎನ್ನುವ ಜನಸಂದಣಿ. ಶಂಕರನ ಕೈಯಲ್ಲೊಂದು ಬ್ಯಾಗು, ಅವರಮ್ಮನ ಬಗಲಲ್ಲೊಂದು ಗಂಟು. ಮೆಲ್ಲಗೆ ಇಬ್ಬರೂ ನಿಲ್ದಾಣದ ಹೊರಗೆ ಬಂದರು. ''ಇಟ್ಟು ದೊಡ್ಡ ಊರಾಗ ಬಸುರಾಜನನ್ನು ಹ್ಯಾಂಗ ಹುಡಕತಿ, ಎಲ್ಲಿ ಇರೋದು, ಏನು ಕಥಿ ? ನನಗಂತೂ ಯಾಕೋ ಹೆದರಿಕಿ ಆಗತೈತಿ ನೋಡಪಾ.'' ''ನೀ ಸುಮ್ಕಿರು ನನಗೆಲ್ಲಾ ಗೊತ್ತೈತಿ ಹ್ಯಾಂಗ ಹುಡುಕಬೇಕು ಅಂತ. ಕಿಸೆಯೊಳಗ ಅಂವಾ ಕೊಟ್ಟ ಕಾರ್ಡ್ ಐತಿ. ಯಾರಿಗೆರೆ ಕೇಳದರ ಹೇಳೇ ಹೇಳತಾರ. ನೀ ಇಲ್ಲೇ ಕುತ್ಗೊಂಡಿರು ನಾ ಹೋಗಿ ಒಂದು ಫೋನ್ ಮಾಡಿ ಬರ್ತೀನಿ'' ಅಂದವನೇ ಶಂಕರ ಹೋಗಿ ಕೊಯನ್ ಬಾಕ್ಸಲ್ಲಿ ಒಂದು ರೂಪಾಯಿ ಹಾಕಿ ಕಾರ್ಡ್‌ಲ್ಲಿ ಇರೋ ನಂಬರಿಗೆ ಡೈಲ್ ಮಾಡಿದ. ಈ ದೂರವಾಣಿ ಸಂಖ್ಯೆ ಚಾಲ್ತಿಯಲ್ಲಿಲ್ಲ ಅನ್ನೋ ಧ್ವನಿ ಕೇಳಿಸಿತು. ಸೀದಾ ಬಂದವನೇ ''ಅವ್ವಾ ಅಲ್ಲಿ ಒಬ್ಬ ಪೊಲೀಸನವರು ಅದಾರ ಅವರಿಗೆ ಕೇಳಿ ಬರ್ತೀನಿ ಇಲ್ಲೇ ಇರು'' ಅಂತ ಹೇಳಿ ಹೊರಟ. ಪೊಲೀಸು ಆ ಕಾರ್ಡ್ ನೋಡಿ ''ಇದು ಈ ಏರಿಯಾ ಅಲ್ಲ, ಯಶವಂತಪುರ. ಅಲ್ಲಿ ಹೋಗು ಬಸ್ ನಂಬರ ಕೇಳು'' ಅಂತ ಸಿಟಿ ಬಸ್ ಜಾಗ ತೋರಿಸಿದ. ಕಾರ್ಡ್ ಹಿಂಬದಿ ಅವನ ಫೋಟೊ ಇತ್ತು. ''ಇದು ಯಾರ ಫೋಟೋ'' ಎಂದು ಕೇಳಿದರು. ''ಅವನೇ ನನ್ನ ಗೆಳ್ಯಾ ಬಸವರಾಜುಂದು'' ಅಂದ. ''ಇವನು ಮಹಾ ಲೋಫರ್ ನನ ಮಗ. ಒಂದು ಚೀಟಿ ವ್ಯವಹಾರ ಮಾಡಿ ಲಕ್ಷಗಟ್ಟಲೇ ಹಣ ಗುಳುಂ ಮಾಡಿ ತಲೆಮರೆಸಿಕೊಂಡಿದ್ದಾನೆ. ನಿನಗೂ ಅಂವಗೂ ಏನಾರೇ ಸಂಬಂಧ ಇರಬೇಕು ನಡೀ ಸ್ಟೇಷನ್‌ಗೆ'' ಎಂದ. ''ಇಲ್ಲಾ ಸಾಹೇಬರೆ ಅವನ ಮಾತು ನಂಬಿ ನಾನು ಇದ್ದ ಕೆಲಸಾ ಬಿಟ್ಟು, ನಮ್ಮವ್ವನ ಕರಕೊಂಡು ಬೆಂಗಳೂರಿಗೆ ಬಂದೀನಿ. ನಾವಿಬ್ಬರೂ ಬಾಲ್ಯದಲ್ಲಿ ಗೆಳೆಯರು, ಈಗಲ್ಲ.'' ''ನೋಡು, ಅದೆಲ್ಲಾ ಬೇಡ ಸುಮ್ಮನೇ ಐದನೂರು ರೂಪಾಯಿ ಇಡು ರೈಟ್ ಹೇಳು ಇಲ್ಲಾ ಜೈಲಿಗೆ ನಡಿ.'' ''ಇದು ಒಳ್ಳೆ ಕಥೆ ಆಯ್ತಲ್ಲ! ತಗೊಳ್ಳಿ'' ಎಂದು ಐದು ನೂರು ರೂಪಾಯಿ ಕೊಟ್ಟು ಅಲ್ಲಿಂದ ಗಡಬಡಸಿ ಜಾಗ ಖಾಲಿ ಮಾಡಿದ.

ಅವ್ವನ ಮುಂದೆ ನಡದದ್ದನ್ನೆಲ್ಲಾ ಹೇಳಿದ. ಈಗ ಏನು ಮಾಡೂದು ಅನ್ನೋದು ಇಬ್ಬರ ಮುಂದಿರುವ ಪ್ರಶ್ನೆ. ಅಷ್ಟರಲ್ಲಿ ಒಬ್ಬಾತ ''ಏನಣ್ಣಾ ರೂಮ್ ಬೇಕಾ ?'' ಅಂತ ಬಂದ. ''ನೋಡಪಾ ನಮಗ ಒಂದು ಸಣ್ಣ ಮನಿ ಬಾಡಿಗೆಗೆ ಬೇಕಿತ್ತು'' ಅಂತ ಶಂಕರ ಅವನಿಗೆ ಹೇಳಿದ. ''ಸರಿ ತಿಂಗಳಿಗೆ ಎಷ್ಟು ಬಾಡಿಗೆ ಕೊಡಿತೀರಾ ?'' ''ನೂರು, ನೂರೈವತ್ತು ಆಗಬಹುದು.'' ''ಇಲ್ಲೇ ನಿಲ್ದಾಣದಲ್ಲಿ ಮಲಗಿಬಿಡಿ ಪುಗಸಟ್ಟೆ ಆಗುತ್ತೆ. ಇದು ಬೆಂಗಳೂರು. ತೀರಾ ಕನಿಷ್ಠ ಅಂದರೂ ಎರಡು ಸಾವಿರ ಇಡಬೇಕು'' ''ಅಲ್ಲಪಾ ನಮಗ ಅಂಥಾ ಮನಿ ಬೇಕಾಗಿಲ್ಲ. ಒಂದು ಕೋಣೆ ಇದ್ದರ ಸಾಕು, ಗುಡಿಸಲ ಇದ್ದರೂ ನಡಿತೈತಿ'' ''ಓ ನೀವು ಆ ರೇಂಜಾ ? ಬರ್ರಿ ನನ್ನ ಸಂಗಡ'' ಅಂತ ಹೇಳಿ ಅವರನ್ನು ರಿಕ್ಷಾದಲ್ಲಿ ಕೂಡಿಸಿಕೊಂಡು ಒಂದು ಕೊಳಗೇರಿಯೊಳಗ ಬಂದು ಇಳಿಸಿದ. ''ಇಲ್ಲಿ ನಮ್ಮ ಮಾವನ ಮನೆ ಒಂದಿದೆ ತಿಂಗಳಿಗೆ ಎರಡುನೂರು ರೂಪಾಯಿ ಕೊಟ್ಟರೆ ಸಾಕು. ಅಡ್ವಾನ್ಸ್ ಏನೂ ಬೇಡ'' ಎಂದು ಒಂದು ಕೊಂಪೆ ಥರಾ ಇರೋ ಮನೆ ತೋರಿಸಿದ. ''ನಿಮಗೆ ಈ ರೇಂಜಲ್ಲಿ ಬೆಂಗಳೂರಲ್ಲಿ ಇದಕ್ಕಿಂತಾ ಚಲೋ ಮನೆ ಎಲ್ಲೂ ಸಿಗಲ್ಲ. ಸುಮ್ಮನೇ ಒಳಗೆ ಹೋಗಿ. ನಾ ಇನ್ನ ಬರ್ತೀನಿ'' ಅಂತ ಒಂದು ತಿಂಗಳ ಬಾಡಿಗೆ ಮುಂಗಡ ಪಡೆದು ಹೊರಟುಬಿಟ್ಟ. ''ಇರಲಿ ಬಿಡಪಾ ಸದ್ಯಕ್ಕೆ ನಿಂಗೊಂದು ಕೆಲಸಾ ಅಂತ ಸಿಕ್ಕ ಮ್ಯಾಲ ಚಲೋ ಮನಿ ಹಿಡದರಾಯ್ತು'' ಎಂದು ಅವ್ವ ಒಳಗ ನಡೆದಳು.

ಇಡೀ ಬೆಂಗಳೂರಲ್ಲಿರೋ ಎಲ್ಲಾ ಥೇಟರ್‌ಗಳಿಗೆ ಕೆಲಸಕ್ಕಾಗಿ ಅಲೆದ.

ಎರಡು ಥರಾ ಉತ್ತರ ಸಿಕ್ಕಿತು. ಒಂದು ಕೆಲಸ ಇಲ್ಲ ಅನ್ನೋದು. ಇನ್ನೊಂದು ''ನೀ ಇನ್ನೂ ಯಾವ ಕಾಲದಲ್ಲಿರುವಿ ? ನಮ್ಮ ಥೇಟರಲ್ಲಿ ಆದಾಗಲೇ ಡಿಜಿಟಲ್ ಪ್ರದರ್ಶನ ಶುರುವಾಗಿ ವರ್ಷ ಕಳೀಲಿಕ್ಕೆ ಬಂತು. ನಿನ್ನಂಥಾ ಆಪರೇಟರ್‌ಗಳು ಈಗ ಬೇಕಾಗಿಲ್ಲ'' ಅಂತ. ಬೆಂಗಳೂರಲ್ಲಿ ಆಪರೇಟರ್ ಆಗಿ ದುಡಿದರೆ ಕೈ ತುಂಬಾ ಸಂಬಳ ಅನ್ನೋ ಬಸವರಾಜನ ಮಾತು ನೆನಪಾಗಿ ಶಂಕರ ದೊಡ್ಡ ನಿಟ್ಟುಸಿರು ಬಿಟ್ಟ.

ಈತನ ಬರುವಿಕೆಯನ್ನು ಕಂಡು ಅವರಮ್ಮ ''ಇವತ್ತೂ ಕೆಲಸ ಸಿಗಲಿಲ್ಲ ಅಂತ ನಿನ್ನ

ಮುಖ ನೋಡದರೆ ಗೊತ್ತಾಗ್ತೈತಿ.'' ''ಅವ್ವಾ ನಾ ಒಂದು ಯೋಚನೆ ಮಾಡೀನಿ ನೀ ಹ್ಯಾಂಗೂ ಮಸ್ತ ರೊಟ್ಟಿ ಮಾಡತಿ. ಒಂದಿಷ್ಟು ದಿನಾ ತಳ್ಳೊ ಗಾಡಿಯೊಳಗ ರೊಟ್ಟಿ ಬಾಜಿ ಮಾಡಿ ಇಲ್ಲೇ ರೋಡ ಮ್ಯಾಲ ಸಣ್ಣಗೆ ವ್ಯಾಪಾರ ಶುರು ಮಾಡತೀನಿ, ನೀ ಹುಂ ಅಂದರ ಅಷ್ಟೆ.'' ''ಬಾಳ ಚುಲೋ ಐತು, ನಾಳೆಯಿಂದಲೇ ಸುರು ಮಾಡಮ್ಮು'' ಅವನ ಲೆಕ್ಕಾಚಾರ ಹುಸಿಯಾಗಲಿಲ್ಲ. ಅಕ್ಕಪಕ್ಕದಲ್ಲಿ ಪಲಾವ್ ಮಾರೋ ಎರಡು ಮೂರು ಅಂಗಡಿ ಇದ್ದರೂ ಶಂಕರನ ಅವ್ವ ಸುಡೊ ಬಿಸಿ ಬಿಸಿ ರೊಟ್ಟಿ ತಟ್ಟಿಗೆ ಬೀಳೊ ಮೊದಲೇ ಖಾಲಿ ಆಗತಾ ಇದ್ದು. ಅವತ್ತೊಂದಿನ ಮೂರ್ನಾಲ್ಕು ಧಾಂಡಿಗರು ಬಂದು, ಎಂಟತ್ತು ರೊಟ್ಟಿ ತಿಂದು ನಿಶೆದಾಗ ಹ್ಯಾಂಗ ಬೇಕು ಹಾಂಗ ಮಾತಾಡಿ, ದುಡ್ಡ ಕೊಡದೇ ಹೋದರು. ಶಂಕರ ಏನೂ ಅನ್ನಲಿಲ್ಲ. ಪಕ್ಕದ ಗಾಡಿಯವರು ''ಅವರು ಬಂದರೆ ಸುಮ್ಮನೇ ಕೊಡ್ತಾ ಇರಬೇಕು. ದುಡ್ಡು ಗಿಡ್ಡು ಕೇಳಿದರೆ ನಿನ್ನ ಅಂಗಡಿ ಜೋಡಿ ನಿನ್ನ ಕೈಕಾಲೂ ನೆಟ್ಟಗಿರುವಂಗಿಲ್ಲ'' ಅಂತ ಹೇಳಿದ ಮಾತು ನೆನಪಾಗಿ ಸುಮ್ಮನಾಗಿದ್ದ. ಮರುದಿನಾನೂ ಹಾಗೇ ಆಯ್ತು. ಆದರೆ ಆ ದಿನ ಮಾತ್ರ ಶಂಕರ ಗರಮ್ ಆಗಿಬಿಟ್ಟ. ಮೊದಲು ಎದೀಮಟ ತಿಂದು ರೊಟ್ಟಿ ಸುಡೊ ಅವರವ್ವನ ಮ್ಯಾಲೆ ''ಏ ಮುದುಕಿ ಇದೇನು ಹಸಿಬಿಸಿ ರೊಟ್ಟಿ ಸುಡ್ತೀಯಲ್ಲ'' ಅಂತ ರೊಟ್ಟಿ ಎತ್ತಿ ಅವಳ ಮುಖಕ್ಕೆ ಬೀಸಾಡಿದ್ದೇ ಶಂಕರಗೆ ಕೋಪ ಬಂದು, ಅವರೆಲ್ಲರನ್ನು ಹಿಗ್ಗಾಮುಗ್ಗಾ ಹೊಡೆದಿದ್ದ. ಆಜೂ ಬಾಜೂ ಅಂಗಡಿಯವರು ''ನೀನು ರಾತ್ರೋ ರಾತ್ರಿನೇ ಊರ ಬಿಡಬೇಕು ಇಲ್ಲಾಂದರ ನಿನಗ ಅವರು ಜೀವಂತ ಉಳಿಸಲ್ಲ'' ಅಂದರು. ಶಂಕರ ಅವರಮ್ಮನ ಜೊತೆ ಮನೆಗೆ ನಡೆದ.

ಬೆಳಕು ಹರಿದಿದ್ದೇ ತಡ ಎರಡು ಮೂರು ಟಾಟಾ ಸುಮೋಗಳು ಆ ಕೊಳಗೇರಿಯಲ್ಲಿ ಧೂಳ ಎಬ್ಬಿಸಿದ್ದವು. ಕೈಯಲ್ಲಿ ಲಾಂಗು ಮಚ್ಚು ಹಿಡಿದ ತಂಡದಲ್ಲಿ ಒಬ್ಬಾತ ಮುಂದೆ ಬಂದು ''ಯಾರೋ ಅವನು ಶಂಕರ, ನಮ್ಮ ಹುಡುಗರ ಮೇಲೆ ಕೈ ಮಾಡಿದವನು ?'' ಅನ್ನುತ್ತಿರುವಾಗಲೇ ಅವರಮ್ಮ ''ಬ್ಯಾಡ ಹೋಗಬ್ಯಾಡ'' ಅನ್ನುವಾಗಲೇ ಶಂಕರ ಮೆಲ್ಲಗೆ ಹೊರಗೆ ಬಂದ. ಕೊಳಗೇರಿ ಜನರೆಲ್ಲಾ ನಿಂತು ನೋಡತಾ ಇದ್ದರು. ಅವರ ಕಣ್ಣಲ್ಲಿ ಭಯ ಎದ್ದು ಕಾಣುತ್ತಿತ್ತು. ಏಟು ತಿಂದವರ ಪೈಕಿ ಒಬ್ಬ ''ಅಣ್ಣಾ ಇವನೇ ಇವನೇ'' ಎಂದು ಕೈ ಮಾಡಿ ತೋರಿಸಿದ. ನೇರವಾಗಿ ಬಂದವನೇ ಅವನು ಶಂಕರನ ಎದೆಗೆ ಒದ್ದ. ಶಂಕರ ಕೆಮ್ಮುತ್ತಾ ಎದ್ದು ನಿಂತು ''ನೋಡು, ನಾನಿಲ್ಲಿ ಫೈಟಿಂಗ್ ಆಡಲಿಕ್ಕೆ ಬಂದಿಲ್ಲ. ಇದರಲ್ಲಿ ನನ್ನ ತಪ್ಪು ಏನೂ ಇಲ್ಲ. ನಿಮ್ಮ ಹುಡುಗರೇ ಪುಗಸಟ್ಟೆ ತಿಂದದ್ದಲ್ಲದೇ ನಮ್ಮಮ್ಮನ ಮುಖಕ್ಕೆ ರೊಟ್ಟಿ ಎಸೆದರು.'' ''ಲೇ ಅವರು ಏನು ಬೇಕಾದರೂ ಮಾಡ್ತಾರೆ. ಏ ಎಳಕೊಂಡು ಬರ್ರಿ ಆ ಮುದಕಿನ್ನ'' ಅಂದದ್ದೇ ಶಂಕರ ಸಿಟ್ಟಾಗಿ ಅಲ್ಲೇ ಹತ್ತಿರದಲ್ಲಿದ್ದ ಒಂದು ದೊಡ್ಡ ಕಟ್ಟಿಗೆ ತುಂಡನ್ನು ಎತ್ತಿಕೊಂಡು ಎಲ್ಲರನ್ನು ಹಣ್ಣಾಗಿಸಿದ. ಎಲ್ಲರೂ ತಪ್ಪಿಸಿಕೊಂಡು ಒಂದೇ ಸವನೇ ಓಡುತ್ತಿದ್ದರು. ಆ ಕೇರಿ ಜನರೆಲ್ಲಾ ಶಂಕರನ ಧೈರ್ಯ ಕಂಡು ಬೆರಗಾದರು. ಶಂಕರ ಇಲ್ಲಿ ಇನ್ನು ಇರೋದು ಸರಿಯಲ್ಲ ಎಂದು ಯೋಚಿಸಿ, ತನ್ನ ತಾಯಿಯೊಂದಿಗೆ ಅಲ್ಲಿಂದ ನಡೆದ. ಜನರೆಲ್ಲಾ ಅವನಿಗೆ ಅಡ್ಡಲಾಗಿ ನಿಂತು, ''ನೀನು ನಮಗೆ ಬೇಕು. ನೀನು ನಮ್ಮ ಕೇರಿಯ ನಾಯಕ. ಅಂಥಾ ಗೂಂಡಾಗಳನ್ನೇ ನೀನು ಕುನ್ನಿಗಳನ್ನು ಹೊಡೆದಂತೆ ಹೊಡೆದು ಓಡಿಸಿದೆ. ನಾವೆಲ್ಲರೂ ನಿನ್ನ ಜೊತೆಗಿದ್ದೇವೆ. ನೀನು ಇಲ್ಲಿಂದ ಮಾತ್ರ ಹೋಗಬ್ಯಾಡ'' ಎಲ್ಲರೂ ''ಹೌದು... ಹೌದು...'' ಎಂದು ದನಿಗೂಡಿಸಿದರು. ಸಣ್ಣ ಮಗು ಒಂದು ಮುಂದೆ ಬಂದು ''ಅಂಕಲ್ ನಮ್ಮನ್ನು ಬಿಟ್ಟು ಹೋಗಬೇಡಿ'' ಅನ್ನೋ ಮಾತಿಗೆ ಶಂಕರನ ಕಣ್ಣು ತುಂಬಿ ಬಂತು. ''ಆಯ್ತು ನಾ ಇಲ್ಲೇ ಇರ್ತೀನಿ. ಆದರೆ ನಂದೊಂದು ಶರತ್ತು. ಇನ್ನು ಮ್ಯಾಲೆ ಈ ಕೇರಿಯೊಳಗ ಯಾರೂ ಕುಡಿಯೋದಿಲ್ಲ, ಆಡೊದಿಲ್ಲ, ಕಳ್ಳತನ ಮಾಡೊದಿಲ್ಲ ಅಂತ ಮಾತ ಕೊಟ್ಟರೆ ಮಾತ್ರ. ನೀವು ಪ್ರತಿದಿನ ಕುಡಿಲಿಕ್ಕೆ ಮತ್ತ ಆಡಲಿಕ್ಕೆ ಖರ್ಚು ಮಾಡತಿದ್ದ ಹಣ ತಂದು ನಿಮ್ಮ ನಿಮ್ಮ ಹೆಂಡಂದಿರ ಕೈಗೆ ಕೊಡಬೇಕು. ಹಾಗಿದ್ದರೆ ಮಾತ್ರ, ಇಲ್ಲಂದ್ರೆ ನಾನು ಹೊರಟು ಬಿಡಿತೀನಿ.'' ಎಲ್ಲರೂ ಅದಕ್ಕೆ ಒಪ್ಪಿಕೊಂಡ ನಂತರ ಶಂಕರ ಖುಷಿಯಿಂದ ಮತ್ತೆ ತನ್ನ ಮನೆಯೊಳಗೆ ನಡೆದ.

ಎಲ್ಲರನ್ನು ಕೂಡಿಸಿಕೊಂಡು 'ಸೇವಕ ಸಹಕಾರ ಸಂಘ' ಎನ್ನುವದನ್ನು ಶುರು ಮಾಡಿದ. ಅಲ್ಲಿ ಸಂಗ್ರಹವಾದ ವಂತಿಗೆಯನ್ನು ಪ್ರತಿಯೊಂದು ಕುಟುಂಬಕ್ಕೆ ನೆರವಾಗುವ ಹಾಗೆ ಬಡ್ಡಿರಹಿತ ಸಾಲ ನೀಡಿದ. ಆದರೆ ಪ್ರತಿಯೊಂದು ಮನೆಯಲ್ಲೂ ಏನಾದರೂ ಒಂದು ಉತ್ಪಾದನೆ ಆಗಲೇಬೇಕು. ಅದು ಹಪ್ಪಳ, ಊದಬತ್ತಿ, ಕಡ್ಡಿಪೆಟ್ಟಿಗೆ, ಉಪ್ಪಿನಕಾಯಿ, ಕ್ಯಾಂಡಲ್ ಹೀಗೆ ಎಲ್ಲರೂ ಒಂದೊಂದು ಪದಾರ್ಥ ತಯಾರಿಕೆಯಲ್ಲಿ ತೊಡಗುವಂತೆ ಮಾಡಿ, ಅವನ್ನು ಸ್ವತಃ ತಾನೇ ಒಂದು ವಾಹನದಲ್ಲಿ ತಲುಪಿಸುವ ವ್ಯವಸ್ಥೆ ಮಾಡಿ, ಬರುವ ಆದಾಯದಲ್ಲಿ ಸಾಲವನ್ನು ಹಿಂತಿರುಗಿಸಿ ಪಡೆದ ಲಾಭವನ್ನು ಅವರಿಗೆ ಹಂಚತೊಡಗಿದ. ಇಡೀ ಕೊಳಗೇರಿ ಒಂದು ಗೃಹ ಉದ್ಯಮದ ತಾಣವಾಗಿ ಪರಿಣಮಿಸಿತು. ಪ್ರತಿ ರವಿವಾರಕ್ಕೊಮ್ಮೆ ಕೇರಿಯನ್ನು ಎಲ್ಲರೂ ಕೂಡಿ ಸ್ವಚ್ಛ ಮಾಡುವ ಯೋಜನೆಯನ್ನೂ ರೂಪಿಸಿದ. ಕೆಲವೇ ತಿಂಗಳಲ್ಲಿ ಇಡೀ ಕೇರಿ ಒಂದು ಸ್ವಾವಲಂಬಿ ನೆಲೆಯಾಗಿ ಮಾರ್ಪಟ್ಟಿತು. ತಮ್ಮ ಮಕ್ಕಳಿಗಾಗಿ ಶಾಲೆ, ಆಸ್ಪತ್ರೆ, ಕುಡಿಯುವ ನೀರಿನ ಸೌಕರ್ಯಗಳನ್ನೆಲ್ಲಾ ರೂಪಿಸಿ ಕೊಂಡರು. ಮಂತ್ರಿಗಳು ಈ ಪ್ರದೇಶವನ್ನು ಮಿಕ್ಕ ಕೇರಿಗಳ ಜನರ ಮುಂದೆ ಕೊಂಡಾಡ ತೊಡಗಿದರು. ಸ್ವತಃ ಮುಖ್ಯ ಮಂತ್ರಿಗಳು ಈ ಕೇರಿಗೆ ಬಂದು ಇಲ್ಲಿಯ ಜನರ ಸ್ವಯಂ ಪರಿಪೂರ್ಣ ಮತ್ತು ಸ್ವಾವಲಂಬನೆಯನ್ನು ಕೊಂಡಾಡಿದರು. ಅದಕ್ಕೆ ಕಾರಣಕರ್ತನಾದ ಶಂಕರನನ್ನು ಸನ್ಮಾನಿಸಿದರು. ''ಈ ಸನ್ಮಾನ ಅಲ್ಲಿರುವ ಎಲ್ಲ ಜನರಿಗೆ, ಮುಖ್ಯವಾಗಿ ಅವರ ಹೆಂಡಂದಿರಿಗೆ ಸಲ್ಲಬೇಕು. ಅವರ ಇಚ್ಛಾಶಕ್ತಿಯೇ ಈ ಸೇವಕ ಬೆಳೆಯಲು ಕಾರಣ'' ಎಂದು ಹೇಳಿ ಶಂಕರ ಚಪ್ಪಾಳೆ ಗಿಟ್ಟಿಸಿದ್ದ.

ಪಕ್ಕದ ಕೇರಿಯ ಗೂಂಡಾ ಕೊಳ್ಳಿ ತುಕ್ಕ ಎನ್ನುವವನಿಗೆ ಶಂಕರನ ಬೆಳವಣಿಗೆಯ ಸುದ್ದಿ ತಲುಪಲು ತಡವಾಗಲಿಲ್ಲ. ಶಂಕರನಿಗೆ ನಿಜವಾಗಿಯೂ ಚುನಾವಣೆಗೆ ನಿಲ್ಲುವ ಆಸಕ್ತಿ ಇರಲಿಲ್ಲ. ಹೀಗಾಗಿಯೇ ಆತ ಯಾವ ಪಕ್ಷದೊಂದಿಗೂ ಗುರುತಿಸಿಕೊಂಡಿರಲಿಲ್ಲ. ''ಮುಂದಿನ ಚುನಾವಣೆಯಲ್ಲಿ ಶಂಕರಗೆ ಟಿಕೆಟ್ ಗ್ಯಾರಂಟಿ. ಅವನು ಆರಿಸಿ ಬರೋದೂ ಗ್ಯಾರಂಟಿ. ಅದೂ ಅಲ್ಲದೇ ಹಿಂದೊಂದು ಸಾರಿ ನಮ್ಮವರನ್ನ ಹ್ಯಾಂಗ ಬೇಕು ಹಾಂಗ ಹೊಡದರೂ ನಿನ್ನಿಂದ ಏನೂ ಮಾಡಲಿಕ್ಕಾಗಲಿಲ್ಲ. ಹಂಗಾಗೇ ಅವನು ಬೆಳೆದ.'' ತನ್ನ ಜೊತೆಗಿರುವವರ ಕಿವಿಕಚ್ಚುವಿಕೆಯಿಂದಾಗಿ ತುಕ್ಕ ಅತ್ಯಂತ ಕ್ಷುದ್ರವಾಗಿ ಯೋಚಿಸಿ, ಒಂದು ಸ್ಕೆಚ್ ಹಾಕಿದ. ಅದು ಆ ಕೇರಿಯ ಜಾತ್ರೆಯ ದಿನ. ಇಡೀ ಕೇರಿ ಮರುದಿನದ ಜಾತ್ರೆಗಾಗಿ ಸಿದ್ಧತೆ ಮಾಡಿಕೊಂಡು ಮಲಗಿತ್ತು. ಮಧ್ಯ ರಾತ್ರಿಯ ವೇಳೆಯಲ್ಲಿ ತುಕ್ಕ ಕೆಲವು ಮನೆಗಳಿಗೆ ಕೊಳ್ಳಿ ಇಟ್ಟ. ಜನ ಹೌಹಾರಿ ಹೊರಗೆ ಬಂದು ಬೆಂಕಿ ಆರಿಸುವತ್ತ ತೊಡಗಿದರು. ಅಷ್ಟರಲ್ಲಿ ಶಂಕರನೂ ಓಡಿ ಬಂದ. ಅವನ ಕಣ್ಣಿಗೆ ದೂರದಲ್ಲಿ ಒಬ್ಬಾತ ಓಡುವದು ಕಾಣಿಸಿತು. ಅವನನ್ನು ಬೆನ್ನಟ್ಟಿ ಹಿಡಿದ. ಇದು ಯಾರ ಕೆಲಸ, ಅವನೀಗ ಎಲ್ಲಿದ್ದಾನೆ ಎಂದು ತಿಳಿದುಕೊಂಡ. ಅಷ್ಟೊತ್ತಿಗಾಗಲೇ ಅನೇಕ ಜೀವಗಳು ಬಲಿಯಾಗಿದ್ದವು. ಕೆಲ ಮನೆಗಳು ಇನ್ನೂ ಉರಿಯುತ್ತಲೇ ಇದ್ದವು. ಹೊಗೆ ಇಡೀ ಕೇರಿಯನ್ನು ದಟ್ಟವಾಗಿ ಆವರಿಸಿ ಕೊಂಡಿತ್ತು. ಅಷ್ಟರಲ್ಲಿ ಅಗ್ನಿಶಾಮಕ ದಳ, ಪೊಲೀಸರು, ಪ್ರೆಸ್‌ನವರು ಆಗಮಿಸಿದರು. ಈ ಬೆಂಕಿಗೆ ಕಾರಣವೇನು, ಎಂದು ಟಿ.ವಿ.ಯವರು ಪೊಲೀಸರನ್ನು ಕೇಳಿದಾಗ ''ಇದು ಶಾರ್ಟ್ ಸರ್ಕಿಟ್‌ದಿಂದ ಹತ್ತಿರುವ ಬೆಂಕಿ. ಮೂರು ಜನ ಬಲಿಯಾಗಿದ್ದಾರೆ, ಮಿಕ್ಕಂತೆ ಸಣ್ಣ ಪುಟ್ಟ ಘಟನೆಗಳು. ಈಗ ಪರಿಸ್ಥಿತಿ ನಿಯಂತ್ರಣದಲ್ಲಿದೆ'' ಎಂದವರೇ ಜೀಪ್ ಹತ್ತಿ ನಡೆದರು. ಅತ್ಯಂತ ಕಷ್ಟಪಟ್ಟು ರೂಪಿಸಿದ್ದ ಕೇರಿಯೊಂದು ತುಕ್ಕನ ಕಿರಾತಕತನಕ್ಕೆ ಬೂದಿಯಾಗಿತ್ತು. ಮಧ್ಯರಾತ್ರಿಯ ಎರಡು ಘಂಟೆ. ಶಂಕರ ನೇರವಾಗಿ ಕೊಳ್ಳಿ ತುಕ್ಕನ ಅಡ್ಡೆಗೆ ಬಂದ. ಅವನು ಕುಡಿದ ಅಮಲಿನಲ್ಲಿ ಹೆಣ್ಣೊಂದರ ಜೊತೆಯಲ್ಲಿ ಬೆತ್ತಲಾಗಿ ಹಾಸಿಗೆಯಲ್ಲಿದ್ದ. ಮುಖಕ್ಕೆ ನೀರು ಸಿಂಪಡಿಸಿ ಅವನನ್ನು ಜಾಗೃತಗೊಳಿಸಿದ. ತುಕ್ಕ ಮಲಗಿದ ಹಾಸಿಗೆ ಕೆಂಪು ಬಣ್ಣಕ್ಕೆ ತಿರುಗಿತ್ತು. ಶಂಕರ ಕೈಯಲ್ಲಿದ್ದ ಮಚ್ಚನ್ನು ಎಸೆದು ಕತ್ತಲಲ್ಲಿ ಕಳೆದುಹೋದ.



ಎಸ್. ಬಿ. ಜೋಗುರ
ಬಸವೇಶ್ವರ ನಗರ
ಹಿರೇಕೆರೂರು - ೫೮೧ ೧೧೧





ಕರ ಸೇವಕರ ದಾಳಿಗೆ ಸಿಕ್ಕ ಬಾಬ್ರಿ ಮಸೀದಿ

ನವಾಬರ ಮೊದಲ ರಾಜಧಾನಿ ಫೈಜಾಬಾದ್‌ನಿಂದ ಏಳು ಕಿ.ಮೀ. ದೂರದಲ್ಲಿ ಇರುವ ಅಯೋಧ್ಯೆಗೆ ಆ ಬೆಳಿಗ್ಗೆ ಹೊರಟಾಗ ನಿಜಕ್ಕೂ ನನಗೆ ನೆನಪಾದುದು ಪಿ. ಲಂಕೇಶ್‌ರ 'ಇಟ್ಟಿಗೆ ಪವಿತ್ರವಲ್ಲ, ಜೀವ ಪವಿತ್ರ' ಎಂಬ ಲೇಖನ ಮತ್ತು ಬೊಳುವಾರರ 'ಒಂದು ತುಂಡು ಗೋಡೆ' ಕತೆ.

ಮಧ್ಯಪ್ರದೇಶದ 'ಚಿತ್ರಕೂಟ' ಮತ್ತು ಉತ್ತರ ಪ್ರದೇಶದ 'ಅಲಹಾಬಾದ್' ಪ್ರವಾಸ ಮುಗಿಸಿ ಅಯೋಧ್ಯೆಗೆ ಹೋಗಲು ನಮ್ಮ ತಂಡ ಎಲ್ಲಾ ಸಿದ್ಧತೆಯಲ್ಲಿತ್ತು. ಅಲಹಾಬಾದ್‌ನಿಂದ ಫೈಜಾಬಾದ್‌ಗೆ ಬಂದು ಅಲ್ಲಿಂದ ಅಯೋಧ್ಯೆಯ ತಥಾಕಥಿತ ರಾಮ ಜನ್ಮಭೂಮಿ ಕಾಣಲು ತುಂಬಾ ಆತುರರಾಗಿದ್ದೆವು. ಬೆಳಿಗ್ಗೆ ಬೇಗನೆ ಎದ್ದು ಫೈಜಾಬಾದ್‌ನ ಹೋಟೆಲ್‌ನಿಂದ ಹೊರಬಂದಾಗ ಬಸ್ಸು ರೆಡಿಯಾಗಿತ್ತು.

೧೯೯೨ ಡಿಸೆಂಬರ್ ೬ರಂದು ಅಯೋಧ್ಯೆಯಲ್ಲಿ ಬಾಬ್ರಿ ಮಸೀದಿ ನೆಲಸಮವಾದಾಗ ಮುಂಬಯಿಯಲ್ಲಿ ನಡೆದಿದ್ದ ಮಹಾಭಯಾನಕ ಕೋಮುಗಲಭೆಯನ್ನು ಕಣ್ಣಾರೆ ಕಂಡ ನನ್ನಂಥವರು ಅಯೋಧ್ಯೆಯಲ್ಲಿ ರಾಮನನ್ನು ಹುಡುಕುವುದಕ್ಕೆ ಹೊರಟೇಬಿಟ್ಟಿದ್ದೆವು.

ಬಾಬ್ರಿ ಮಸೀದಿ ಉರುಳಿದ ಘಟನೆಯ ಹದಿನಾರು ವರ್ಷಗಳ ನಂತರ ಅಯೋಧ್ಯೆ ಹೇಗಿರಬಹುದು, ಈಗಿನ ದೃಶ್ಯಗಳು ಹೇಗಿರಬಹುದು... ಎಂದೆಲ್ಲ ಚರ್ಚಿಸುತ್ತಿದ್ದಂತೆ ಅಯೋಧ್ಯಾ ನಗರವನ್ನು ಪ್ರವೇಶಿಸಿದ್ದೆವು. ರಾಮರಾಜ್ಯದ ವೈಭವಗಳನ್ನು ಬಾಲ್ಯದಲ್ಲಿ ಕತೆಗಳಲ್ಲಿ ಓದಿದ್ದ ನನಗೆ ಕ್ಷಣಕ್ಷಣಕ್ಕೂ ಆಸಕ್ತಿ ಹೆಚ್ಚುತ್ತಿತ್ತು.

ಆದರೆ ರಾಮ ಜನ್ಮಭೂಮಿ ಪರಿಸರಕ್ಕೆ ಕಾಲಿಟ್ಟಾಗ ಮಾತ್ರ ರಾಮನ ಯಾವ ನೆನಪೂ ಬಾರದೆ ಎಲ್ಲೆಂದರಲ್ಲಿ ಪೊಲೀಸರೇ ಪೊಲೀಸರು ಕಂಡುಬರುತ್ತಿದ್ದರು. ರಾಮನಿಗೆ ಬಿಗು ಪೊಲೀಸ್ ಕಾವಲು.

# ರಾಮನಿಗೆ ಪೋಲೀಸ್ ರಕ್ಷಣೆಯು ಅಯೋಧ್ಯಾ



ಶ್ರೀ ರಾಮ್ ದರ್ಬಾರ್ - 'ಶ್ರೀ ರಾಮ ಜನ್ಮಭೂಮಿ ಮಂದಿರ ನಿರ್ಮಾಣ ನ್ಯಾಸ್' ಇಲ್ಲಿದೆ.

ಶ್ರೀನಿವಾಸ ಜೋಕಟ್ಟೆ

ತ್ರೇತಾಯುಗದಲ್ಲಿ ಸೂರ್ಯವಂಶೀ ಇಕ್ಷ್ವಾಕು - ರಘುವಂಶದ ರಾಜಾ ದಶರಥನು ಮನು ನಿರ್ಮಿತ ಅಯೋಧ್ಯೆಯಲ್ಲಿ ಆಡಳಿತ ನಡೆಸಿದ್ದುದು, ವಿಷ್ಣುವಿನ ಏಳನೆಯ ಅವತಾರವೆನ್ನಲಾದ ರಾಮಚಂದ್ರ ಇಲ್ಲೇ ಜನಿಸಿದ್ದುದು, ಇತ್ಯಾದಿಗಳನ್ನು ಓದಿದ್ದ ನಮಗೆಲ್ಲ ಅಯೋಧ್ಯೆ ಎಂದರೆ ಹತ್ತು ಹಲವು ಕುತೂಹಲಗಳು. ಸಪ್ತ ತೀರ್ಥಗಳಲ್ಲಿ (ಮಥುರಾ, ಹರಿದ್ವಾರ, ವಾರಾಣಸಿ, ಅಯೋಧ್ಯೆ, ಉಜ್ಜಯಿನಿ, ದ್ವಾರಕಾ ಮತ್ತು ಕಂಚಿ) ಅಯೋಧ್ಯೆ ಕೂಡ ಒಂದಾಗಿರುವುದರಿಂದ ನಮ್ಮ ತಂಡದ ಕೆಲವು ರಾಮಭಕ್ತರಿಗೆ ತೀರ್ಥಯಾತ್ರೆ ನಡೆಸಿದ ಖುಷಿಯೂ ಸೇರಿಕೊಂಡಿತ್ತು.

ಹಾಗೆ ನೋಡಿದರೆ ಕ್ರಿ.ಶ. ೩೦೦-೪೦೦ರಲ್ಲಿ ಗುಪ್ತರ ಕಾಲದಲ್ಲಿ, ವಿಕ್ರಮಾದಿತ್ಯ ಅಯೋಧ್ಯೆಯನ್ನು ಪುನರುದ್ಧಾರ ಮಾಡಿದ್ದು ತಿಳಿದುಬರುತ್ತದೆ. ಆದರೆ ನಾವು ೧೬ನೆಯ ಶತಾಬ್ದಿಯ ನಂತರದ ಘಟನೆಗಳನ್ನೇ ಹೆಚ್ಚು ಓದಿದವರು. ಅಯೋಧ್ಯೆ ನವಾಬರ ಕೈಗೆ ಬಂದದ್ದು ೧೬ನೆಯ ಶತಾಬ್ದಿಯಲ್ಲೇ. ನವಾಬ್ ಸಾದತ್‌ಖಾನ್ ಬುರ್ಹಾನ್ ಉಲ್ ಮುಲಿಕ್ ವಂಶದ ಸ್ಥಾಪನೆ ಮಾಡಿದ್ದು ೧೮ನೇ ಶತಾಬ್ದಿಯ ಆರಂಭದಲ್ಲಿ.

ಅಯೋಧ್ಯೆಗೆ ಬರುವವರು ಮೊದಲಿಗೆ ೭ ಕಿ.ಮೀ. ದೂರದ ಫೈಜಾಬಾದ್‌ಗೇ ಬರುತ್ತಾರೆ. ಪವಿತ್ರ ನದಿಗಳಲ್ಲಿ ಒಂದೆನಿಸಿದ ಸರಯೂ ನದಿಯ ಎರಡು ಶಾಖೆಗಳಿಂದ ಸುತ್ತುವರಿದ ಕಂಟೋನ್‌ಮೆಂಟ್ ಶಹರ ಫೈಜಾಬಾದ್.

ಡಿಸೆಂಬರ್ ೬, ೧೯೯೨ರ ಬಾಬ್ರಿ ಮಸೀದಿ ಧ್ವಂಸ ಘಟನೆಯ ನಂತರ, ಜುಲೈ ೫, ೨೦೦೫ರಂದು ಭಯೋತ್ಪಾದಕರ ದಾಳಿ ಅಯೋಧ್ಯೆಯನ್ನು ಮತ್ತೆ ಪ್ರಚಾರಕ್ಕೆ ತಂದಿತು. ವಿಶ್ವಾದ್ಯಂತ ಇಂದು ಎಲ್ಲರಿಗೂ ಅಯೋಧ್ಯೆ ಗೊತ್ತು. ಬಾಬ್ರಿ ಮಸೀದಿ ಧ್ವಂಸ ಪ್ರಕರಣವು ಬಿ.ಬಿ.ಸಿ. ಚಾನೆಲ್‌ನಲ್ಲಿ ವಿಶ್ವಕ್ಕೇ ಅಯೋಧ್ಯೆಯನ್ನು ಪರಿಚಯಿಸಿ ಕೊಟ್ಟಿತು. ಬಸ್‌ಸ್ಟ್ಯಾಂಡಿನಿಂದ ಒಂದೂವರೆ ಕಿ.ಮೀ. ದೂರ ಸರಯೂ ನದಿಯ ನಾಲ್ಕೈದು ಕಿ.ಮೀ. ವ್ಯಾಪ್ತಿಯಲ್ಲಿ ಏಳು ಸಾವಿರ ಮಂದಿರಗಳು ಅಯೋಧ್ಯೆಯಲ್ಲಿದ್ದ

ಕಾಲವೊಂದಿತ್ತು ಎಂಬ ಐತಿಹ್ಯವೊಂದಿದೆ. ಇಲ್ಲಿನ ಹನುಮಾನ್ ಗಢ್‌ನಲ್ಲಿ ಅಂತಹ ಕತೆ ಸಿಗುತ್ತದೆ.

ಹನುಮಾನ್ ಗಢ್‌ನ ಹಿಂದಕ್ಕೆ ಕಂಡುಬರುವ ರಾಮ ಜನ್ಮಭೂಮಿ ಇಂದು ಆಕರ್ಷಣೀಯ ಸ್ಥಳ. ಪ್ರಾಚ್ಯವಸ್ತು ಅಗೆತದಲ್ಲಿ ೮೪ ಸ್ತಂಭಗಳ ಸಹಿತ ಮಂದಿರದ ಗುರುತು ದೊರೆತಿರುವುದಾಗಿಯೂ ಹೇಳಿದ್ದಿದೆ. ಸಾರ್ವಜನಿಕರಿಗೆ ಅದನ್ನು ಪುರಾವೆಯೊಂದಿಗೆ ನೀಡಿಲ್ಲ, ಅಷ್ಟೆ. ಭಾರತೀಯ ಪ್ರಾಚ್ಯವಸ್ತು ಇಲಾಖೆ ಮತ್ತು ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಅಡ್ವಾನ್ಸ್‌ಡ್ ಸ್ಟಡೀಸ್‌ನ ಸರ್ವೆಯಲ್ಲಿ ರಾಮ ಜನ್ಮಭೂಮಿಯ ವಿಷಯದಲ್ಲಿ ಸಮರ್ಪಕವಾದ ದಾಖಲೆಗಳಿಗಾಗಿ ಸಂಶೋಧನೆ ಮುಂದುವರಿದಿದೆ. ೧೯೭೮ರಲ್ಲೇ ಇದನ್ನು ಸ್ಥಾಪಿಸಲಾಗಿತ್ತು. ಕ್ರಿ.ಪೂ. ೭ನೆಯ ಶತಾಬ್ದಿಯ ಮೊದಲಿನ ದಾಖಲೆಗಳು ರಾಮ ಜನ್ಮಭೂಮಿ ಪರವಾಗಿ ಸಿಕ್ಕಿವೆ ಎಂಬ ವರದಿಯೂ ಈಗಾಗಲೇ ಪ್ರಕಟವಾದದ್ದೂ ಇದೆ. ಪ್ರಕಟಣೆಗೆ ಆಧಾರವೇನೆಂದು ಬಹಿರಂಗಪಡಿಸಿಲ್ಲ.

ರಾಮ ಜನ್ಮಭೂಮಿಯಲ್ಲಿರುವ ತಾತ್ಕಾಲಿಕ ಟೆಂಟ್ ಮಂದಿರದಲ್ಲಿ ರಾಮ, ಲಕ್ಷ್ಮಣ, ಸೀತೆಯವರನ್ನು ಕಾಣುವುದು ಅಷ್ಟು ಸುಲಭದ ಮಾತಲ್ಲ. ಬೆಳಿಗ್ಗೆ ೭ರಿಂದ ೧೦, ಮಧ್ಯಾಹ್ನ ೩ರಿಂದ ೫ರತನಕ ರಾಮ ಜನ್ಮಭೂಮಿಯ ದರ್ಶನ ಪಡೆಯಬಹುದು. (ಇದನ್ನು ರಾಮ್‌ಲಲ್ಲಾ ಎನ್ನುತ್ತಾರೆ). ಸಂಕೀರ್ಣವಾದ ಗಲ್ಲಿ. ಎತ್ತ ನೋಡಿದರೂ ಪೊಲೀಸರೇ ಪೊಲೀಸರು. ಮೂರು ಮೂರು ಕಡೆ ತೀವ್ರ ತನಿಖೆ. ಹಣ ಮಾತ್ರ ಕಿಸೆಯಲ್ಲಿ ಇರಿಸಬಹುದು. ಇನ್ನಾವುದನ್ನೂ (ಬ್ಯಾಗ್, ಪೆನ್ನು, ಬಾಚಣಿಗೆ, ಮೊಬೈಲ್... ಇತ್ಯಾದಿ) ಒಳ ಕೊಂಡೊಯ್ಯುವಂತಿಲ್ಲ. ಒಳಗೆ ಕಬ್ಬಿಣದ ಸರಳುಗಳ ಬೇಲಿ. ಸರ್ಕಸ್ ಕಂಪೆನಿಯಲ್ಲಿ ಹುಲಿ-ಸಿಂಹಗಳು ಯಾವ ರೀತಿ ಸರಳುಗಳ ನಡುವೆ ಹೋಗುತ್ತವೆಯೋ ಹಾಗೆ! ರಾಮನನ್ನು ಕಾಣಲು ಪ್ರವಾಸಿಗರು ಇಂತಹ ಕಬ್ಬಿಣದ ಸರಳುಗಳು ಮುಚ್ಚಿದ ಸಣ್ಣ ದಾರಿಯಲ್ಲಿ ಮುನ್ನಡೆಯಬೇಕು. ಶ್ರೀರಾಮನ ಜನ್ಮಸ್ಥಳದ ಮಂದಿರವನ್ನು ಕೆಡವಿ ೧೫೨೮ರಲ್ಲಿ ಬಾಬರನು ಮಸೀದಿ ನಿರ್ಮಿಸಿದ್ದ ಎನ್ನುವ ಆರೋಪ ಮಾಡಿ ೧೯೯೨ರಲ್ಲಿ ಬಾಬ್ರಿ ಮಸೀದಿಯನ್ನು ಸಂಘಪರಿವಾರದ ಕರ ಸೇವಕರು ಧ್ವಂಸಗೊಳಿಸಿದ್ದು ಈಗ ಇತಿಹಾಸ. ವಿಶ್ವ ಹಿಂದು ಪರಿಷತ್ತು ೫೦ ಕೋಟಿ ರೂಪಾಯಿ ಖರ್ಚುಮಾಡಿ ಹೊಸ ರಾಮಮಂದಿರ ಕಟ್ಟುವುದಾಗಿಯೂ 'ರಾಮಭಕ್ತ'ರಿಗೆ ಭರವಸೆ ಹೇಳಿದ್ದಿದೆ! ೧೯೮೯ರ ನವೆಂಬರ್ ೯ರಂದು ಮಸೀದಿಯ ಎದುರು ೨೭೦ ಮೀ. ದೂರದಲ್ಲಿ ರಾಮಮಂದಿರದ ಶಿಲಾನ್ಯಾಸವೂ ನಡೆದಿತ್ತು. ಮಂದಿರ ನಿರ್ಮಿಸಿದರೆ ಬರಲಿರುವ ತೊಂದರೆಗಳನ್ನು ಗಮನಿಸಿ ಬಾಬ್ರಿ ಮಸೀದಿ ಆ್ಯಕ್ಷನ್ ಕಮಿಟಿ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿತ್ತು. ಈ ನಡುವೆಯೇ ೩೦ ಅಕ್ಟೋಬರ್ ೧೯೯೦ರಂದು ಕರಸೇವೆಯಲ್ಲಿ ಮಂದಿರ ನಿರ್ಮಾಣಕ್ಕಾಗಿ ಹಿಂದು ಪರಿಷತ್ತು ಯತ್ನಿಸಿದ್ದಿದೆ. ಭಾರತದ ಪ್ರತಿ ಸ್ಥಳದಿಂದ ಶ್ರೀರಾಮ ರಥ ಯಾತ್ರೆಯ ಐತಿಹಾಸಿಕ ಮೆರವಣಿಗೆಯೂ ಹೊರಟಿತ್ತು. ಆದರೆ ಬಿಹಾರದ ಗಡಿಯಲ್ಲಿ ಶಾಂತಿ ಕಾಪಾಡಲು ಇದನ್ನು ತಡೆಯಲಾಯಿತು. ಇದು ಸಂಸತ್‌ನಲ್ಲೂ ವಿವಾದ ಸೃಷ್ಟಿಸಿತು. ಪರಿಣಾಮವಾಗಿ ವಿ. ಪಿ. ಸಿಂಗ್ ನೇತೃತ್ವದ ಸರಕಾರದ ಪತನವೂ ಆಯಿತು. ಅನಂತರ ಡಿಸೆಂಬರ್ ೬, ೧೯೯೨ರಂದು ಕರ ಸೇವಕರು ಮಸೀದಿಯನ್ನು ನೆಲಸಮ ಮಾಡಿದರು. ದೇಶಾದ್ಯಂತ ಬೆಂಕಿ ಹತ್ತಿಕೊಂಡು ಸಾವಿರಾರು ಜನರು ಸಾವನ್ನಪ್ಪಿದ್ದು ಈ ದೇಶ ಯಾವತ್ತೂ ಮರೆಯಲಾರದು. ಅನಂತರ ಯಥಾಸ್ಥಿತಿ ಕಾಯ್ದುಕೊಳ್ಳುವ ನಿಟ್ಟಿನಲ್ಲಿ ಸರಕಾರ ೬೭ ಎಕರೆ ಜಮೀನನ್ನು ಮಂದಿರ-ಮಸೀದಿ ನಿರ್ಮಾಣದ ಪ್ರಸ್ತಾವವನ್ನು ಮುಂದಿಟ್ಟು ರಿಸರ್ವ್ ಮಾಡಿಬಿಟ್ಟಿತು. ಅಕ್ಟೋಬರ್ ೨೩, ೧೯೯೪ರಂದು ಸುಪ್ರೀಂ ಕೋರ್ಟ್ ೨.೭೭ ಎಕರೆ ಜಮೀನಿನಲ್ಲಿ ಧರ್ಮ ನಿರಪೇಕ್ಷತೆ ಕಾಯ್ದಿಟ್ಟು ಕಾನೂನಿನ ಮಾಧ್ಯಮದಿಂದ ಪರಿಹಾರ ಕಂಡು ಹುಡುಕಲು ನಿರ್ಣಯಿಸಿತು. ಪ್ರಾಚ್ಯವಸ್ತು ಇಲಾಖೆಯ ತನಿಖಾ ಕಮಿಟಿ ರಚನೆಯಾಯಿತು. ಸಂತರನ್ನೂ ಒಳಗೊಂಡ 'ರಾಮ್‌ಲಲ್ಲಾ'ನ ಮಂದಿರ ನಿರ್ಮಾಣಕ್ಕಾಗಿ 'ಶ್ರೀರಾಮ ಜನ್ಮಭೂಮಿ ನ್ಯಾಸ್' ಎಂಬ ಸಂಸ್ಥೆಯೊಂದು ಸಕ್ರಿಯವಾಗಿ ಎದ್ದುನಿಂತಿತು.



ನೂತನ ರಾಮಮಂದಿರ ನಿರ್ಮಾಣಕ್ಕೆ ರಾಶಿ ಬಿದ್ದಿರುವ ಮಾರ್ಬಲ್‌ಗಳ ಎದುರು ಲೇಖಕ ಶ್ರೀನಿವಾಸ ಜೋಕಟ್ಟೆ ಮತ್ತು ಕಾರಂತ

ನಮ್ಮ ತಂಡ 'ಶ್ರೀರಾಮ ಜನ್ಮಭೂಮಿ ಮಂದಿರ ನಿರ್ಮಾಣ ನ್ಯಾಸ್' ಎಂಬುದರ ಪ್ರಧಾನ ಕಾರ್ಯಾಲಯ ಜಾನಕಿ ಘಾಟ್‌ನ 'ಶ್ರೀರಾಮ ದರಬಾರ್'ಗೆ ಪ್ರವೇಶಿಸಿತು.

ಇಲ್ಲಿ ಸ್ವಾಮಿ ರಾಮದಾಸ್ ಮಹಾರಾಜ್ ಹಾಗೂ ಅವರ ಚೇಲಾಗಳು, ಹಿಂದೂ ಧರ್ಮ ಪ್ರಚಾರಕರು ಎನ್ನುವವರು ತುಂಬ ಕಾಣಸಿಗುತ್ತಾರೆ. ಮುಗ್ಧ ಭಕ್ತರನ್ನು ಅವರಲ್ಲೊಬ್ಬ ಪ್ರಚಾರಕ ಪಾಂಡೆ ಎಂಬಾತ ಒಂದೆಡೆ ಕೂರಿಸಿ ಭಾಷಣ ಬಿಗಿದ. ''ರಾಮಮಂದಿರದ ಶೇ. ೭೦ರಷ್ಟು ಕೆಲಸ ಮುಗಿದಿದೆ'' ಎನ್ನುತ್ತಾ ಧನ ಸಹಾಯ ಮಾಡುವಂತೆ ವಿನಂತಿಸಿದ. ನೂತನ ರಾಮಮಂದಿರದಲ್ಲಿ ದಾನಿಗಳ ಹೆಸರಿನ ಕಲ್ಲಿನ ಫಲಕ ಕೆತ್ತಲಾಗುವುದು ಎಂದು ಕೆಲವನ್ನು ಸ್ಯಾಂಪಲ್ ಎಂದು ತೋರಿಸಿದ. ನಮ್ಮ ತಂಡದಲ್ಲಿದ್ದ ಕೆಲವು ಹಿರಿಯರು ೫೦೧ ರೂಪಾಯಿ ನೀಡಿದರು. ಇದಕ್ಕೆ ಯಾವುದೇ ರಸೀದಿಗಳಿಲ್ಲ. ಒಂದು ಬುಕ್‌ನಲ್ಲಿ ವಿಳಾಸ ಹೆಸರು ಬರೆದಿಟ್ಟರು, ಅಷ್ಟೇ. ಅನಂತರ ಸ್ವಾಮಿ ರಾಮದಾಸ ಮಹಾರಾಜ್ ಎಲ್ಲರಿಗೂ ಪ್ರಸಾದ ನೀಡಿದರು. ಸ್ವಾಮಿಯ ಪಕ್ಕದಲ್ಲೇ ನೂತನ ರಾಮಮಂದಿರದ ನಕ್ಷೆ ಕೂಡ ಇರಿಸಲಾಗಿತ್ತು. ''ನ್ಯಾಯಾಲಯದ ತೀರ್ಪು ಹೊರ ಬರುತ್ತಲೇ ೨೪ ಗಂಟೆಯೊಳಗೆ ಈ ರಾಮಮಂದಿರ ಕಟ್ಟಿಯೇ ಬಿಡುತ್ತೇವೆ. ಮಾರ್ಬಲ್‌ಗಳ ಕೆತ್ತನೆ ಕೆಲಸವೆಲ್ಲಾ ಮುಗಿದಿದ್ದು ಒಂದೆಡೆ ರಾಶಿ ಹಾಕಲಾಗಿದೆ'' ಎಂದರು.



ನೂತನ ರಾಮ ಮಂದಿರ ನಿರ್ಮಾಣಕ್ಕಾಗಿ ಧನ ಸಹಾಯ ಮಾಡುವಂತೆ ಚೇಲಾಗಳಿಂದ ಭಾಷಣ ಮಾಡಿಸುವ ಸ್ವಾಮಿ ರಾಮದಾಸ್ ಮಹಾರಾಜ್ (ಪಕ್ಕದಲ್ಲಿದೆ ನೂತನ ರಾಮ ಮಂದಿರದ ನಕ್ಷೆ)

ನಮ್ಮ ಗೈಡ್ ಬಳಿ ನೂತನ ರಾಮಮಂದಿರ ಕಟ್ಟುವ ಜಾಗಕ್ಕೆ ಕರೆದೊಯ್ಯುವಂತೆ ಹೇಳಿದೆವು. ಬಸ್ಸು ಹತ್ತಿ ಹೋಟೆಲ್‌ಗೆ ಬರುವ ದಾರಿಯಲ್ಲಿ ಸ್ವಲ್ಪ ದೂರಕ್ಕೆ (ಕೆತ್ತನೆ ಕೆಲಸಗಳು ಪೂರ್ಣಗೊಂಡ) ಮಾರ್ಬಲ್‌ಗಳು ರಾಶಿ ರಾಶಿ ಕಾಂಪೌಂಡೊಂದರಲ್ಲಿ ಕಂಡುಬಂತು. ಗೈಡ್ ಬಸ್ಸು ನಿಲ್ಲಿಸಿ ನಮ್ಮನ್ನು ಅಲ್ಲಿಗೆ ಕರೆದೊಯ್ದ. ಅಂದು ಕರ ಸೇವಕರು ರಾಶಿ ಹಾಕಿದ್ದ ಇಟ್ಟಿಗೆಗಳು ಕರಗಿ ನಾಶವಾದಂತೆ ಇವುಗಳಿಗೂ ಆ ದುರ್ದೆಸೆ ಬರಬಹುದೇ? ಇದು ನಮ್ಮಲ್ಲಿ ಅನೇಕರನ್ನು ಕಾಡಿದ ಪ್ರಶ್ನೆಯಾಗಿತ್ತು.



**ಕನಕ ಭವನ, ಅಯೋಧ್ಯೆ**

ಮಾರ್ಚ್-ಏಪ್ರಿಲ್‌ನಲ್ಲಿ ಬರುವ ರಾಮನವಮಿಗೆ ಇಲ್ಲಿ ಜಾತ್ರೆ (ಮೇಳಾ) ನಡೆಯುತ್ತದೆ. ಇದು ಬೌದ್ಧ, ಜೈನರ ತೀರ್ಥಕ್ಷೇತ್ರವೂ ಆಗಿದೆ. ೭ನೇ ಶತಾಬ್ದಿಯ ಬೌದ್ಧರ ಕಾಲದಲ್ಲಿ ಅಯೋಧ್ಯೆಯ ಹೆಸರು ಸಾಕೇತ ಆಗಿತ್ತು. ಮೊದಲ ಮತ್ತು ನಾಲ್ಕನೆಯ ಜೈನ ತೀರ್ಥಂಕರರ ಜನ್ಮವೂ ಇದೇ ಅಯೋಧ್ಯೆ ನಗರಿಯಲ್ಲಿ ಆಗಿತ್ತು ಎನ್ನಲಾಗಿದೆ.

ನಮ್ಮಲ್ಲಿ ಕೆಲವು ಹಿರಿಯರು ಹದಿನೈದು ಕಿ.ಮೀ. ವಿಸ್ತೀರ್ಣದಲ್ಲಿರುವ ಅಯೋಧ್ಯೆಯ ಇನ್ನಿತರ ಪ್ರೇಕ್ಷಣೀಯ ಸ್ಥಳಗಳಾದ ದಶರಥ ಗದ್ದಿ, ಲವಕುಶ ಮಂದಿರ, ಶ್ರೀರಾಮ್ ದರ್ಬಾರ್, ಜಾನಕೀ ಘಾಟ್ ಬಡಾಸ್ಥಾನ್, ವಾಲ್ಮೀಕಿ ಭವನ, ರಾಮ್ ಕಿ ಪೌಡಿ, ವೇದ ಮಂದಿರ, ತುಲಸಿ ಗಾರ್ಡನ್, ಕನಕ ಭವನ, ಸೀತಾ ಕಿ ರಸೋಯಿ, ರಾಜ್‌ಗದ್ದಿ, ದಶರಥ ಮಹಲು, ಸ್ವರ್ಗದ್ವಾರ್, ಲಕ್ಷ್ಮಣ ಘಾಟ್, ಬ್ರಹ್ಮಕುಂಡ್, ಕುಬೇರ ಪರ್ವತ, ಸುಗ್ರೀವ ಪರ್ವತ... ಇವುಗಳನ್ನು ವೀಕ್ಷಿಸಲು ಆತುರರಾಗಿದ್ದರು. ಗೈಡ್‌ಗೆ ಬೆನ್ನುಬಿದ್ದರು.

೧೯೯೨ರ ಘಟನೆಯ ನಂತರ ರಾಮ ಜನ್ಮಭೂಮಿ ಪರಿಸರದಲ್ಲಿ ಪೊಲೀಸರ ಸಂಖ್ಯೆ ಹೆಚ್ಚಿಸಲಾಯಿತು. ೫ನೇ ಜುಲೈ ೨೦೦೫ರಂದು ಭಯೋತ್ಪಾದಕರು ಅಯೋಧ್ಯೆಯ ರಾಮ ಜನ್ಮಭೂಮಿ  ಮಂದಿರ ಪರಿಸರಕ್ಕೆ ಹಿಂಬದಿಯಿಂದ ದಾಳಿ ನಡೆಸಿದ್ದರು. ಆದರೆ ಐದು ಭಯೋತ್ಪಾದಕರು ಸಾವನ್ನಪ್ಪಿದರು. ಈ ಘಟನೆಯ ನಂತರ ಮತ್ತೆ ಪೊಲೀಸ್ ಸಂಖ್ಯೆ ಏರಿಸಲಾಗಿದೆ.

ಈ ಘಟನೆಗೆ ಮೊದಲು 'ವಿವಾದಾಸ್ಪದ' ಸ್ಥಳದಲ್ಲಿ ಆಗಿನ ಪೊಲೀಸ್ ಮಹಾನಿರ್ದೇಶಕ ಯಶಪಾಲ್ ಸಿಂಗ್‌ರ ಮೂಲಕ ಬಂದ ಒಂದು ಹೇಳಿಕೆ 'ಸಿಪಾಯಿಗಳ ಸಂಖ್ಯೆ ಕಡಿಮೆ ಮಾಡಲಾಗುವುದು' ಎಂಬ ಸುದ್ದಿ ಪತ್ರಿಕೆಗಳಲ್ಲಿ ಬಂದದ್ದೂ ದಾಳಿಯನ್ನು ನಡೆಸಲು ಪ್ರಚೋದಿಸಿರಬಹುದೇನೋ: ಫೈಜಾಬಾದ್‌ನಿಂದ ಜೀಪಲ್ಲಿ ಬಂದ ಭಯೋತ್ಪಾದಕರು ಸೀತಾ ರಸೋಯಿಯ ಹಿಂಬದಿ ಭಾಗದಿಂದ ನುಗ್ಗಿದ್ದರು. ಆದರೆ ಅವರ ಯೋಜನೆ ಫಲ ನೀಡದೆ ಸಾವನ್ನಪ್ಪಿದ್ದರು. ಇಂದು ಅಯೋಧ್ಯೆಯ ಆ ೬೭ ಎಕರೆ ಜಾಗದಲ್ಲಿ ವಿಭಿನ್ನ ಸುರಕ್ಷಾ ಪಡೆಗಳ ೪೫೦ ಜವಾನರು ಒಂದು ಅವಧಿಗೆ ಕಾವಲು ಕಾಯುತ್ತಿದ್ದಾರೆ. ಅಂತಿಮ ಒಳಸುತ್ತಿನ ಸುರಕ್ಷೆಯ ಜವಾಬ್ದಾರಿ ಕೇಂದ್ರ ರಿಸರ್ವ್ ಪೊಲೀಸರಿಗೆ ವಹಿಸಲಾಗಿದೆ. ಉಳಿದ ಸುತ್ತುಗಳ ರಕ್ಷಣೆಯ ದಾಯಿತ್ವ ಉತ್ತರ ಪ್ರದೇಶ ಪೊಲೀಸ್ ಮತ್ತು ಪಿಎಸಿಯ ಜವಾಬ್ದಾರಿ.



'ರಾಮ್ ಕಿ ಪೌಡಿ' ಎದುರು ಲೇಖಕ ಶ್ರೀನಿವಾಸ ಜೋಕಟ್ಟೆ

ಸುರಕ್ಷೆಯ ನಿಮಿತ್ತ ಅಯೋಧ್ಯೆಯನ್ನು ಮೂರು ವಲಯಗಳನ್ನಾಗಿ ಮಾಡಲಾಗಿದೆ - ಲಾಲ್, ಪೀಲೇ, ಹರೇ (ಕೆಂಪು, ಹಳದಿ, ಹಸಿರು). ನಾಲ್ಕನೇ ವಲಯವಾಗಿ 'ನೀಲಾ' ಇದೆ. ನಿಷೇಧಿತ ಕ್ಷೇತ್ರ 'ರಾಮ್‌ಲಲ್ಲಾ' ಕೆಂಪು ವಲಯದಲ್ಲಿ ಬರುತ್ತದೆ. ೨೦೦೫ರಲ್ಲಿ ಭಯೋತ್ಪಾದಕರನ್ನು ಕಂಡು ರಾಜ್ಯ ಪೊಲೀಸರು ಪರಾರಿಯಾದರೂ, ಕೇಂದ್ರ ಪೊಲೀಸ್ ಪಡೆಯ ಜವಾನರೇ ಅವರನ್ನು ಕೊಂದಿದ್ದರು.

ಇಂದು ಅಯೋಧ್ಯೆಯ ಸುತ್ತಲಿನ ಅನೇಕ ಅಂಗಡಿಗಳಲ್ಲಿ ೧೯೯೨ರ ಬಾಬ್ರಿ ಮಸೀದಿ ಧ್ವಂಸಗೊಂಡ ವೀಡಿಯೊ ಸಿ.ಡಿ.ಗಳು ಮಾರಾಟವಾಗುತ್ತಿವೆ. ಬಂದ ಪ್ರವಾಸಿಗರಲ್ಲಿ ಹೆಚ್ಚಿನವರು ಈ ಸಿ.ಡಿ. ಖರೀದಿಸುತ್ತಾರೆ. ಪರಿಸರದ ಜನ ನೆಮ್ಮದಿ - ಸಂತೋಷದಲ್ಲಿರುವಂತೆ ಮಾತನಾಡುತ್ತಾರೆ. ಆದರೆ ಸ್ವಾರ್ಥಿ ಧಾರ್ಮಿಕ ನೇತಾರರು ಅಯೋಧ್ಯೆಯ ಹೆಸರಲ್ಲಿ ಸಾಕಷ್ಟು 'ಲಾಭ' ಗಳಿಸುತ್ತಾ ಬಂದಿದ್ದಾರೆ. ರಾಮಮಂದಿರದ ನೆಪದಲ್ಲಿ ಹಣ ಸಂಗ್ರಹಿಸುತ್ತಲೇ ಇದ್ದಾರೆ.

ಸಂಸತ್‌ನಲ್ಲಿ ಅತಿಹೆಚ್ಚು ಸಂಖ್ಯೆಯಲ್ಲಿ ಸದಸ್ಯರನ್ನು ಚುನಾಯಿಸಿ ಕಳುಹಿಸಿಕೊಡುವ ಉತ್ತರ ಪ್ರದೇಶದಲ್ಲಿ ಮಾಫಿಯಾಗಳೂ ಭಾರೀ ಸಂಖ್ಯೆಯಲ್ಲಿ ವಿಜೃಂಭಿಸುತ್ತಾ ಬಂದಿವೆ. ಕಳೆದೊಂದು ದಶಕದಲ್ಲಿ ಅಯೋಧ್ಯಾ ಪರಿಸರದ ಹೆಚ್ಚಿನ ಮಂದಿರಗಳಲ್ಲಿ ಸಾಧು ಸಂತರ ವೇಷದಲ್ಲಿ ಅಪರಾಧಿ ಶಕ್ತಿಗಳು ಸಕ್ರಿಯವಾಗಿವೆ. ಸಂತ ಮಹಂತರನ್ನು ಯಾವಾಗ ರಾಜಕೀಯ ರಂಗಕ್ಕೆ ಬಳಸಿಕೊಳ್ಳಲು ಆರಂಭಿಸಿದರೋ ಅಂದಿನಿಂದ ಈ ದೃಶ್ಯವಿದೆ. ಹೆಚ್ಚಿನ ಮಹಂತರು ಈಗಾಗಲೇ ರಾಜಕೀಯ ರಂಗದಲ್ಲೂ ಹೆಜ್ಜೆ ಗಟ್ಟಿಗೊಳಿಸಿದ್ದಾರೆ. ಅವರೆಲ್ಲಾ ವಿವಿಧ ರಾಜಕೀಯ ಪಕ್ಷಗಳಲ್ಲಿ ಹಂಚಿಹೋಗಿದ್ದಾರೆ. ಮಹಂತ-ಸಾಧುಗಳ ಜಗಳದ ಲಾಭವನ್ನು ಗಳಿಸಿದ ರಾಜಕೀಯ ಪಕ್ಷಗಳಿಂದಾಗಿ ಅಪರಾಧಿಗಳು ವಿವಿಧ ಮಂದಿರಗಳೊಳಗೆ ನುಸುಳುವಂತಾಗಿದೆ. ಪೊಲೀಸರು ಕೆಲವು ಮಂದಿರಗಳಲ್ಲಿ ಶರಾಬು ಬಾಟಲಿ ಜಪ್ತಿಮಾಡಿದ್ದಾರೆ. ತೊಂಭತ್ತರ ದಶಕದಲ್ಲೇ ಹನುಮಾನ್ ಗಢ, ನಿಷಾದ್ ಮಂದಿರ, ವೇದಶ್ರೀ ಮಂದಿರ, ರಾಮಘಾಟ್, ಸ್ವರ್ಗದ್ವಾರ್, ಪಂಚಮಹಲ್, ಖಾಕಿ ಅಖಾಡಾ, ತುಲಸೀಬಾಡಿ, ಮುಂತಾದ ಅನೇಕ ಪರಿಸರದಲ್ಲಿರುವ ಮಂದಿರಗಳಲ್ಲಿ ಅಪರಾಧಿ ಸಾಧು ಸಂತರ ಕುರಿತು ಪೊಲೀಸರು ತನಿಖೆ ಆರಂಭಿಸಿದ್ದು ಪತ್ರಿಕೆಗಳಲ್ಲಿ ದೊಡ್ಡ ಸುದ್ದಿಯಾಗಿತ್ತು. ಅಯೋಧ್ಯಾ ಮಂದಿರದ ಸರ್ವೆಯ ನಂತರ ಪೊಲೀಸ್ ವಿಭಾಗವು ೮೫ ಮಂದಿ ಅಪರಾಧಿ ಪ್ರವೃತ್ತಿಯ ಸಾಧು ಮಹಂತರ ಸೂಚಿ ಕೂಡ ತಯಾರಿಸಿತ್ತು! ಆಗಿನ ಪೊಲೀಸ್ ಅಧೀಕ್ಷಕ (ನಗರ) ರತನ್ ಕುಮಾರ್ ಶ್ರೀವಾಸ್ತವ್‌ರು ಈ ಎಲ್ಲಾ ಸೂಚಿಯನ್ನು ರಾಜ್ ಭವನಕ್ಕೆ ಕಳುಹಿಸಿದ್ದರು. ಇವರಲ್ಲಿ ಎಂಟು ಸಾಧುಗಳಂತೂ ಭಯಾನಕ ಅಪರಾಧ ಸೂಚಿಯಲ್ಲಿ ಕಾಣಿಸಿಕೊಂಡಿದ್ದರು. ಇಲ್ಲಿಯ ಮಂದಿರಗಳಲ್ಲಿ ಉಳಿದುಕೊಳ್ಳುವವರ ಬಗ್ಗೆ ಸರಿಯಾದ ವಿವರಣೆಗಳನ್ನು ಅಲ್ಲಿ ದಾಖಲಿಸುವುದಿಲ್ಲ. ಇದರಿಂದ ಪೊಲೀಸರಿಗೂ ತನಿಖೆ ಕಷ್ಟವಾಗುತ್ತದೆ. ಅಯೋಧ್ಯೆಯಿಂದ ಫೈಜಾಬಾದ್‌ನ ಹೋಟೆಲ್‌ಗೆ ಮರಳಿ ಮತ್ತೆ ಮುಂದಿನ ಪ್ರಯಾಣಕ್ಕಾಗಿ ವಾರಾಣಸಿಗೆ ಹೋಗಬೇಕಿತ್ತು.

ದಾರಿಯಲ್ಲಿ ಸೈಕಲ್ ರಿಕ್ಷಾದಲ್ಲಿ ಹಲವು ಮುಗ್ಧ ಮಕ್ಕಳು ಕೂತು ಶಾಲೆಯಿಂದ ಮನೆಗೆ ಬರುತ್ತಿದ್ದರು. ಅವರನ್ನು ನಿಲ್ಲಿಸಿ ಒಂದು ಫೋಟೊ ತೆಗೆಯುವೆ ಅಂದೆ. ಎಲ್ಲರೂ ತುಂಬಾ ನಕ್ಕರು. 'ಎಲ್ಲಿಂದ ಬಂದಿದ್ದೀರಿ ?' ಎಂದು ಕೇಳಿದರು. ಮುಂಬಯಿ ಅನ್ನದೆ ಕರ್ನಾಟಕದಿಂದ ಬಂದಿದ್ದೇವೆ ಅಂದೆ. ಫೋಟೊ ತೆಗೆದ ನಂತರ ಸೈಕಲ್ ರಿಕ್ಷಾ ತಳ್ಳಿಕೊಂಡು ಮುಂದಕ್ಕೆ ಹೋದ ಆ ರಿಕ್ಷಾವಾಲಾ.

ಈಗಲೂ ಅಯೋಧ್ಯೆ ನೆನಪಾಗುತ್ತದೆ. ಆಲ್ಬಮ್ ನೋಡಿದಾಗಲೆಲ್ಲ ಆ ಮುಗ್ಧ ಮಕ್ಕಳ ನಗು ಕಣ್ಣಮುಂದೆ ಬರುತ್ತದೆ. ಅಯೋಧ್ಯೆಯಲ್ಲಿ ಇಂತಹ ನಗು ಶಾಶ್ವತ ಇರಲಿ ಎಂದಷ್ಟೇ ನಮ್ಮ ಹಾರೈಕೆ.



ಅಯೋಧ್ಯೆಯಲ್ಲಿ ಶಾಲಾ ಮಕ್ಕಳು

ಚಿತ್ರ-ಲೇಖನ : ಶ್ರೀನಿವಾಸ ಜೋಕಟ್ಟೆ
[illegible]



**ನದಿಯ ತೀರದ ನಡಿಗೆ** (ಕವನ ಸಂಕಲನ)

*ಡಾ॥ ರಂಗನಾಥ ಕಂಟನಕುಂಟೆ*

**ಪುಟ : xiv + ೬೬** ಬೆಲೆ : ರೂ. ೫೦

**ಪ್ರಗತಿ ಗ್ರಾಫಿಕ್ಸ್ - ಬೆಂಗಳೂರು**, ನಂ. ೧೧೯, ೩ನೇ ತಿರುವು, ೮ನೇ ಮುಖ್ಯರಸ್ತೆ, ಹಂಪಿನಗರ (ಆರ್‌ಪಿಸಿ ಲೇಔಟ್) ವಿಜಯನಗರ, ಬೆಂಗಳೂರು - ೫೬೦ ೦೪೦

ಕಾಲ ಬದಲಾಗುತ್ತಿದೆ. ಪ್ರಾಚೀನ ಕವಿಗಳು ಶೃಂಗಾರ-ಸೌಂದರ್ಯ-ರಾಜಭೋಗ ಎಂದೆಲ್ಲ ಬಡಬಡಿಸಿದರು. ಕಾಲಸರಿದಂತೆ ಕವಿಗಳೆಲ್ಲ ಭಾವಜೀವಿಗಳಾದರು. ಅವರೆಲ್ಲರ ಕಾಲ ಹಾಗಿತ್ತು, ಬರೆದರು. ಹಿಂದೆಯೂ ಸಾಕಷ್ಟು ಕ್ರೌರ್ಯವಿತ್ತು. ಯುದ್ಧಗಳೆಲ್ಲ ಲೋಕ ಕಂಟಕರ ನಾಶಕ್ಕಾಗಿ ಎಂದರು. ಯಾರೂ ಪ್ರತಿಭಟಿಸಲಿಲ್ಲ. ಆದರೆ ಇಂದಿನ ನಮ್ಮ ಕವಿಗಳು ಹಾಗಲ್ಲ. ಕಣ್ಣೆದುರಿನ ಅನ್ಯಾಯ, ಕ್ರೌರ್ಯ ಕಂಡು ರೋಸಿಹೋಗಿದ್ದಾರೆ. ಹತಾಶೆಗೊಂಡ ಅವರು ಕಣ್ಣುಗಳನ್ನು ಬೆಂಕಿಯುಂಡೆ ಮಾಡಿಕೊಂಡು ಪ್ರತಿಭಟಿಸಿ ಬರೆಯುತ್ತಿದ್ದಾರೆ. ಅಸಂಖ್ಯಾತ ಜೀವರಾಶಿ, ಸಸ್ಯರಾಶಿ ನಶಿಸುತ್ತಿದ್ದು ಬಡವ, ಬಲಹೀನರಿಗೆ ಬದುಕುವ ದಾರಿಗಳಿಲ್ಲವೆಂಬ ಸಾಮಾಜಿಕ ಸತ್ಯವನ್ನು ಪದ್ಯಗಳಲ್ಲಿ ನಿರೂಪಿಸಿದ್ದಾರೆ.



**ಎನ್ನೆಲ್ - ಎರಡು ಮುಖ**

*ಉಮೇಶ್ ಕುಲಕರ್ಣಿ*



**ಪುಟ : x + ೯೪** ಬೆಲೆ : ರೂ. ೭೦

**ಸುಚಿತ್ರಾ ಸಿನಿಮಾ ಮತ್ತು ಕಲ್ಚರಲ್ ಅಕಾಡೆಮಿ**, ನಂ. ೩೬, ೯ನೇ ಮುಖ್ಯರಸ್ತೆ, ಬಿ. ವಿ. ಕಾರಂತ ರಸ್ತೆ, ಬನಶಂಕರಿ ೨ನೇ ಸ್ಟೇಜ್, ಬೆಂಗಳೂರು - ೫೬೦ ೦೭೦

ಮೂವತ್ತು ವರ್ಷಗಳ ಹಿಂದಿನ ಮಾತು. ನಾಂದಿ, ಉಯ್ಯಾಲೆಗಳಂಥ ಹೊಸ ಅಲೆಯ ಚಿತ್ರಗಳು ಪ್ರೇಕ್ಷಕನನ್ನು ಮೋಡಿ ಮಾಡಿದಂಥ ಸಮಯ. ಅಂದಿನ ಕೆಲವೇ ಪ್ರತಿಭಾವಂತ ಚಿತ್ರನಿರ್ದೇಶಕರಲ್ಲಿ ಎನ್. ಲಕ್ಷ್ಮೀನಾರಾಯಣ್ ಪ್ರಮುಖರು. ಯಾವುದೇ ಮುಜುಗರವಿಲ್ಲದೆ ಮನೆಮಂದಿಯೆಲ್ಲ ಕೂತು ನೋಡಬಹುದಾದ ಚಿತ್ರಗಳನ್ನು ಎನ್ನೆಲ್ ನೀಡಿದ್ದಾರೆ. ಆರು ಚಿತ್ರಗಳನ್ನಷ್ಟೇ ಇವರು ನಿರ್ದೇಶಿಸಿದ್ದರೂ ಅವೆಲ್ಲವೂ ಹೆಸರುಗಳಿಸಿ, ಪ್ರೇಕ್ಷಕರಿಂದ ವಿಮರ್ಶಕರಿಂದ ಗುರುತಿಸಲ್ಪಟ್ಟಿವೆ. ಈ ಪುಸ್ತಕದಲ್ಲಿ ಎನ್ನೆಲ್ ಅವರ ವ್ಯಕ್ತಿ ಚಿತ್ರಣವಿದ್ದು, ಅವರ ಚಿತ್ರಗಳ ಸಂಪೂರ್ಣ ವಿವರ ಹಾಗೂ ನಿರ್ದೇಶನವನ್ನು ಅವರು ನಿಭಾಯಿಸುತ್ತಿದ್ದ ಚಾಕಚಕ್ಯತೆಯ ಬಗ್ಗೆ ಸಾಕಷ್ಟು ವಿಸ್ತಾರವಾಗಿ ಹೇಳಲ್ಪಟ್ಟಿದೆ.

**ಕುರುಡ ಕುರುಡಿ** (ಕಾದಂಬರಿ)

*ಶಾಂತಾರಾಮ ಸೋಮಯಾಜಿ*

**ಪುಟ : ೩೧೬** ಬೆಲೆ : ರೂ. ೨೦೦

**ಸುಮುಖ ಪ್ರಕಾಶನ**, ೧೭೪ಇ/೨೮, ೧ನೇ ಮಹಡಿ, ೧ನೇ ಮುಖ್ಯರಸ್ತೆ, ವಿದ್ಯಾರಣ್ಯನಗರ, ಮಾಗಡಿ ರಸ್ತೆ ಟೋಲ್‌ಗೇಟ್, ಬೆಂಗಳೂರು - ೫೬೦ ೦೨೩



ವೈಚಾರಿಕತೆ ಮತ್ತು ನೈಜತೆಗೆ ಹೆಚ್ಚು ಮಹತ್ವವನ್ನು ಕೊಡುವ ಶ್ರೀ ಶಾಂತಾರಾಮ ಸೋಮಯಾಜಿ ತಮ್ಮ ಬರಹಗಳಲ್ಲೆಲ್ಲ ಇದನ್ನೇ ಪ್ರತಿಫಲಿಸಿದ್ದಾರೆ. ಸಾಹಿತ್ಯ ಮಾಧ್ಯಮದ ಮೂಲಕ ವಿಷಯ ವೈವಿಧ್ಯಗಳನ್ನು ಸಮಾಜ ಮಧ್ಯದಿಂದ ಮೊಗೆಮೊಗೆದು ತೋರಿಸುತ್ತ ಹೊಸ ದೃಷ್ಟಿಕೋನದಿಂದ ನಾವದನ್ನು ಸ್ವೀಕರಿಸಲು ವಿಶ್ಲೇಷಿಸಲು ಸವಾಲು ಹಾಕುತ್ತಾರೆ. ಇಲ್ಲಿನ ಕಥಾರೂಪದ ಕಾದಂಬರಿ ಪುಣ್ಯಭೂಮಿ ಭಾರತ ಮತ್ತು ಭೋಗಭೂಮಿ ಅಮೆರಿಕಾದ ನಡುವಿನ ಸಂಸ್ಕೃತಿಗಳ ತಿಕ್ಕಾಟ ಹಾಗೂ ಮನುಷ್ಯರ ನಡುವಿನ ಗುಣಾವಗುಣಗಳನ್ನು ಪರಿಚಯಿಸುತ್ತದೆ. ಕಥಾಹಂದರ ಹೇಗೇ ಇದ್ದರೂ ಕಥೆಯ ತಿರುಳು ಉತ್ತಮ ಮಟ್ಟದ್ದಾಗಿದ್ದು ಮೂಢನಂಬಿಕೆ, ಕ್ರೌರ್ಯಗಳನ್ನು ಕಿತ್ತೊಗೆಯುವ ಪ್ರಯತ್ನ ಶ್ಲಾಘನೀಯವಾಗಿದೆ.

**ಮಹಿಳಾ ಆರೋಗ್ಯ - ಒಂದು ಮರುಚಿಂತನೆ**

**(ಮಹಿಳಾ ಅಧ್ಯಯನಗಳ ದೃಷ್ಟಿಯಲ್ಲಿ)**

*ಡಾ॥ ಕೆ. ಸರೋಜಾ*

**ಪುಟ : xiv + ೧೫೬** ಬೆಲೆ : ರೂ. ೧೦೦

**ನಿರ್ದೇಶಕರು, ಪ್ರಸಾರಾಂಗ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

ಮಹಿಳೆಯರ ಸ್ವಾಸ್ಥ್ಯದ ಬಗ್ಗೆ ಸಮಾಜದಲ್ಲಿರುವ ದೃಷ್ಟಿಕೋನವನ್ನು ಅಭ್ಯಾಸಮಾಡಿ ಬರೆದ ಪುಸ್ತಕ. ಆರೋಗ್ಯವೆಂದರೆ ಅವಳ ಕಾಯಿಲೆಗೆ ಔಷಧಿ-ಚಿಕಿತ್ಸೆಯನ್ನು ಮಾತ್ರವೇ ಕೊಡಿಸುವುದಾಗಿರದೆ, ಆಕೆಗೆ ಆರೋಗ್ಯವಂತಳಾಗಿ ಬಾಳಲು ಸಾಮಾಜಿಕ ಪರಿಸರವನ್ನು ನಿರ್ಮಿಸುವುದು ಕೂಡ ಈ ವ್ಯಾಪ್ತಿಯಲ್ಲಿದೆ. ಗ್ರಾಮೀಣ ಅನಕ್ಷರಸ್ಥ ಮಹಿಳೆಯರಿಗೆ ತಾವು ಆರೋಗ್ಯವಾಗಿರಲು ಏನು ಮಾಡಬೇಕೆಂಬುದೇ ತಿಳಿದಿರುವುದಿಲ್ಲ. ಹದಿಹರೆಯದ ತೊಂದರೆಗಳು, ಎಳೆ ವಯಸ್ಸಿನ ಮದುವೆ, ಹೆರಿಗೆಗಳು ಮುಂದೆ ಅನೇಕ ಕಾಯಿಲೆಗಳಿಗೆ ದಾರಿಮಾಡಿಕೊಡುತ್ತದೆ. ಒಟ್ಟಾರೆ ಮಹಿಳಾ ಅಧ್ಯಯನದ ಮೂಲಕ ಆಕೆಯ ಆರೋಗ್ಯವನ್ನಿಲ್ಲಿ ವಿಶ್ಲೇಷಿಸಲಾಗಿದೆ. ದೈಹಿಕ-ಮಾನಸಿಕ ಆರೋಗ್ಯ ಹದಗೆಡಲು ಇಲ್ಲಿ ಇರುವ ಇನ್ನಿತರ ಸಂದರ್ಭಗಳೇನೆಂದು ಚಿಂತನೆ ಮಾಡಿದ್ದಾರೆ.



**ಮುಸ್ಲಿಮರ ತಲ್ಲಣ** (ಮನದಾಳದ ಮಾತು)

*ಅನುವಾದ - ಸಂಕಲನ : ಮಂಗ್ಳೂರ ವಿಜಯ*

**ಪುಟ : xx + ೩೦೮** ಬೆಲೆ : ರೂ. ೩೨೮

**ಸಂಬುದ್ಧ ಪ್ರಕಾಶನ**, ವಿದ್ಯಾ ಟ್ಯುಟೋರಿಯಲ್ಸ್ ಪಕ್ಕ, ವಿ. ನಾಗನಹಳ್ಳಿ, ಬೆಂಗಳೂರು - ೫೬೦ ೦೩೨

ಮುಸ್ಲಿಂ ಸಮುದಾಯದ ಬಗ್ಗೆ ಅತ್ಯಂತ ಗಹನವಾದ ವಿಚಾರಗಳನ್ನು ಜಾಗತಿಕ ಮಟ್ಟದಲ್ಲಿ ವಿಶ್ಲೇಷಣೆ ಮಾಡಿ, ಚರಿತ್ರೆಯ ಆಳಕ್ಕಿಳಿದು ಶೋಧಿಸಿದ ಲೇಖನಗಳಿವು. ಮುಸ್ಲಿಂ ಬಾಂಧವರೇ ಇಲ್ಲಿನ ಹೆಚ್ಚಿನ ಲೇಖನಗಳನ್ನು ಬರೆದಿದ್ದಾರೆ. ಇವನ್ನು ಮುಸ್ಲಿಮೇತರರೇ ಮೊತ್ತಮೊದಲು ಓದಿ ಅರ್ಥೈಸಿಕೊಳ್ಳಬೇಕಾದ ಅಗತ್ಯವಿದೆ. ಭಾರತದ ಚರಿತ್ರೆಯಲ್ಲಿ ಹಿಂದೂ-ಮುಸ್ಲಿಂ ಇಬ್ಬರಿಗೂ ಪಾಲಿರುತ್ತದೆ. ಎಲ್ಲ ಅಪರಾಧ ಮತ್ತು ಭಯೋತ್ಪಾದನೆಗಳ ಹಿಂದೆ ಮುಸ್ಲಿಮರ ಕೈವಾಡವನ್ನು ಶಂಕಿಸುತ್ತ ಇತರ ಜನಾಂಗ ಅವರೊಂದಿಗೆ ಬರಿಯ ದ್ವೇಷ ಸಾಧಿಸುವುದು ಅವರಿಗೆ ನೋವುಂಟು ಮಾಡಿದೆ. ಇಸ್ಲಾಂ ಧರ್ಮವು ಹತ್ಯೆ ಅಥವಾ ಭಯೋತ್ಪಾದನೆಯನ್ನು ಮಾನ್ಯ ಮಾಡಿಲ್ಲ ಹಾಗೂ ಬೋಧಿಸಿಲ್ಲ; ಇತರ ಕಾರಣಗಳಿಂದಾಗಿ ಜಗತ್ತಿನಲ್ಲಿಂದು ಶಾಂತಿ ಕೆಡುತ್ತಿದೆಯೆಂಬುದು ಇಲ್ಲಿನ ಲೇಖನಗಳ ಅಭಿಪ್ರಾಯ.

**ಆಕಾಂಕ್ಷೆ** (ಕಥಾ ಸಂಕಲನ)

*ಬಿ. ಪಿ. ಶಿವಾನಂದರಾವ್*

**ಪುಟ : iv + ೧೬೦** ಬೆಲೆ : ರೂ. ೧೦೦

**ಪಾಂಚಜನ್ಯ ಪಬ್ಲಿಕೇಷನ್ಸ್**, ನಂ. ೪೨೦/೨೮, ೬-೭ನೇ ಕ್ರಾಸ್ ನಡುವೆ, ಅಮರಜ್ಯೋತಿನಗರ, ಬೆಂಗಳೂರು - ೫೬೦ ೦೪೦



ನಮ್ಮ ಮಧ್ಯೆ ದಿನವೂ ಎಂಬಂತೆ ಎಲ್ಲ ಕಡೆ ನಡೆಯುವ ನಿಜ ಸಂಗತಿಗಳೇ ಇಲ್ಲಿ ಕಥೆಗಳ ರೂಪದಲ್ಲಿ ಪ್ರಸ್ತಾಪಿಸಲ್ಪಟ್ಟಿವೆ. ನಮಗೆ ಬದುಕಲು ಬೇಕಾದ ಪರಿಸರದ ಪರಿಚಯ ಮಾಡಿಕೊಡುತ್ತ, ಮನುಷ್ಯ ಸಂಬಂಧಗಳನ್ನೇ ಜಾಲಾಡುತ್ತವೆ ಇವು. ಆಡುಮಾತಿನದೇ ಶೈಲಿಯಿಂದಾಗಿ ನಮ್ಮೊಂದಿಗೇ ಕುಳಿತು ನೇರವಾಗಿ ಮಾತನಾಡುವಂತೆ ಅನ್ನಿಸುವ ಕಥಾಪಾತ್ರಗಳು. ಇವು ಯಾವುದೇ ಕ್ರಾಂತಿಕಾರಿ ಬದಲಾವಣೆಯತ್ತ ಹೊರಳುವ ಆಸಕ್ತಿಯಿರದೆ ನಿಂತಲ್ಲೇ ಗಿರಕಿ ಹೊಡೆಯುತ್ತಿರುವುದು ನಿಜವಾದರೂ ಮನದಾಳದಲ್ಲೆಲ್ಲೋ ಸ್ವಸ್ಥ ಜೀವನದ ಬಗ್ಗೆ ಅತಿ ಎತ್ತರವಾದ ಆಕಾಂಕ್ಷೆ ಹೊಂದಿವೆ. ಕಥೆಗಾರ ಶ್ರೀ ಶಿವಾನಂದರಾವ್ ಇನ್ನಿತರ ಸಾಹಿತ್ಯ ಪ್ರಕಾರಗಳಲ್ಲೂ ಈಗಾಗಲೇ ಬರೆದಿದ್ದು ಕನ್ನಡಿಗರಿಗೆ ಸುಪರಿಚಿತರು.

– ಇಂದಿರಾಕುಮಾರಿ

*೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*



# ಅಳಿವಿನ ಅಂಚಿನಲ್ಲಿರುವ ಮೂಡಲಪಾಯದ ಬಯಲಾಟ

ಪರಮೇಶ್ವರಯ್ಯ ಸೊಪ್ಪಿಮಠ

**ಜ**ನಪದ ರಂಗಭೂಮಿ ವೈವಿಧ್ಯತೆಗೆ ಹೆಸರಾಗಿದೆ. ಎಲ್ಲ ಜನಪದಕಲೆಗಳು ಒಂದೇ ಮೂಲದಿಂದ ಬಂದಿದ್ದರೂ, ಸ್ಥಳದಿಂದ ಸ್ಥಳಗಳ ನಡುವಿನ ಅಂತರ ದೂರವಾದಂತೆಲ್ಲ ಅಲ್ಲಿನ ಪರಿಸರಕ್ಕೆ ತಕ್ಕಂತೆ ವ್ಯತ್ಯಾಸಗೊಂಡು ಹೊಸ ಹೊಸ ರೂಪ ತಳೆದಿವೆ. ವರ್ಷಗಳುರುಳಿದಂತೆ ಈ ವ್ಯತ್ಯಾಸ ಹೆಚ್ಚಾಗುತ್ತ ಸಾಗಿದೆ. ಹಾಗಾಗಿ ಕರ್ನಾಟಕದಲ್ಲಿ ಪ್ರಚಲಿತವಿರುವ ಯಕ್ಷಗಾನ, ಬಯಲಾಟ, ತಮಿಳುನಾಡಿನ ತೆರುಕ್ಕೂತ್ತು, ಆಂಧ್ರದ ವೀಧಿನಾಟಕ ಹಾಗೂ ಕೇರಳದ ಕಥಕ್ಕಳಿ, ಇವೇ ಜನಪದ ರಂಗಭೂಮಿಯಿಂದ ಬೆಳೆದುಬಂದ ವಿಶಿಷ್ಟ ರೂಪಗಳಾಗಿವೆ. ಅಲ್ಲದೆ ಜನಪದ ರಂಗಭೂಮಿಗೆ ಪುರಾತನ ಇತಿಹಾಸವಿದ್ದು, ನಮ್ಮ ಸಂಸ್ಕೃತಿಯಲ್ಲಿನ ಹಲವಾರು ಅಂಶಗಳನ್ನು ಮೈಗೂಡಿಸಿಕೊಂಡು ಬಂದಿದೆ. ಇದು ಇಂದಿನ ಬಹುತೇಕ ಶಿಷ್ಟ ಕಲೆಗಳಿಗೆ ಪ್ರೇರಣೆಯನ್ನು ನೀಡಿದೆ.

ಹಿಂದಿನಿಂದಲೂ ಗ್ರಾಮೀಣರಿಗೆ ಮನರಂಜನೆ ಒದಗಿಸುತ್ತಾ ಬಂದಿರುವ ಹವ್ಯಾಸ ಕಲೆ ಬಯಲಾಟ. ನಮ್ಮ ರಾಜ್ಯದಲ್ಲಿ ಯಕ್ಷಗಾನ-ಬಯಲಾಟವನ್ನು ಆಟ, ಮೇಳ, ಅಡ್ಡದಾಟ, ಬೈಲ್ಕತೆ, ಪ್ರಸಂಗ ಮುಂತಾದ ಹೆಸರುಗಳಿಂದಲೂ ಕರೆಯುತ್ತಾರೆ. ಇದೊಂದು ಸಂಗೀತ, ಸಾಹಿತ್ಯ, ನಾಟಕ, ನೃತ್ಯಗಳ ಸಮ್ಮಿಶ್ರ ಕಲೆ. ಕುಣಿತದ ವಿಶಿಷ್ಟ ಬಗೆಯಿಂದಾಗಿ ಗಂಡುಕಲೆ ಎಂದು ಪ್ರಖ್ಯಾತಿಗೊಂಡಿದೆ. ಇದರ ಒಂದು ಮುಖ್ಯ ಅಂಗ ಗೀತೆ ಎಂಬಂತೆ ಕಂಡುಬಂದರೂ ಉಳಿದವು ಅದಕ್ಕೆ ಬೆಂಬಲವಾಗಿರುವುದರಿಂದ ವಿಶಿಷ್ಟ ಶೋಭೆ ಯನ್ನು ತಂದಿವೆ. ಬಯಲಾಟ ಇಡೀ ರಾತ್ರಿ ನಡೆಯುವುದರಿಂದ ಪ್ರೇಕ್ಷಕರಿಗೆ ಬೇಸರ ಬಾರದಂತೆ ವಿವಿಧ ಬಗೆಯ ಕಲಾ ಪ್ರಕಾರಗಳನ್ನು ಅದರಲ್ಲಿ ಅಳವಡಿಸಿಕೊಂಡಿದ್ದಾರೆ.

ಬಯಲಿನಲ್ಲಿ ನಡೆಯುವ ಯಾರಿಗೂ ಯಾವ ನಿರ್ಬಂಧಗಳೇ ಇಲ್ಲದ ಆಟವೇ ಬಯಲಾಟ. ಈ ಕಾರಣದಿಂದಲೇ ಇದಕ್ಕೆ ಬಯಲಾಟ ಎಂದು ಕರೆಯುತ್ತಾರೆ. ಇದರ ರಂಗಸ್ಥಳ ಹೆಚ್ಚು ಆಡಂಬರವಿಲ್ಲದೆ ಅಲ್ಪ ವೆಚ್ಚದಲ್ಲಿ ರೂಪಗೊಳ್ಳುತ್ತದೆ. ಪ್ರಮುಖವಾಗಿ ದೇವಸ್ಥಾನಗಳು, ಧರ್ಮಕ್ಷೇತ್ರಗಳು, ಜಾತ್ರೆಗಳು, ಹಾಗೂ ಊರಿನ ಕೇಂದ್ರ ಸ್ಥಳಗಳೇ ಈ ರಂಗಸ್ಥಳ ನಿರ್ಮಿಸಲು ಯೋಗ್ಯವಾದ ಸ್ಥಳಗಳಾಗಿದ್ದವು. ರಂಗಸ್ಥಳ ಹೀಗೇ ಇರಬೇಕೆಂಬ ಕಟ್ಟಳೆಯೇನೂ ಇಲ್ಲ. ನಾಲ್ಕು ಕಂಬಗಳ ಮಧ್ಯೆ ಕಾಯ್ದಿರಿಸಿದ ಜಾಗವೇ ಬಯಲು ರಂಗಸ್ಥಳ. ಅದಕ್ಕೆ ಯಾವ ಮುಚ್ಚುಮರೆ ಇರುವುದಿಲ್ಲ. ಪಾತ್ರಗಳು ರಂಗ ಪ್ರವೇಶಿಸುವ ಸನ್ನಿವೇಶದಲ್ಲಿ ಮಾತ್ರ ಪರದೆಯನ್ನು ಹಿಡಿದುಕೊಳ್ಳುವ ವ್ಯವಸ್ಥೆ ಇತ್ತು. ರಂಗಸ್ಥಳದ ಸಂಪ್ರದಾಯಗಳು ಎಲ್ಲೆಡೆಯಲ್ಲಿ ಒಂದೇ ಆಗಿವೆ.

ಸಾಮಾನ್ಯವಾಗಿ ಸುಗ್ಗಿಯ ಕೆಲಸ ಮುಗಿದ ಮೇಲೆ ಬಯಲಾಟದ ಸುಗ್ಗಿ ಪ್ರಾರಂಭವಾಗುತ್ತಿತ್ತು. ಬಯಲಾಟ ಪ್ರದರ್ಶನಕ್ಕೆ ಸಾಕಷ್ಟು ಪೂರ್ವಸಿದ್ಧತೆ ಹಾಗೂ ಪರಿಶ್ರಮ ಬೇಕು. ಬಯಲು ನಾಟಕದ ಆಸಕ್ತರೆಲ್ಲ ಒಂದೆಡೆ ಸೇರಿ ತಾವು ಪ್ರದರ್ಶಿಸುವ ಆಟವನ್ನು ಆಯ್ಕೆಮಾಡಿಕೊಳ್ಳುತ್ತಾರೆ. ಇಲ್ಲಿ ಭಾಗವತ ಅಥವಾ ಮಾಸ್ತರ್‌ರ ಜವಾಬ್ದಾರಿ ಹೆಚ್ಚಿರುತ್ತದೆ. ಕಥೆಯಲ್ಲಿನ ಪಾತ್ರಧಾರಿಗಳನ್ನು ದೈಹಿಕವಾಗಿ, ಮಾತನಾಡುವ ಕಲೆಗಳನ್ನಾಧರಿಸಿ, ಆಯ್ಕೆ ಮಾಡುತ್ತಾರೆ. ಆಯ್ಕೆಯಾದ ಕಲಾವಿದರು ಅನೇಕ ತಿಂಗಳುಗಳ ಕಾಲ ಪ್ರತಿದಿನ ರಾತ್ರಿ ತಾಲೀಮು ನಡೆಸುತ್ತಾರೆ.

ಇಲ್ಲಿ ಪಾತ್ರಗಳ ವಿಷಯ ಬಂದಾಗ, ನಮ್ಮ ಗ್ರಾಮೀಣ ಹವ್ಯಾಸಿ ಕಲಾವಿದರು ಮಾತ್ರ ಬಹುತೇಕ ಅನಕ್ಷರಸ್ಥರು ಹಾಗೂ ಬಡವರಿರುತ್ತಾರೆ. ರೈತಾಪಿ ವರ್ಗದವರು, ಕೂಲಿ ಕಾರ್ಮಿಕರು, ಹಮಾಲರು ಇದನ್ನು ಹೆಚ್ಚಾಗಿ ಪ್ರೀತಿಸುತ್ತಾರೆ. ಇಲ್ಲಿ ಪಾತ್ರಧಾರಿಗಳು ಮಾತುಗಳನ್ನು ಕಂಠಪಾಠ ಮಾಡುತ್ತಾರೆ. ಸಾಮಾನ್ಯವಾಗಿ ೧೦ ನಿಮಿಷಗಳವರೆಗೆ ತಮ್ಮ ಪಾತ್ರದ ಮಾತುಗಳನ್ನು ನಿರರ್ಗಳವಾಗಿ ಹೇಳುವ ಶಕ್ತಿಯನ್ನು ಹೊಂದಿರುತ್ತಾರೆ. ಬಯಲಾಟಗಳು ಲಿಖಿತರೂಪದಲ್ಲಿ ಕಡಿಮೆ ಇರುವುದರಿಂದ ಮೌಖಿಕರೂಪದಲ್ಲಿ ಕಲಿಕೆಯಿಂದ ಇವು ಮತ್ತೊಬ್ಬರಿಗೆ ವರ್ಗಾವಣೆಯಾಗುತ್ತವೆ. ಒಂದು ಪಕ್ಷ ಪಾತ್ರಧಾರಿ ಮಾತು ತಪ್ಪಿದಾಗ ಸಾರಥಿ ಅವನ ನೆರವಿಗೆ ಬರುತ್ತಾನೆ.

ಈ ಬಯಲು ನಾಟಕದ ಕಥಾವಸ್ತುವನ್ನು ರಾಮಾಯಣ, ಮಹಾಭಾರತ, ಭಾಗವತ ಹಾಗೂ ಪುರಾಣಗಳಿಂದ ಆಯ್ಕೆಮಾಡಿಕೊಂಡಿರುತ್ತಾರೆ. ಕೆಲವು ಜನಪದ ಕಥೆಗಳು, ಐತಿಹಾಸಿಕ ಕಥಾಭಾಗಗಳೂ ಸೇರಿರುತ್ತವೆ. ಮೂಡಲಪಾಯ ಪ್ರಸಂಗದ ಸಾಹಿತ್ಯವೆಲ್ಲ ಪದ್ಯ-ಗದ್ಯ ಮಿಶ್ರಿತವಾಗಿರುತ್ತದೆ.

ಬಯಲಾಟದಲ್ಲಿ ಬಳಸುವ ವಾದ್ಯಗಳ ಸಂಖ್ಯೆ ಅಷ್ಟೇನೂ ಹೆಚ್ಚಿಲ್ಲದಿದ್ದರೂ ಅವುಗಳ ಪರಿಣಾಮ ಹೆಚ್ಚಿರುತ್ತದೆ. ಈ ವಾದ್ಯಗಳ ಬಳಕೆಯಲ್ಲಿ ಪ್ರಾದೇಶಿಕ ಭಿನ್ನತೆ ಕಂಡುಬರುತ್ತದೆ. ಸಾಮಾನ್ಯವಾಗಿ ಮೃದಂಗ, ತಾಳ, ಮುಖವೀಣೆ, ಹಾರ್ಮೋನಿಯಂಗಳನ್ನು ಬಳಸುತ್ತಾರೆ. ಕಲಾವಿದರ ವೇಷಭೂಷಣಗಳು ವೈವಿಧ್ಯದಿಂದ ಕೂಡಿರುತ್ತವೆ. ಪಾತ್ರಗಳಿಗನುಗುಣವಾಗಿ ಬಣ್ಣಗಳನ್ನು ಹಚ್ಚುತ್ತಾರೆ. ಸ್ಥಳೀಯವಾಗಿ ಪರಿಸರದಲ್ಲಿ ದೊರಕುವ ಸಾಮಗ್ರಿಗಳನ್ನೇ ಹೆಚ್ಚಾಗಿ ಉಪಯೋಗಿಸಲಾಗುತ್ತದೆ.

ಬಯಲಾಟ ಕಲೆಯ ಪ್ರಯೋಗಗಳು ಸಾಕಷ್ಟು ಕಡಿಮೆಯಾಗಿವೆ. ಅಲ್ಲೊಂದು-ಇಲ್ಲೊಂದು ಪ್ರದರ್ಶನವಾಗುತ್ತಿರುವುದರಿಂದ ತೋರಿಕೆಗೆ ಬದುಕುಳಿದಂತಾಗಿದೆ. ಇದನ್ನು ಉಳಿಸಿ-ಬೆಳೆಸುವ ಸಾಂಘಿಕ ಪ್ರಯತ್ನಗಳು ಎಲ್ಲೂ ನಡೆಯುತ್ತಿಲ್ಲ. ಮುಖ್ಯವಾಗಿ ಬಯಲಾಟದ ಮಾಸ್ತರರು ನಮ್ಮಿಂದ ಮರೆಯಾದರೆ ಅಲ್ಲಿಗೆ ಈ ಕಲೆ ನಶಿಸುತ್ತದೆ. ಅದಕ್ಕಾಗಿ ತಕ್ಷಣ ಎಚ್ಚೆತ್ತುಕೊಂಡು ಇದರ ಬಗ್ಗೆ ಸಂಶೋಧನಾ ಪುಸ್ತಕಗಳನ್ನು ರಚಿಸುವುದಲ್ಲದೆ, ಉಳಿಕೆಗೆ ಬೇಕಾದ ಎಲ್ಲ ಕ್ರಮಗಳನ್ನು ಕೈಗೊಳ್ಳಬೇಕಿದೆ. ಇಲ್ಲದಿದ್ದಲ್ಲಿ ಮುಂದಿನ ಪೀಳಿಗೆಗೆ ಈ ಕಲೆ ಇತ್ತೆಂದು ಹೇಳಲು ಸಾಧ್ಯವಾಗುವುದಿಲ್ಲ. ನಮ್ಮ ವಿಶ್ವವಿದ್ಯಾಲಯಗಳು, ಜನಪದ ತಜ್ಞರು ಈ ಕಲೆಯನ್ನು ಪರಿಷ್ಕರಿಸಿ, ೩ ತಾಸಿಗೆ ನಿಗದಿಗೊಳಿಸಿ ಕಟ್ಟಿ ಬೆಳೆಸುವ ಕಾರ್ಯ ಮಾಡಬೇಕು.

ಬಯಲಾಟದ ಪ್ರಾರಂಭದಲ್ಲಿ ಗಣೇಶ, ಸರಸ್ವತಿ ಹಾಗೂ ಬಾಲ ಗೋಪಾಲರು ಮೊದಲು ರಂಗ ಪ್ರವೇಶಿಸಿ ಆಟಕ್ಕೆ ಯಶಸ್ಸನ್ನು ಹಾರೈಸುತ್ತಾರೆ. ನಂತರ ಪಾತ್ರಗಳು ರಂಗ ಪ್ರವೇಶಿಸುವ ಕ್ರಮದಲ್ಲಿಯೂ ಒಂದು ವರ್ಗದ ಪಾತ್ರಗಳಿಗೂ ಮತ್ತೊಂದು ವರ್ಗದ ಪಾತ್ರಗಳಿಗೂ ಭಿನ್ನತೆ ಇದೆ. ಈ ದೃಷ್ಟಿಯಲ್ಲಿ ಘೋರ ಅಥವಾ ಖಳನಾಯಕ ಪಾತ್ರಗಳ ಪ್ರವೇಶ ಅದ್ಭುತವಾಗಿರುತ್ತದೆ. ಇಂಥ ಪಾತ್ರಗಳ ಪ್ರವೇಶ ಮುಂಚಿತ ವಾಗಿಯೇ ಪ್ರೇಕ್ಷಕರಲ್ಲಿ ವಿಶೇಷ ಕುತೂಹಲವನ್ನು ಕೆರಳಿಸುತ್ತದೆ. ಅಂದರೆ ಈ ಪಾತ್ರಗಳು ರಂಗದ ಹಿಂಭಾಗದಿಂದ ಪ್ರವೇಶಿಸದೆ ರಂಗಕ್ಕೆ ಅಭಿಮುಖವಾಗಿ ಪ್ರೇಕ್ಷಕರ ಮಧ್ಯದಿಂದ ಹಾದುಬರುತ್ತವೆ.

ಬಯಲಾಟದಲ್ಲಿ ದೊಡ್ಡಾಟ ಮತ್ತು ಸಣ್ಣಾಟಗಳೆಂದು ಸ್ಥೂಲವಾಗಿ ಎರಡು ಭಾಗ ಮಾಡಬಹುದು. ಪೌರಾಣಿಕ ಪ್ರಸಂಗಗಳನ್ನೊಳಗೊಂಡ ದೊಡ್ಡಾಟವು ರಾತ್ರಿಯೆಲ್ಲಾ ನಡೆದು ಸೂರ್ಯೋದಯದ ವೇಳೆಗೆ ಮುಕ್ತಾಯಗೊಳ್ಳುತ್ತದೆ. ಇದಕ್ಕೆ ಹೆಚ್ಚಿನ ಸ್ಥಳ, ಕಲಾವಿದರು, ಪರಿಕರಗಳು ಹಾಗೂ ಸಮಯ ಅವಶ್ಯಕ. ಇದರಲ್ಲಿ ದೊಡ್ಡ ಹಾಡುಗಳು ಇರುತ್ತವೆ. ಭಾಗವತರು ಹಿಮ್ಮೇಳದ ಸಹಾಯದಿಂದ ಹಾಡುತ್ತಾರೆ. ಹಾಡುಗಳು ಭಾಮಿನಿ, ಕಂದ ಪದ್ಯ, ಶ್ಲೋಕ ರೂಪದಲ್ಲಿದ್ದು ಆದಿ, ಝಂಪೆ ಮುಂತಾದ ತಾಳಗಳಲ್ಲಿರುತ್ತವೆ.

ದೊಡ್ಡಾಟದಲ್ಲಿ ಹೆಚ್ಚು ಪ್ರಸಿದ್ಧವಾದ ಕಥೆಗಳೆಂದರೆ ಕರಿಭಂಟನ ಕಾಳಗ, ಕುರುಕ್ಷೇತ್ರ, ಕೃಷ್ಣ ಸಂಧಾನ, ವಿರಾಟ ಪರ್ವ, ತಾರಕಾಸುರ ವಧೆ, ಅಶ್ವಮೇಧಯಾಗ, ರತಿ ಕಲ್ಯಾಣ, ಲವಕುಶರ ಕಾಳಗ, ಭೀಮಾರ್ಜುನ ವಿಜಯ, ಸತ್ಯ ಹರಿಶ್ಚಂದ್ರ, ಭಕ್ತ ಮಾರ್ಕಂಡೇಯ, ಲಂಕಾದಹನ, ಪಾಂಡುವಿಜಯ, ದೇವೀ ಮಹಾತ್ಮೆ, ಇಂದ್ರಜಿತ್ ಕಾಳಗ, ಶನಿ ಮಹಾತ್ಮೆ. ಬಯಲಾಟಗಳು ಇಂದಿಗೂ ಹಿರಿಯ ತಲೆಮಾರಿನಲ್ಲಿ ನೆನಪಿನಲ್ಲುಳಿದಿವೆ.

ಬಯಲಾಟದಲ್ಲಿ ಸಣ್ಣಾಟಕ್ಕೆ ಒಂದು ಪ್ರತ್ಯೇಕ ಸ್ಥಾನವಿದೆ. ಹಾಗೆಂದು ಇದು ದೊಡ್ಡಾಟಕ್ಕೆ ವಿರುದ್ಧವಾಗಿ ಹುಟ್ಟಿಕೊಂಡಿದುದೇನಲ್ಲ. ಗ್ರಾಮೀಣರು ಆರ್ಥಿಕ ಮುಗ್ಗಟ್ಟಿನಿಂದ ಹಾಗೂ ಸೀಮಿತ ಪರಿಕರಗಳೊಂದಿಗೆ ಜನರಿಗೆ ಮನರಂಜನೆ ನೀಡಲು ದೊಡ್ಡಾಟವನ್ನು ಸುಲಭೀಕರಿಸಿ, ಅದರದೇ ಮೂಲ ಅಂಶಗಳನ್ನಿಟ್ಟುಕೊಂಡು ಸಣ್ಣಾಟ ಆಡಲು ಪ್ರಾರಂಭಿಸಿದರು. ಈ ಆಟಕ್ಕೆ ದೊಡ್ಡಾಟಕ್ಕೆ ಬೇಕಾದಷ್ಟು ಸಮಯ, ರಂಗಸಜ್ಜಿಕೆ ಹಾಗೂ ಕಲಾವಿದರ ಅವಶ್ಯಕತೆ ಇಲ್ಲ. ಸಣ್ಣಾಟದಲ್ಲಿ ಶರಣರಿಗೆ ಸಂಬಂಧಿಸಿದ ಹಾಗೂ ರಾಜರಿಗೆ ಅನ್ವಯಿಸುವ ಕಥೆಗಳನ್ನು ಹೆಚ್ಚಾಗಿ ಆಡುತ್ತಾರೆ. ಸಣ್ಣಾಟದಲ್ಲಿ ಸತ್ಯ ಹರಿಶ್ಚಂದ್ರ, ಬಭ್ರುವಾಹನ, ಹೇಮರೆಡ್ಡಿ ಮಲ್ಲಮ್ಮ, ತಿರುನೀಲಕಂಠ, ನಿಜಗುಣ ಶಿವಯೋಗಿ ಅಲ್ಲದೆ ಸಂಗ್ಯಾ ಬಾಳ್ಯಾ, ಗಂಡುಭರಮನ ಆಟ ಪ್ರಮುಖವಾದವು. ಸಣ್ಣಾಟ ಮನರಂಜನೆ ನೀಡುವುದಲ್ಲದೆ, ನೀತಿಯನ್ನು ಬೋಧಿಸುತ್ತಾ ಜನಪ್ರಿಯವಾಗಿತ್ತು.

ಇಷ್ಟೊಂದು ಶ್ರೀಮಂತ ಪರಂಪರೆ ಹೊಂದಿರುವ ಬಯಲಾಟವೂ ನಾನಾ ಕಾರಣಗಳಿಂದ ಅಲಕ್ಷ್ಯಕ್ಕೊಳಗಾಗಿರುವುದರಿಂದ ಅದರ ಸ್ಥಿತಿ ಚಿಂತಾಜನಕವಾಗಿದೆ. ಇದರ ಕೇಂದ್ರಬಿಂದುವಾದ ರೈತ ಇಂದು ಸಂಕಷ್ಟದಲ್ಲಿದ್ದಾನೆ, ಅನೇಕ ಸಮಸ್ಯೆಗಳ ಸುಳಿಯಲ್ಲಿ ಕಳೆಗುಂದಿದ್ದಾನೆ. ತನ್ನ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಸಮಯ ಸಾಲದಿರುವಾಗ ಈ ಆಟ ಆಡಲು ಸಮಯ ಹೇಗೆ ಸಿಕ್ಕೀತು ? ಜೊತೆಗೆ ಹಿಂದೆ ವರ್ಷಕ್ಕೆರಡು ಬೆಳೆ ಬೆಳೆದು, ವಿರಾಮ ಕಾಲದಲ್ಲಿ ಜಾತ್ರೆ - ಬಯಲಾಟಗಳನ್ನು ಆಡುತ್ತಾ ಸಾಂಸ್ಕೃತಿಕ ಸಿರಿವಂತಿಕೆ ಮೆರೆಯುತ್ತಿದ್ದರು. ಆದರೆ ಇಂದು ವರ್ಷಪೂರ್ತಿ ಬೆಳೆ ಬೆಳೆದರೂ ರೈತನ ಜೀವನ ನಿರ್ವಹಣೆ ಆಗುತ್ತಿಲ್ಲ. ಹೀಗಿರುವಾಗ ಕೃಷಿಕರು ತಾನೆ ಏನು ಮಾಡಿಯಾರು ? ಹಾಗಾಗಿ ಒಂದೆಡೆ ಕಲಾವಿದರ ನಿರಾಸಕ್ತಿ, ಪ್ರೇಕ್ಷಕರ ನಿರ್ಲಕ್ಷ್ಯದಿಂದಾಗಿ ಬಯಲಾಟ ಕಳೆಗುಂದಿದೆ. ಬಯಲಾಟಗಳ ಬಗ್ಗೆ ನಮ್ಮ ಜನತೆಗಿರಬೇಕಾದ ತಿಳುವಳಿಕೆ, ನಡೆಯಬೇಕಾದ ಪ್ರಚಾರ, ದೊರೆಯಬೇಕಾದ ಪ್ರೋತ್ಸಾಹ ಯಾವುವೂ ಸಿಗದಿರುವುದು ದುರ್ದೈವದ ಸಂಗತಿ. ವಿಶೇಷ ರೂಪಕ ಪ್ರಕಾರಗಳಾಗಿದ್ದ ಬಯಲಾಟಗಳು ಇಂದು ಹೇಳಹೆಸರಿಲ್ಲದಂತಾಗಿವೆ.

ಆಧುನಿಕ ಪ್ರೇಕ್ಷಕರು ಇದರಿಂದ ದೂರ ಸರಿಯಲು ಅನೇಕ ಕಾರಣಗಳಿವೆ. ಇದು ನಡುರಾತ್ರಿಯಲ್ಲಿ ಪ್ರಾರಂಭವಾಗಿ ಬೆಳಗಿನವರೆಗೂ ನಡೆಯುವ ಪ್ರದರ್ಶನ. ಆದರೆ ನಿದ್ದೆಗೆಟ್ಟು ನೋಡುವ ತಾಳ್ಮೆ ಇಂದು ಪ್ರೇಕ್ಷಕರಲ್ಲಿ ಇಲ್ಲ. ಆಟವನ್ನು ಬೇಗ ಪ್ರಾರಂಭಿಸಿ ಬೇಗ ಮುಗಿಸಿದರೆ ಸೂಕ್ತವೆನ್ನಬಹುದು. ಜೊತೆಗೆ ದೂರದರ್ಶನ, ಸಿನಿಮಾಗಳ ಹಾವಳಿಯಿಂದ ಇದು ಆಸಕ್ತರನ್ನು ಸೆಳೆಯುವಲ್ಲಿ ವಿಫಲವಾಗುತ್ತಿದೆ. ಯುವಕರು ಇಂದು ಹೊಸ ಸಾಮಾಜಿಕ ನಾಟಕಗಳನ್ನು ಇಷ್ಟಪಡುತ್ತಿದ್ದಾರೆ. ಬಯಲಾಟದ ಪಾತ್ರಧಾರಿಗಳಲ್ಲಿ ಶಿಸ್ತು, ಆಸಕ್ತಿ, ಅಭಿರುಚಿ ಕಡಿಮೆಯಾಗುತ್ತಿದೆ. ಧ್ವನಿವರ್ಧಕವೆಂಬ ಮೈಕಾಸುರನ ಹಾವಳಿ ಅಧಿಕವಾಗಿ ಅದನ್ನು ಸರಿಯಾಗಿ ಬಳಸಿಕೊಳ್ಳುವಲ್ಲಿ ಕಲಾವಿದರು ವಿಫಲರಾಗಿದ್ದಾರೆ. ಗ್ರಾಮೀಣ ಪ್ರದೇಶಗಳಲ್ಲಿ ಪವರ್ ಕಟ್ ಹೆಚ್ಚಿರುವುದರಿಂದ ಬೆಳಕಿನ ಅವ್ಯವಸ್ಥೆಯೂ ಉಂಟಾಗಿದೆ. ಹಿಮ್ಮೇಳದ ಸಂಗೀತಗಾರರ ಸಂಖ್ಯೆ ಮಿತಿ ಮೀರುತ್ತಿದ್ದು, ಇದರಿಂದ ಇಂಪಾದ ಧ್ವನಿ ಹಾಗೂ ಸಂಗೀತ ಆಸ್ವಾದಿಸಲು ಸಾಧ್ಯವಾಗದೆ ಸಂಗೀತ ಅಬ್ಬರವಾಗುತ್ತಿದೆ. ಪ್ರೇಕ್ಷಕರಿಗೆ ಸರಿಯಾಗಿ ಕುಳಿತುಕೊಳ್ಳಲು ಆಸನದ ವ್ಯವಸ್ಥೆ ಇರುವುದಿಲ್ಲ. ಅನೇಕ ಕಾರಣಗಳಿಂದ ಬಯಲಾಟ ಪ್ರದರ್ಶನದಲ್ಲಿ ಅವ್ಯವಸ್ಥೆಗಳು ಹೆಚ್ಚಾಗಿರುವುದರಿಂದ ಮೇಲುವರ್ಗದವರು ಒಲವು ತೋರಿಸುತ್ತಿಲ್ಲ.

ಬಯಲಾಟ ಕಲೆಯ ಪ್ರಯೋಗಗಳು ಸಾಕಷ್ಟು ಕಡಿಮೆಯಾಗಿವೆ. ಅಲ್ಲೊಂದು-ಇಲ್ಲೊಂದು ಪ್ರದರ್ಶನವಾಗುತ್ತಿರುವುದರಿಂದ ತೋರಿಕೆಗೆ ಬದುಕುಳಿದಂತಾಗಿದೆ. ಇದನ್ನು ಉಳಿಸಿ-ಬೆಳೆಸುವ ಸಾಂಘಿಕ ಪ್ರಯತ್ನಗಳು ಎಲ್ಲೂ ನಡೆಯುತ್ತಿಲ್ಲ. ಮುಖ್ಯವಾಗಿ ಬಯಲಾಟದ ಮಾಸ್ತರರು ನಮ್ಮಿಂದ ಮರೆಯಾದರೆ ಅಲ್ಲಿಗೆ ಈ ಕಲೆ ನಶಿಸುತ್ತದೆ. ಅದಕ್ಕಾಗಿ ತಕ್ಷಣ ಎಚ್ಚೆತ್ತುಕೊಂಡು ಇದರ ಬಗ್ಗೆ ಸಂಶೋಧನಾ ಪುಸ್ತಕಗಳನ್ನು ರಚಿಸುವುದಲ್ಲದೆ, ಉಳಿಕೆಗೆ ಬೇಕಾದ ಎಲ್ಲ ಕ್ರಮಗಳನ್ನು ಕೈಗೊಳ್ಳಬೇಕಿದೆ. ಇಲ್ಲದಿದ್ದಲ್ಲಿ ಮುಂದಿನ ಪೀಳಿಗೆಗೆ ಈ ಕಲೆ ಇತ್ತೆಂದು ಹೇಳಲು ಸಾಧ್ಯವಾಗುವುದಿಲ್ಲ. ನಮ್ಮ ವಿಶ್ವವಿದ್ಯಾಲಯಗಳು, ಜನಪದ ತಜ್ಞರು ಈ ಕಲೆಯನ್ನು ಪರಿಷ್ಕರಿಸಿ, ೩ ತಾಸಿಗೆ ನಿಗದಿಗೊಳಿಸಿ ಕಟ್ಟಿ ಬೆಳೆಸುವ ಕಾರ್ಯ ಮಾಡಬೇಕು. ಹೆಸರಾಂತ ಜನಪದ ವಿದ್ವಾಂಸ ಡಾ॥ ಬಸವರಾಜ ಮಲಶೆಟ್ಟಿ ಹಾಗೂ ಡಾ॥ ಜಿ. ಶಂ. ಪರಮಶಿವಯ್ಯ, ಇನ್ನು ಕೆಲವರು ಮೂಡಲಪಾಯದ ಆಟವನ್ನು ಆಧುನಿಕ ಕಾಲಕ್ಕೆ ತಕ್ಕಂತೆ ಮಾರ್ಪಡಿಸಿ ಕೆಲ ಪ್ರದರ್ಶನಗಳನ್ನು ನೀಡಿದರು. ಆದರೆ ಅದು ನಿರೀಕ್ಷಿತ ಗುರಿ ತಲುಪಲಿಲ್ಲ. ಯಕ್ಷಗಾನಕ್ಕೆ ಕಾರಂತರು ಕೊಟ್ಟ ನೇತೃತ್ವದಂತೆ, ಬಯಲಾಟಕ್ಕೂ ಕಾಯಕಲ್ಪ ಕೊಡುವ ರೂವಾರಿಯ ಅವಶ್ಯಕತೆ ಇದೆ. ಇಂದು ಬಯಲಾಟಕ್ಕೆ ಅತ್ಯಂತ ಕಷ್ಟಕರ ಸಮಯವಾಗಿರುವುದರಿಂದ ಅದರ ಅಳಿವು-ಉಳಿವಿನ ಪ್ರಶ್ನೆಯಾಗಿದೆ. ಬಯಲಾಟಕ್ಕೆ ಹೊಸ ರೂಪ ಕೊಟ್ಟು, ಅದನ್ನು ಬೆಳೆಸಿಕೊಂಡು ಹೋಗುವ ಹೊಣೆ ನಮ್ಮೆಲ್ಲರದಾಗಿದೆ.

ಪರಮೇಶ್ವರಯ್ಯ ಸೊಪ್ಪಿಮಠ
ಶಿಕ್ಷಕರು, ಕೆ.ವಿ.ಓ.ಆರ್. ಕಾಲೋನಿ, ಹಗರಿಬೊಮ್ಮನಹಳ್ಳಿ ತಾಲ್ಲೂಕು, ಬಳ್ಳಾರಿ ಜಿಲ್ಲೆ - ೫೮೩ ೨೧೨

**ಶಂಗಂ ತಮಿಳಗಂ ಮತ್ತು ಕನ್ನಡ ನಾಡು - ನುಡಿ**
**ಆರಂಭ ಕಾಲದ ದ್ರಾವಿಡ ಸಂಬಂಧದ ಚಿಂತನೆ**

ಲೇಖಕರು ಪ್ರಕಾಶಕರು
**ಷ. ಶೆಟ್ಟರ್** **ಅಭಿನವ**

ವಿಳಾಸ: ೧೭/೮-೨, ಮೊದಲನೆಯ ಮುಖ್ಯರಸ್ತೆ
ಮಾರೇನಹಳ್ಳಿ, ವಿಜಯನಗರ, ಬೆಂಗಳೂರು - ೫೬೦ ೦೪೦

ಬೆಲೆ: ರೂ. ೧೪೦ ಪುಟ: ೨೬೬




# ‘ಶಂಗಂ ತಮಿಳಗಂ’: ಕೆಲವು ಟಿಪ್ಪಣಿಗಳು

**ಈ ಕೃತಿಯ ಹೆಚ್ಚುಗಾರಿಕೆಯೆಂದರೆ, ಸಮುದಾಯಗಳ ಮೂಲಕ ಭಾಷೆಯ ಅಥವಾ ಭಾಷೆಯ ಮೂಲಕ ಸಮುದಾಯಗಳ ಚರಿತ್ರೆಯನ್ನು ಕಟ್ಟುವುದು. ಇದಕ್ಕಾಗಿ ಶಾಸನಗಳು ಮತ್ತು ಸಾಹಿತ್ಯ ಕೃತಿಗಳನ್ನು ಆಕರವಾಗಿ ಬಳಸಿದರೂ, ಕೃತಿ ಹೆಚ್ಚಾಗಿ ಬಳಸುವುದು ಲಿಪಿಯನ್ನು, ಲಿಪಿ ಮತ್ತು ಭಾಷೆ ಕುರಿತ ಚರ್ಚೆಗಳು ಇಲ್ಲಿನ ಉಜ್ವಲವಾದ ಭಾಗಗಳಾಗಿವೆ.**

**ರಹಮತ್ ತರೀಕೆರೆ**

ತಮ್ಮ ‘ಇನ್ವೈಟಿಂಗ್ ಡೆತ್’ ‘ಪರ್ಸೀವಿಂಗ್ ಡೆತ್’ ಮುಂತಾದ ಕೃತಿಗಳಿಂದ ದೇಶ ವಿದೇಶಗಳಲ್ಲಿ ಖ್ಯಾತರಾಗಿರುವ ಪ್ರಾಚೀನ ಇತಿಹಾಸಕಾರರಾದ ಷ. ಶೆಟ್ಟರ್ ಅವರು, ೨೦೦೦ನೇ ಇಸವಿಯಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ಬಂದಿದ್ದರು. ಆಗ ಅವರ ಜತೆ ಮಾತುಕತೆಯಾಡುತ್ತ ನಾನು ಕೊನೆಗೆ ''ನೀವು ಸಂಶೋಧನೆಗೆ ಕನ್ನಡವನ್ನು ಯಾಕೆ ಬಳಸಲು ಯತ್ನಿಸಲಿಲ್ಲ?'' ಎಂದು ಕೇಳಿದೆ. ವಾಸ್ತವವಾಗಿ ಇದು ಭಾಷಾಭಿಮಾನದಿಂದ ಕೇಳಿದ ಆಕ್ಷೇಪಕ ಪ್ರಶ್ನೆಯಾಗಿರಲಿಲ್ಲ. ಲೇಖಕರು ತಮ್ಮ ಅಭಿವ್ಯಕ್ತಿಗೆ ಆಯ್ದುಕೊಳ್ಳುವ ಭಾಷೆಯು ಅವರ ಸಂವಾದ ಮಾಡಬಯಸುವ ಸಮುದಾಯವನ್ನು ನಿರ್ಧರಿಸುತ್ತದೆ. ಜತೆಗೆ ಅದು ಅವರ ಬರೆಹದ ದೃಷ್ಟಿಕೋನವನ್ನೂ ನಿಯಂತ್ರಿಸುತ್ತದೆ. ಇಂಗ್ಲ ಭಾಷೆಯನ್ನು ಆರಿಸಿಕೊಂಡಾಗ ಸಹಜವಾಗಿಯೆ ಕನ್ನಡೇತರವೂ ಅಖಿಲ ಭಾರತೀಯ ಅಥವಾ ಜಾಗತಿಕವೂ ಆದ ಓದುಗ ಸಮುದಾಯ ಎದುರಿರುತ್ತದೆ. ಆಗ ಬರೆಹ ಅಥವಾ ಮಾತಿಗೆ ನಮ್ಮ ಸಂಸ್ಕೃತಿ ಇತಿಹಾಸ ಪರಂಪರೆಗಳ ಬಗ್ಗೆ ವಿಮರ್ಶಾತ್ಮಕವಲ್ಲದ ಮತ್ತು ವೈಭವೀಕರಣದ ಒಂದು ಸಣ್ಣ ಆಯಾಮ ಕೂಡ ಹೇಗೊ ಸೇರಿಕೊಂಡುಬಿಡುತ್ತದೆ. ಕನ್ನಡಿಗ ಎಂ. ಎನ್. ಶ್ರೀನಿವಾಸ್ ಅವರು ಇಂಗ್ಲಿಷಿನಲ್ಲಿ ಪ್ರಕಟಿಸಿದ ಕರ್ನಾಟಕದ ಹಳ್ಳಿಗಳನ್ನು ಕುರಿತ ಇಂಗ್ಲಿಷ್ ಕೃತಿ ‘ರಿಮೆಂಬರ್ಡ್ ವಿಲೇಜ್’ ನೋಡಿದರೆ ಇದು ಸ್ಪಷ್ಟವಾಗುತ್ತದೆ. ನನ್ನ ಪ್ರಶ್ನೆಯಲ್ಲಿದ್ದ ಆಶಯ ಭಾಷಾ ಆಯ್ಕೆಯ ಭಾಗವಾಗಿ ಬರುವ ಈ ರಾಜಕಾರಣವನ್ನು ಕುರಿತಾಗಿತ್ತು. ಇದಕ್ಕೆ ಶೆಟ್ಟರ್ ಅವರು ಉತ್ತರಿಸುತ್ತ, ತಾವು ಬರೆಯುವ ಕಾಲಕ್ಕೆ ಕರ್ನಾಟಕದ ಬಗ್ಗೆ ಕನ್ನಡದಲ್ಲಿ ಬರೆಯುವ ವಿದ್ವಾಂಸರು ಸಾಕಷ್ಟಿದ್ದರು. ಕರ್ನಾಟಕದ ಬಗ್ಗೆ ಇಂಗ್ಲಿಷಿನಲ್ಲಿ ಬರೆದು ಕನ್ನಡೇತರ ಲೋಕಕ್ಕೆ ತಿಳಿಸುವವರು ಇರಲಿಲ್ಲ. ಹೀಗಾಗಿ ತಾವು ಇಂಗ್ಲಿಷಿನಲ್ಲಿ ಬರೆಯಬೇಕಾಯಿತು ಎಂದು ಹೇಳಿದರು. ಕಡೆಯಲ್ಲಿ ಕೊಂಚ ಸಂಕೋಚದಿಂದ ಕನ್ನಡದಲ್ಲಿ ಬರೆಯದ ಆಪಾದನೆಯಿಂದ ಮುಕ್ತಿ ಪಡೆಯಲು ತಾವು ಯತ್ನಿಸುವುದಾಗಿ ಹೇಳಿದರು. ಹಾಗೆ ಹೇಳಿದ ಕೆಲವು ವರ್ಷಗಳ ಬಳಿಕ ‘ಕವಿರಾಜಮಾರ್ಗ’ವನ್ನು ಕುರಿತ ಅವರ ಲೇಖನಗಳು ಕನ್ನಡ ಪತ್ರಿಕೆಯೊಂದರಲ್ಲಿ ಪ್ರಕಟವಾಗ ತೊಡಗಿದವು. ನಂತರ ಈ ಲೇಖನಗಳು ರೂಪಾಂತರ ಪಡೆದು ‘ಶಂಗಂ ತಮಿಳಗಂ ಮತ್ತು ಕನ್ನಡ ನಾಡು-ನುಡಿ’ ಕೃತಿ ಪ್ರಕಟವಾಯಿತು. ಶೆಟ್ಟರ್ ಅವರು ರಚಿಸಿದ ಮೊದಲ ಈ ಕನ್ನಡ ಕೃತಿಯು ಕನ್ನಡದ ವಿದ್ವಾಂಸರು (ಕೆ. ವಿ. ಸುಬ್ಬಣ್ಣ, ಎಂ. ಎಂ. ಕಲಬುರ್ಗಿ ಹಾಗೂ ಕೆ. ಜಿ. ನಾಗರಾಜಪ್ಪ) ಎತ್ತಿದ ಪ್ರಶ್ನೆಗಳಿಂದ ಆರಂಭವಾಗಿರುವುದು ಈ ಹಿನ್ನೆಲೆಯಿಂದ ಮಾರ್ಮಿಕವಾಗಿದೆ. ಇದು ಲೇಖಕರು ಕನ್ನಡ ಓದುಗ ಲೋಕದ ಜತೆಗೆ ಬೌದ್ಧಿಕವಾಗಿ ಮುಖಾಮುಖಿಯಾಗಲು ಮಾಡಿಕೊಂಡ ಸಂಕಲ್ಪದಂತೆ ಕೂಡ ತೋರುತ್ತದೆ.

೨

ಕನ್ನಡ ಸಂಶೋಧನೆಯಲ್ಲಿ ಇತಿಹಾಸ ಮತ್ತು ಕನ್ನಡ ಸಾಹಿತ್ಯದ ನಡುವಣ ಸಂಬಂಧಕ್ಕೆ ಒಂದು ಶತಮಾನಕ್ಕೂ ಮಿಕ್ಕಿದ ಪರಂಪರೆಯಿದೆ. ಹಾಗೆ ಕಂಡರೆ, ಇತಿಹಾಸ ಮತ್ತು ಕಾವ್ಯವನ್ನು ಬೆಸೆದುನೋಡುವ ಕೆಲಸವು ಕನ್ನಡದ ಎರಡು ಮೊದಲ ಕೃತಿಗಳಿಂದಲೇ ಆರಂಭವಾಯಿತು ಎನ್ನಬಹುದು. ರಾಜಪ್ರಭುತ್ವದ ಭಾಗವಾಗಿ ಆಸ್ಥಾನದಲ್ಲಿ ಹುಟ್ಟಿದ ಕನ್ನಡದ ಮೊದಲ ಕೃತಿ ‘ಕವಿರಾಜಮಾರ್ಗ’ವು ಕವಿಗಳಿಗೆ ಬೇಕಾದ ಅಲಂಕಾರಗಳ ಚರ್ಚೆಯನ್ನು ಮಾಡುತ್ತದೆ; ಅದರ ಶೀರ್ಷಿಕೆಯಲ್ಲಿ ಕಾವ್ಯಸೂಚಕವಾದ ‘ಕವಿ’ ಹಾಗೂ ಇತಿಹಾಸ ಸೂಚಕವಾದ ‘ರಾಜ’ ಶಬ್ದಗಳು ಜತೆಗೂಡಿಕೊಂಡಿವೆ; ಇನ್ನು ಆದಿಕವಿ ಪಂಪನು ಅರಿಕೇಸರಿಯ ಆಸ್ಥಾನದಲ್ಲಿದ್ದು ಬರೆದ ‘ಪಂಪಭಾರತ’ವು, ರಾಜನಾದ ಅರಿಕೇಸರಿಯನ್ನು ಮಹಾಭಾರತದ ಅರ್ಜುನನ ಜತೆಗೆ ‘ತಗುಳ್ಚುವ’ (=ಬೆರೆಸುವ, ಅನ್ವಯಿಸುವ) ಕೆಲಸ ಮಾಡುತ್ತದೆ; ಮುಂದೆ ‘ಕೆಳದಿ ನೃಪವಿಜಯ’ ‘ಕುಮಾರರಾಮನ ಸಾಂಗತ್ಯ’, ‘ರಾಜಾವಳಿ ಕಥಾಸಾರ’ ಮುಂತಾದ ಕೃತಿಗಳು ಈ ‘ತಗುಳ್ಚುವ’ ಕೆಲಸವನ್ನು ಬೇರೆಬೇರೆ ಬಗೆಯಲ್ಲಿ ಮುಂದುವರೆಸಿದವು. ೨೦ನೇ ಶತಮಾನದ ಕನ್ನಡ ವಿದ್ವತ್ ಪ್ರಪಂಚ ಸಹ, ವಸಾಹತುಶಾಹಿ ಸಂಶೋಧನೆಯ ಒತ್ತಾಸೆಯಿಂದ ಚರಿತ್ರೆ ಮತ್ತು ಸಾಹಿತ್ಯವನ್ನು ‘ತಗುಳ್ಚುವ’ ಕೆಲಸವನ್ನು ಕೈಗೆತ್ತಿಕೊಳ್ಳಬೇಕಾಯಿತು. ಶಾಸನಗಳ ಮೇಲೆ ಅಭೂತಪೂರ್ವ ಕೆಲಸ ಮಾಡಿದ ವಿದ್ವಾಂಸರಾದ ಆರ್. ನರಸಿಂಹಾಚಾರ್ ಅವರು ‘ಕರ್ಣಾಟಕ ಕವಿಚರಿತೆ’ಯ ಸಂಪುಟಗಳನ್ನು ಸಿದ್ಧಪಡಿಸಿದರು. ಇಲ್ಲಿ ಕೂಡ ‘ಕವಿ’ ಎಂಬುದು ಸಾಹಿತ್ಯ ಸಂಬಂಧಿ ಶಬ್ದವಾದರೆ, ‘ಚರಿತೆ’ಯೆಂಬುದು ಇತಿಹಾಸ ಸಂಬಂಧಿ ಶಬ್ದವಾಗಿದೆ. ಮುಂದೆ ಬಂದ ಡಿ. ಎಲ್. ನರಸಿಂಹಾಚಾರ್, ಮುಳಿಯ ತಿಮ್ಮಪ್ಪಯ್ಯ, ಎಂ. ಎಂ. ಕಲಬುರ್ಗಿ, ಚಿದಾನಂದಮೂರ್ತಿ ಮೊದಲಾದ ವಿದ್ವಾಂಸರು ಶಾಸನ ಹಾಗೂ ಸಾಹಿತ್ಯಕೃತಿಗಳ ಯುಗಳ ಅಧ್ಯಯನದ ಮೂಲಕವೇ ಚರಿತ್ರೆಯ ರಚನೆಗೆ ಪ್ರವೇಶಿಸಿದವರು. ಚರಿತ್ರೆಯನ್ನು ಕುರಿತ ಪರಿಕಲ್ಪನೆಯಲ್ಲಿ ಭಿನ್ನರಾದರೂ ಹೊಸ ತಲೆಮಾರಿನ ರಾಜಾರಾಮ ಹೆಗ್ಗಡೆ, ಎಸ್. ಚಂದ್ರಶೇಖರ್, ಅಶೋಕ ಶೆಟ್ಟರ್, ವಸು ಮುಂತಾದವರು ಬೇರೆಬೇರೆ ದೃಷ್ಟಿಕೋನಗಳಲ್ಲಿ ಮುಂದುವರೆಸಿ, ಕರ್ನಾಟಕದ ಸಾಂಸ್ಕೃತಿಕ ಇತಿಹಾಸವನ್ನು ರಚಿಸಿದರು. ಚರಿತ್ರೆಯ ರಚನೆಗಾಗಿ ಸಾಹಿತ್ಯ ಕೃತಿಗಳನ್ನು ಬಳಸುವ ಇವರ ಯತ್ನಗಳು ಬಹುಶಿಸ್ತೀಯ

ಅಧ್ಯಯನಕ್ಕೆ ನಿದರ್ಶನಗಳೂ ಆಗಿವೆ. ಶೆಟ್ಟರ್ ಅವರ ಪ್ರಸ್ತುತ 'ಶಂಗಂ ತಮಿಳಗಂ' ಕೃತಿಯು ವಿಭಿನ್ನ ಶಾಸ್ತ್ರಶಿಸ್ತುಗಳು ಹೀಗೆ ಪರಸ್ಪರ ತಗಳ್ಜುವ ಪರಂಪರೆಯಲ್ಲಿ ಹುಟ್ಟಿದ ಕೃತಿಯಾಗಿದೆ.

೩

'ಶಂಗಂ ತಮಿಳಗಂ ಮತ್ತು ಕನ್ನಡ ನಾಡು-ನುಡಿ' – ಕೃತಿಯ ಹೆಸರೇ ಅದರ ಉದ್ದೇಶವನ್ನೂ ಸೂಚಿಸುತ್ತಿದೆ. ಈ ಕೃತಿಯು ತಮಿಳಿನ ಸಂಗಂ ಸಾಹಿತ್ಯದ ಮೂಲಕ ತಮಿಳುತನವನ್ನು ಶೋಧಿಸುತ್ತದೆ. ಈ ತಮಿಳುತನದ ಕನ್ನಡಿಯಲ್ಲಿ ಕನ್ನಡ ನಾಡು, ಜನ ಹಾಗೂ ಭಾಷೆಗಳ ಚರಿತ್ರೆಯನ್ನು ಕಟ್ಟುತ್ತದೆ. ಸೋದರ ಭಾಷಿಕರ ಭಾಷೆ ಹಾಗೂ ನಾಡುಗಳ ಚರಿತ್ರೆಯ ಮೂಲಕ ಕನ್ನಡ, ಕನ್ನಡಿಗ ಹಾಗೂ ಕರ್ನಾಟಕಗಳ ಆದಿಮ ಕಾಲದ ಚರಿತ್ರೆಯನ್ನು ಕಟ್ಟುವ ಈ ಯತ್ನವು ಸಾಂಸ್ಕೃತಿಕವಾಗಿ ಮಹತ್ವದ್ದಾಗಿದೆ. ಕಾರಣ, ಕರ್ನಾಟಕದಲ್ಲಿ ನೆರೆ ರಾಜ್ಯದ ಭಾಷೆ ಹಾಗೂ ಭಾಷಿಕರನ್ನು ದ್ವೇಷಿಸುವುದು ಜನಪ್ರಿಯ ಕನ್ನಡ ಚಳುವಳಿಗಳ ಒಂದು ಲಕ್ಷಣವಾಗುತ್ತಿದ್ದು, ಇಂತಹ ಹಗೆತನ ಮತ್ತು ಸಂಘರ್ಷಕಾರಿ ಸಂಬಂಧಕ್ಕೆ ಕೆಲವು ಕನ್ನಡ ಸಂಶೋಧಕರೂ ಕೈಜೋಡಿಸಿದ್ದಾರೆ. ಈಗ ಈ ಸಂಘರ್ಷವು ಕೇವಲ ಮತಭೇದದ ಮಟ್ಟದಲ್ಲಿ ಉಳಿದಿಲ್ಲ; ಬದಲಿಗೆ ದೈಹಿಕ ಹಲ್ಲೆ, ಸೊತ್ತಿನ ನಾಶ, ಊರುಬಿಟ್ಟು ಓಡಿಸುವುದೇ ಮೊದಲಾಗಿ ಅಮಾನುಷ ಕೃತ್ಯಗಳಿಗೂ ವಿಸ್ತರಿಸಿದೆ. ಇಂತಹ ಸನ್ನಿವೇಶದಲ್ಲಿ ನೆರೆಯ ಭಾಷೆ ಮತ್ತು ಭಾಷಿಕರನ್ನು ಸಾಂಸ್ಕೃತಿಕ ಕೊಡುಕೊಳುವಿಕೆಯ ನೆಲೆಯಲ್ಲಿ ಚಾರಿತ್ರಿಕವಾಗಿ ಅರ್ಥ ಮಾಡಿಕೊಳ್ಳುವುದಕ್ಕೆ 'ಶಂಗಂ ತಮಿಳಗಂ' ಪ್ರೇರಿಸುವುದು ಮಹತ್ವದ ಸಂಗತಿಯಾಗಿದೆ.

೨೦ನೇ ಶತಮಾನದ ಕರ್ನಾಟಕ ಕನ್ನಡ ಕುರಿತು ಚಿಂತನೆಯಲ್ಲಿ ಇನ್ನೊಂದು ಅನಪೇಕ್ಷಿತ ಪ್ರವೃತ್ತಿಯಿದೆ. ಅದೆಂದರೆ, ಭಾರತೀಯ ಸಂಸ್ಕೃತಿ ಚರ್ಚೆಯನ್ನು ಸಂಸ್ಕೃತ ಮತ್ತು ಔತ್ತರೇಯ ಚೌಕಟ್ಟಿನಲ್ಲಿ ಮಾಡುವುದು. 'ಭಾರತೀಯ ಕಾವ್ಯ ಮೀಮಾಂಸೆ' ಹೆಸರಲ್ಲಿ ನಡೆದಿರುವ ಚರ್ಚೆಗಳು ಸಂಸ್ಕೃತ ಕಾವ್ಯಮೀಮಾಂಸೆಯ ಚರ್ಚೆಗಳಾಗಿರುವುದು ಇದಕ್ಕೆ ಸಾಕ್ಷಿ. ಇಲ್ಲಿ ತಮಿಳು ತೆಲುಗು ಮಲೆಯಾಳ ಕಾವ್ಯಮೀಮಾಂಸೆಯ ಪ್ರಸಕ್ತಿಯೂ ಇರುವುದಿಲ್ಲ. ಇದಕ್ಕೆ ಹಿಂದಿನ ವಿದ್ವಾಂಸರ ವೈದಿಕ ಮತ್ತು ಸಂಸ್ಕೃತ ಪ್ರೇಮಗಳ ಕಾರಣಗಳಿಂದ ಹೀಗಾಯಿತು ಎಂದು ಸಬೂಬು ಹೇಳಬಹುದು. ಆದರೆ ಕರ್ನಾಟಕ ಸಂಸ್ಕೃತಿಯನ್ನು ಔತ್ತರೇಯ ಮತ್ತು ಸಂಸ್ಕೃತ ಚೌಕಟ್ಟುಗಳಲ್ಲಿ ಅಧ್ಯಯನ ಮಾಡುವ ಪ್ರವೃತ್ತಿ ಈಗಿನವರಲ್ಲೂ ಉಳಿದುಕೊಂಡಿದೆ. ಕರ್ನಾಟಕ ಸಂಸ್ಕೃತಿಯ ಚರ್ಚೆಯನ್ನು ಇತರೆ ಭಾರತೀಯ ಭಾಷೆಗಳ ಚೌಕಟ್ಟಿನಲ್ಲಿ ಮಾಡಬಾರದು ಎಂತಲ್ಲ, ಆದರೆ ಆ ಚೌಕಟ್ಟು ಕನ್ನಡದ ಚಿತ್ರವನ್ನು ತನ್ನ ಅಳತೆಗೆ ತಕ್ಕಂತೆ ಕತ್ತರಿಸಬಾರದು. ಶಂಬಾ ಮುಂತಾದವರು ಮರಾಠಿಯ ಸಂಬಂಧದಲ್ಲಿ ಕರ್ನಾಟಕ ಸಂಸ್ಕೃತಿಯ ಶೋಧಗೈದರೂ ಅವರ ಮುಖ್ಯ ಹುಡುಕಾಟ ಕರ್ನಾಟಕತ್ವದ ಅನನ್ಯತೆಯನ್ನು ಗುರುತಿಸುವತ್ತಲೇ ಇದೆ. ಇದರ ಹಾಗೆ ಕರ್ನಾಟಕತ್ವವನ್ನು ತಮಿಳು ತೆಲುಗು ಮಲೆಯಾಳಂ ಭಾಷಿಕ ಸಂಬಂಧಗಳ ಜತೆಗಿಟ್ಟು ಮಾಡಿರುವ ಯತ್ನಗಳು ನಡೆಯಲಿಲ್ಲ. ಸಂಸ್ಕೃತದ ಹಂಗಿನಿಂದ ತಪ್ಪಿಸಿ, ಕನ್ನಡ ಕರ್ನಾಟಕಗಳ ಕಥನವನ್ನು ದ್ರಾವಿಡ ಚೌಕಟ್ಟುಗಳ ಮೂಲಕ ನೋಡಲು ಮೊದಲು ಪ್ರೇರಿಸಿದವರು ಬಿ. ಎಂ. ಶ್ರೀಕಂಠಯ್ಯನವರು. ಅವರು ಹಾಕಿಕೊಟ್ಟ ಹಾದಿಯಲ್ಲಿ ಬಿ. ಶಂಕರಭಟ್ ಅವರು ಭಾಷಾಕ್ಷೇತ್ರದಲ್ಲಿ ಪ್ರವೇಶಿಸುತ್ತಿದ್ದಾರೆ. ಡಿ.ಆರ್. ನಾಗರಾಜ ಅವರು ತತ್ವಶಾಸ್ತ್ರದ ಕ್ಷೇತ್ರದಲ್ಲಿ ('ಅಲ್ಲಮಪ್ರಭು ಮತ್ತು ಶೈವಪ್ರತಿಭೆ') ಔತ್ತರೇಯ ಚೌಕಟ್ಟನ್ನು ಇಟ್ಟುಕೊಂಡೇ ಯತ್ನಿಸಿದರೂ ಅವರ ಅಂತಿಮ ಉದ್ದೇಶ ಕನ್ನಡದ ದಾರ್ಶನಿಕ ಕವಿಯೊಬ್ಬನ ಶಿಷ್ಟತೆಯನ್ನು ಗುರುತಿಸುವುದಾಗಿತ್ತು. ಆದರೂ ಅವರ ಯತ್ನದಲ್ಲಿ ಅಲ್ಲಮನಿಗೆ ದ್ರಾವಿಡ ಭಾಷೆಯ ಸಾಹಿತ್ಯ ಮತ್ತು ಸಂಸ್ಕೃತಿಗಳಲ್ಲಿ ಇದ್ದಿರಬಹುದಾದ ಪ್ರೇರಣೆಗಳ ಕಡೆ ಗಮನವಿಲ್ಲ. ಈ ಹಿನ್ನೆಲೆಯಲ್ಲಿ ಶೆಟ್ಟರ್ ಅವರ 'ಶಂಗಂ' ಕೃತಿ ಕರ್ನಾಟಕದ ಕಥನವನ್ನು ದ್ರಾವಿಡ ಭಾಷಿಕ ಸಂಸ್ಕೃತಿಯ ಮೂಲಕ ನೋಡಲು ಯತ್ನಿಸುವುದು ಮಹತ್ವದ ಅಂಶವಾಗಿದೆ. 'ತೋಲ್ಕಾಪ್ಪಿಯಂ' 'ಮಣಿಮೇಖಲೈ' 'ತಮಿಳಗಂ' 'ಕಳಿಲರ್' 'ತಿಣೈ' 'ಅಗಂ' 'ಪುರಂ'- ಮುಂತಾದವು ಕರ್ನಾಟಕ ಅಧ್ಯಯನಗಳಲ್ಲಿ ಅಪರಿಚಿತವಾಗಿ ಉಳಿದಿರುವ ಪದಗಳಾಗಿವೆ. ಅವನ್ನು ಇಟ್ಟುಕೊಂಡು ಈ ಕೃತಿ ಗಾಢವಾದ ಚರ್ಚೆ ನಡೆಸುತ್ತದೆ. ಇಲ್ಲಿನ 'ಕಳಭ್ರರು' 'ನಣ್ಣನ್ನ' ಮುಂತಾದ ಕನ್ನಡದ ಕುಲಗಳ ಬಗ್ಗೆ ಚರ್ಚೆ ಕೂಡ ಕುತೂಹಲಕರವಾಗಿದೆ. ಇಂತಹ ಅನೇಕ ಕಾರಣಗಳಿಂದ ಇದು ಕನ್ನಡ ಕರ್ನಾಟಕ ಕನ್ನಡಿಗರ ಆದಿಮ ಚರಿತ್ರೆಯನ್ನು ಕುರಿತ ಪ್ರಮಾಣ ಗ್ರಂಥವಾಗಲೆಳಸಿದೆ.

ಈ ಕೃತಿಯ ಹೆಚ್ಚುಗಾರಿಕೆಯೆಂದರೆ, ಸಮುದಾಯಗಳ ಮೂಲಕ ಭಾಷೆಯ ಅಥವಾ ಭಾಷೆಯ ಮೂಲಕ ಸಮುದಾಯಗಳ ಚರಿತ್ರೆಯನ್ನು ಕಟ್ಟುವುದು. ಇದಕ್ಕಾಗಿ ಶಾಸನಗಳು ಮತ್ತು ಸಾಹಿತ್ಯ ಕೃತಿಗಳನ್ನು ಆಕರವಾಗಿ ಬಳಸಿದರೂ, ಕೃತಿ ಹೆಚ್ಚಾಗಿ ಬಳಸುವುದು ಲಿಪಿಯನ್ನು. ಲಿಪಿ ಮತ್ತು ಭಾಷೆ ಕುರಿತ ಚರ್ಚೆಗಳು ಇಲ್ಲಿನ ಉಜ್ವಲವಾದ ಭಾಗಗಳಾಗಿವೆ. ಬ್ರಾಹ್ಮಿ, ವಟ್ಟೆಳುತ್ತು, ಗ್ರಂಥ ತಮಿಳು ಎಂಬ ಮೂರು ಹಂತಗಳಲ್ಲಿ ತಮಿಳು ಸಾಧಿಸಿದ ಪ್ರಗತಿಯನ್ನು ಕನ್ನಡವು ಬ್ರಾಹ್ಮಿಯಿಂದ ನೇರ ಲಿಪಿ ಮತ್ತು ಭಾಷೆ ಸಂಪಾದನೆ ಮಾಡಿತು ಎಂಬ ವಿವರಣೆ; ಪಾಲಿ ಪ್ರಾಕೃತ ಬ್ರಾಹ್ಮಿಗಳ ಅಖಿಲ ಭಾರತೀಯ ಓಡಾಟಗಳ ಬಗೆಗಿನ ವಿಶ್ಲೇಷಣೆ; ವಡಮೊಳಿ ಮತ್ತು ವಡುಗರ ಬಗೆಗಿನ ವಿವರಣೆ; ಉತ್ತರದಿಂದ ಬಂದ ಲಿಪಿ ಬಳಸಿ ಅಕ್ಷರಸ್ಥವಾದ ಹಾಗೂ ಲಿಪಿಯನ್ನು ತಿರಸ್ಕರಿಸಿ ಅನಕ್ಷರಸ್ಥವಾದ ಜನಾಂಗಗಳ ಕಥನ; ತಮಿಳು ಮತ್ತು ಕನ್ನಡ ದೇಶೀ ಅಭಿಮಾನದ ಹುಟ್ಟುವಿಕೆಗೆ ವಸಾಹತುಶಾಹಿ ಸಂಶೋಧನೆಗಳು ಕಾರಣವಾದ ಬಗೆ – ಇವು ಇಲ್ಲಿನ ಇತರೆ ಮುಖ್ಯ ಒಳನೋಟಗಳಾಗಿವೆ.

ಧರ್ಮಗಳ ಚರಿತ್ರೆಗೆ ಸಂಬಂಧಿಸಿದಂತೆ ಕೂಡ ಈ ಕೃತಿ ಹೊಸನೋಟಗಳನ್ನು ಒಳಗೊಂಡಿದೆ. ಅವುಗಳಲ್ಲಿ ಮುಖ್ಯವಾದವು, ತುಳುನಾಡಿನ ಜೈನ-ಶೈವ ಸಂಘರ್ಷಗಳ ಬಾಕಿಯು ಕರ್ನಾಟಕದಲ್ಲಿ ತೀರುವ ಕುರಿತ ವಿವರಣೆ ಹಾಗೂ ಆದಿಮ ಬೌದ್ಧಧರ್ಮದ ಬಗೆಗಿನ ನೋಟಗಳು. ಕೋಮುವಾದ ಮೂಲಭೂತವಾದಗಳು ಪರಸ್ಪರ ರಾಜಕೀಯವಾಗಿ ಸ್ಪರ್ಧೆ ಮಾಡುತ್ತಿರುವ ಈ ದಿನಗಳಲ್ಲಿ ಇದರ ಕಾವು ಸಂಶೋಧನೆಗೂ ತಟ್ಟಿ, ಧರ್ಮಗಳನ್ನು ಕುರಿತ ಶೈಕ್ಷಣಿಕ ಚರ್ಚೆ ಕೂಡ ಅನಗತ್ಯವಾಗಿ ಸೂಕ್ಷ್ಮವೂ ಕಷ್ಟವೂ ಆಗುತ್ತಿದೆ. ಈ ಹಿನ್ನೆಲೆಯಲ್ಲಿ ಧರ್ಮ ಕುರಿತ ಇಲ್ಲಿನ ನೋಟಗಳು ಉಪಯುಕ್ತವಾಗಿವೆ.

ಈ ಕೃತಿಯ ವಿಶೇಷವೆಂದರೆ, ನಿರುದ್ವಿಗ್ನವೂ ಮುಕ್ತವೂ ಆದ ಅಧ್ಯಯನ ವಿಧಾನವನ್ನು ಅನುಸರಿಸುವುದು. ಇಲ್ಲಿ ಪೂರ್ವಗ್ರಹಿಕೆಗಳನ್ನು ಸಾಬೀತು ಪಡಿಸಲು ಹಠಮಾಡುವ ಬದಲಿಗೆ, ಸಿಗುವ ಮಾಹಿತಿ ಮತ್ತು ವಿವರಗಳನ್ನು ಜೋಡಿಸುತ್ತ ವಿಶ್ಲೇಷಿಸುತ್ತ ಸಹಜವಾದ ತೀರ್ಮಾನವೊಂದರತ್ತ ಚಲಿಸುವ ವಿಧಾನವಿದೆ. ಕಲ್ಪಿತ ನಿರ್ಣಯಕ್ಕೆ ಧಾವಿಸುವ ತವಕಕ್ಕಿಂತ ಒಂದೇ ಸಂಗತಿಯ ಮೇಲೆ ಹಲವು ತೆರನಾಗಿ ಚಿಂತಿಸುವ ಬಹುತ್ವದ ಹುಡುಕಾಟವಿದೆ. ಕೊನೆಯಲ್ಲಿ ತನ್ನ ವಿಶ್ಲೇಷಣೆಯಲ್ಲಿ ಕಂಡುಕೊಂಡ ನಿಜವನ್ನು ಅಸ್ಖಲಿತವಾಗಿ ಮಂಡಿಸುವ ದಿಟ್ಟತನವಿದೆ. ಇದನ್ನು ಯಾಕೆ ದಿಟ್ಟತನ ಎನ್ನಬೇಕಾಗಿದೆ ಎಂದರೆ, ಇಲ್ಲಿರುವ ಅನೇಕ ನಿರ್ಣಯಗಳು ಕನ್ನಡತನವನ್ನು ಒಂದು ಧಾರ್ಮಿಕ ನಿಷ್ಠೆಯನ್ನಾಗಿ ಆವಾಹಿಸಿಕೊಂಡು ಅದರ ಮೇಲೆ ಹುಂಬ ಅಭಿಮಾನ ಬೆಳೆಸುವ ಸಂಶೋಧಕರಿಗೂ, ಅವರ ಅನುಯಾಯಿಗಳಿಗೂ ಪ್ರಿಯವಾಗಿಲ್ಲ. ಪೂರ್ವಗ್ರಹಿತಗಳನ್ನು ಸಾಧಿಸಲೆಂದೇ ಆಧಾರಗಳನ್ನು ಹುಡುಕಿ ಜೋಡಿಸುವ ಕನ್ನಡಾಭಿಮಾನಿ ಅಧ್ಯಯನಗಳ ಹಿನ್ನೆಲೆಯಲ್ಲಿ ಈ ಮುಕ್ತವಿಧಾನವು ಅತ್ಯಂತ ಡೆಮಾಕ್ರಟಿಕ್ಕಾಗಿದೆ.

೪

ಇಷ್ಟು ಮಹತ್ವದ ಕೃತಿಯಾದರೂ ಇದರ ಬಗ್ಗೆ ಕೆಲವು ಪ್ರಶ್ನೆಗಳನ್ನು ಎತ್ತುವುದು ಅಗತ್ಯವಾಗಿದೆ. ಅಸ್ಪಷ್ಟವಾಗಿರುವ ಗತಕಾಲದ ಚರಿತ್ರೆಯನ್ನು ಮರುನಿರ್ಮಾಣ ಮಾಡಿ ಸ್ಪಷ್ಟಗೊಳಿಸಿಕೊಳ್ಳುವುದು ಇಲ್ಲಿ ಮುಖ್ಯವಾಗಿದೆಯಷ್ಟೆ. ಇದೊಂದು ಬಗೆಯಲ್ಲಿ ಗತಕಾಲದ ಚರಿತ್ರೆ ನಿರ್ಮಾಣವನ್ನು ಮುಖ್ಯವಾಗಿ ತೆಗೆದುಕೊಳ್ಳುವ ಓರಿಯಂಟಲಿಸ್ಟ್ ಮತ್ತು ಇಂಡಾಲಜಿಸ್ಟ್ ಅಧ್ಯಯನ ವಿಧಾನ. ಈ ವಿಧಾನದ ಸಮಸ್ಯೆಯೆಂದರೆ, ಚರಿತ್ರೆಯನ್ನು ವರ್ತಮಾನದ ಹರಿವಿನ ಜತೆಗೆ ಲಗತ್ತಿಸಿ ನೋಡದಿರುವುದು. ಹೀಗಾಗಿಯೇ ಈ ಕೃತಿಯಲ್ಲಿ ಇರುವ ತಮಿಳು ಮತ್ತು ಕನ್ನಡ ಭಾಷಿಕರ ಸಂಬಂಧವು ವರ್ತಮಾನದ ತಮಿಳು-ಕನ್ನಡಗಳ ಇಲ್ಲವೇ ತಮಿಳರ-ಕನ್ನಡಿಗರ ಸಂಬಂಧಗಳ ಪ್ರಶ್ನೆಗೆ ಲಗತ್ತುಗೊಂಡು ವರ್ತಮಾನತೆಯನ್ನು ಪಡೆಯುವುದಿಲ್ಲ. ಯಾವುದೇ ನಿರ್ಣಯವನ್ನು ಸಿಗುವ ಆಧಾರಗಳ ಮೇಲೆಯೇ ಹೇಳಬೇಕೆಂಬ ಇಲ್ಲಿನ ನಿಷ್ಠೆಯು ಮಾಹಿತಿಯ ದಾಖಲಾತಿಗೆ ಪ್ರಾಶಸ್ತ್ಯ ಕೊಡಿಸಿದೆ. ಇದರಿಂದ ಇಲ್ಲಿನ ನಿರೂಪಣ ವಿಧಾನದಲ್ಲಿ ಅತಿಯಾದ ವಿವರಣಶೀಲತೆ ಒದಗಿಬಿಟ್ಟಿದೆ. ಇದು ನೆನಪಿಡಲಾಗದಷ್ಟು ವಿವರಗಳಿಂದ ಕೂಡಿದ ವಿವರಣಶೀಲತೆಯಾಗಿದ್ದು ಬಹುತೇಕ ವಿವರಗಳು ಮನಸ್ಸಿನಲ್ಲಿ ಉಳಿಯದೆ ಹೋಗುತ್ತವೆ. ಜತೆಗೆ ಈ ಅತಿವಿವರಣಶೀಲತೆಯು ವ್ಯಾಖ್ಯಾನ ಮತ್ತು ಸೈದ್ಧಾಂತೀಕರಣಕ್ಕೆ ಬೇಕಾದ ಸ್ಪೇಸನ್ನು ಕಡಿಮೆಗೊಳಿಸಿದೆ. ಆಧಾರದ ಜತೆಗೇ ನಿರ್ಣಯ ಹೊಮ್ಮಬೇಕು ಎಂಬ ಇಲ್ಲಿನ ಮಾಹಿತಿ ನಿಷ್ಠೆಯು ಕೆಲವೊಮ್ಮೆ ಖಚಿತ ನಿರ್ಣಯಕ್ಕೆ ಬರದೆ ತೊಳಲಾಟ ಮಾಡುವುದಕ್ಕೂ ಕಾರಣವಾಗಿದೆ. ತೊಳಲಾಟದ ಈ ವಿಶ್ಲೇಷಣ ವಿಧಾನವು ಕೆಲವೊಮ್ಮೆ ನಿರ್ಣಯ ಕೈಗೊಳ್ಳಲು ತೋರುತ್ತಿರುವ ಹಿಂಜರಿಕೆಯಂತೆ ಕೂಡ ಕಾಣುತ್ತದೆ.

ಆದರೆ ಇದಕ್ಕೆ ಪ್ರತಿಯಾಗಿ ಶೆಟ್ಟರ್ ಕೆಲವೊಮ್ಮೆ ಮುಖ್ಯ ಹೇಳಿಕೆಗಳನ್ನು ಮಾಡುತ್ತಾರೆ. ಆದರೆ ಅವಕ್ಕೆ ತಕ್ಕ ಕಾರಣಾನ್ವೇಷಣೆಗೆ ತೊಡಗುವುದಿಲ್ಲ. ಉದಾಹರಣೆಗೆ, ''ಅಗಂ ಪುರಂ ತಮಿಳು ಸಾಹಿತ್ಯದ ಮೇಲೆ ಪ್ರಭಾವಿಸಿದಷ್ಟು ಕವಿರಾಜಮಾರ್ಗ ಮಾಡಲಿಲ್ಲ'' ಎಂಬ ಹೇಳಿಕೆ. ಹೀಗೆ ಉತ್ತರಲ್ಲದ ಅನೇಕ ಪ್ರಶ್ನೆಗಳು ಇಲ್ಲಿವೆ. ಇದೇ ತರಹ, ಯಾಕೆ ತಮಿಳರಿಗೆ ತಮಿಳಗಂ ಕಟ್ಟಿಕೊಳ್ಳುವ ಚಾರಿತ್ರಿಕ ಒತ್ತಡ ಬರುತ್ತಿತ್ತು ಎಂಬ ಪ್ರಶ್ನೆಯೂ ಇದೆ.

ಸಮಸ್ಯೆಯೆಂದರೆ ಇಡೀ ಕೃತಿಯಲ್ಲಿ ತಮಿಳರು ಎಂಬ ಪರಿಕಲ್ಪನೆಯು ಸಗಟಾಗಿ ಬಳಕೆಯಾಗಿರುವುದು. ಆದರೆ ತಮಿಳರ ಯಾವ ವರ್ಗಕ್ಕೆ ಮತ್ತು ಯಾವ ಕಾರಣಕ್ಕೆ ತಮಿಳಗಂ ಪ್ರಶ್ನೆಯು ಮುಖ್ಯವಾಗಿತ್ತು ಎಂಬುದನ್ನು ಪೃಥಕ್ಕರಿಸಿ ನೋಡುವ ಅಗತ್ಯವಿದೆ. ಯಾಕೆಂದರೆ ತಮಿಳಗಂ, ಕರ್ನಾಟಕತ್ವ ಅಥವಾ ಭಾರತೀಯತೆ ಮುಂತಾದ ರಾಷ್ಟ್ರೀಯತಾ ಪರಿಕಲ್ಪನೆಗಳು ನಿರ್ದಿಷ್ಟ ವರ್ಗದ ಹಿತಾಸಕ್ತಿಯ ರಾಜಕಾರಣವನ್ನು ಒಳಗೊಂಡಿರುತ್ತವೆ. ಈ ಕೃತಿಯೇ ಪರೋಕ್ಷವಾಗಿ ಸೂಚಿಸುವಂತೆ ಹೇಳುವಂತೆ ತಮಿಳಗಂ ಮುಖ್ಯವಾಗಿ ರಾಜರ ಮತ್ತು ಕವಿಗಳ ಒತ್ತಾಸೆಯಾಗಿದೆ. ಆದರೆ ಕೃತಿಯು ತಮಿಳಗಂ ಅನ್ನು ಸಮಗ್ರ ತಮಿಳು ಭಾಷಿಕರ ಒತ್ತಾಸೆಯೆಂಬಂತೆ ವ್ಯಾಖ್ಯಾನಿಸುತ್ತದೆ. ಇದನ್ನು ಒಪ್ಪುವುದು ಕಷ್ಟ.

ಈ ಕೃತಿ ಸೋಜಿಗವೆನಿಸುವಷ್ಟು ನಿರುದ್ವಿಗ್ನ ಶೈಲಿಯನ್ನು ಒಳಗೊಂಡಿದೆ. ಈ ನಿರುದ್ವಿಗ್ನತೆಯಿಂದ ಶಸ್ತ್ರಚಿಕಿತ್ಸಕನಿಗೆ ಬೇಕಾಗುವ ತಾಳ್ಮೆ ಮತ್ತು ಎಚ್ಚರಿಕೆಗಳು ಗುಣಗಳು ಒದಗಿಬಂದಿವೆ. ಇದರಿಂದ ಪರಿಣಾಮವನ್ನು ಲೆಕ್ಕಿಸದೆ ಫಲಿತವನ್ನು ಹೇಳುವ ವಿಚಿತ್ರವಾದ ವಸ್ತುನಿಷ್ಠತೆಯೂ ಇಲ್ಲಿನ ಶೋಧಕ್ಕೆ ದಕ್ಕಿದೆ. ಆದರೆ ಇದರಿಂದ ಬರೆಹಕ್ಕೆ ಇರಬೇಕಾದ ತೀವ್ರತೆಯು ಕಳೆದುಹೋಗಿ, ಶೈಲಿಯ ಜಡತೆಗೂ ಕಾರಣವಾಗಿದೆ ಅನಿಸುತ್ತದೆ. ವರ್ತಮಾನದ ಉರಿಯುವ ಸಮಸ್ಯೆಗಳನ್ನು ಗತದ ಹುಡುಕಾಟದ ಜತೆ ಬೆರೆಸದೆ ಇದ್ದಾಗ ಸಾಧ್ಯವಾಗುವ ನಿರುದ್ವಿಗ್ನತೆಯೇ ಇದು? ಬಹುಶಃ ಇದೊಂದು ಗತದ ಪುನಾರಚನವಾದಿ ಅಧ್ಯಯನಗಳ ಲಕ್ಷಣವೂ ಇರಬಹುದು. ಇಲ್ಲಿನ ನಿರುದ್ವಿಗ್ನ ಶೈಲಿಯಿಂದ ಕೃತಿಯ ಕೆಲವು ಭಾಗಗಳನ್ನು ಓದುವುದು ಪ್ರಯಾಸವಾಗುತ್ತದೆ. 'ಕೆಲವು ಭಾಗಗಳು' ಎಂಬುದನ್ನು ಅವಶ್ಯ ಹೇಳಬೇಕು. ಯಾಕೆಂದರೆ ಈ ಕೃತಿಯಲ್ಲಿ ಶೆಟ್ಟರ್ ಅವರು ತಮ್ಮ ಸಂಶೋಧನೆಗೆಂದೇ ವಿಶಿಷ್ಟ ಭಾಷೆಯೊಂದನ್ನು ಆವಿಷ್ಕರಿಸಿಕೊಳ್ಳುವ ಯತ್ನವನ್ನೂ ಮಾಡಿದ್ದಾರೆ. ಅವರು ಅನೇಕ ಹೊಸಪದಗಳನ್ನು ಸೃಷ್ಟಿಸುತ್ತಾರೆ; ಹಳಗನ್ನಡದ 'ಳ' ಮತ್ತು 'ಱ'ಕಾರಗಳನ್ನು ಅವರು ಬಳಕೆ ಮಾಡುತ್ತಾರೆ. ಕೆಲವು ಕಡೆ ಕಾವ್ಯಾತ್ಮಕವಾದ ವರ್ಣನೆಗೂ ಇಳಿಯುತ್ತಾರೆ. ಕಾವೇರಿ ನದಿ ಹರಿಯುವ ವರ್ಣನೆಯಂತೂ (ಪು.೯೮) ಅಪೂರ್ವವಾದ ಚಿತ್ರಕ ಶಕ್ತಿಯಿಂದ ಕೂಡಿದೆ. ಸಾಹಿತ್ಯಕ ಸಂವೇದನೆಯುಳ್ಳ ಸಂಶೋಧಕರು ಮಾತ್ರ ಇಂತಹ ಭಾಷೆಯನ್ನು ಬಳಸಬಲ್ಲರು. ಆದರೂ ಇಲ್ಲಿರುವ ತಮಿಳು ಕಾವ್ಯದ ಅನುವಾದಗಳು ಅಷ್ಟೊಂದು ಅರ್ಥಪೂರ್ಣವಾಗಿಲ್ಲ ಎಂದೇ ಹೇಳಬೇಕು. ಅವನ್ನು ಗದ್ಯರೂಪದಲ್ಲಿ ಇಟ್ಟಿದ್ದರೇ ಚೆನ್ನಾಗಿತ್ತು ಅನಿಸುತ್ತದೆ. ಕವಿಯೊಬ್ಬರು ಮಾಡುವ ಅನುವಾದಗಳಿಗೆ ಇರುವ ಸಹಜ ಲಯಗಾರಿಕೆ ಮತ್ತು ಕಾವ್ಯಮಯತೆ ಇಲ್ಲಿ ದೊರೆಕೊಂಡಿಲ್ಲ.

೫

ಶೆಟ್ಟರ್ ಅವರು ತಮ್ಮ ಕೃತಿರಚನೆಗೆ ಅವಲಂಬಿಸಿರುವ ತಮಿಳು ಸಂಸ್ಕೃತಿಗೆ ಸಂಬಂಧಿಸಿದ ಪರಾಮರ್ಶನ ಗ್ರಂಥಗಳು ಇಂಗ್ಲಿಷಿನವು. ಇದು ನಮ್ಮ ಕಾಲದ ಸಂಶೋಧಕರಿಗೆ ಅನಿವಾರ್ಯ ಕೂಡ. ಆದರೆ ಕನ್ನಡ ಮತ್ತು ತಮಿಳು ಎರಡನ್ನೂ ಬಲ್ಲವರು ಈ ವಿಷಯದ ಮೇಲೆ ಬರೆದಿದ್ದರೆ ಕೃತಿ ಹೇಗಿರುತ್ತಿತ್ತು ಎಂಬ ಕುತೂಹಲ ಓದುಗರಲ್ಲಿ ಇಣುಕಬಹುದು. ಕನ್ನಡಿಗ ಮತ್ತು ತಮಿಳರ, ಕನ್ನಡ ಮತ್ತು ತಮಿಳಿನ ಆದಿಮ ಸಂಬಂಧಗಳ ಬಗ್ಗೆ ಕನ್ನಡದಲ್ಲಿ ಕೆಲವು ಮೂಲಭೂತ ಪ್ರಶ್ನೆಗಳನ್ನು ಬಿ.ಎಂ.ಶ್ರೀ.ಯವರು ಹಾಗೂ ಬಿ.ಜಿ.ಎಲ್. ಸ್ವಾಮಿಯವರು ಎತ್ತಿರುವುದುಂಟು. ಶ್ರೀಯವರು ತಮ್ಮ 'ತಮಿಳಿನ 'ಪುರನಾನೂರಿ'ನಲ್ಲಿ ಪೊಯ್ಸಳರು' ಲೇಖನದಲ್ಲಿ ಕರ್ನಾಟಕದ ರಾಜರಾದ ಹೊಯ್ಸಳರಿಗೆ ಸಂಬಂಧಪಡುವ ವರ್ಣನೆಗಳುಳ್ಳ ಪದ್ಯಗಳು ಕ್ರಿಸ್ತಶಕದ ಮೊದಲಲ್ಲಿ ಇದ್ದಿತೆನ್ನಲಾಗುವ ತಮಿಳಿನ ಸಂಗಂ ಸಾಹಿತ್ಯದ ಕೃತಿಯಾಗಿರುವ ಪುರನಾನೂರಿನಲ್ಲಿ ಇರುವುದರಿಂದ, ಈ ಕುರಿತ ಎಂಟು ಪ್ರಶ್ನೆಗಳನ್ನು ಎತ್ತಿ, ಇವನ್ನು ಕುರಿತು 'ಚರಿತ್ರೆಯ ಶೋಧಕರು ವಿಮರ್ಶಿಸಬೇಕಾಗಿದೆ' ಎಂದು (೧೯೪೩) ಸೂಚಿಸಿದ್ದರು. ಅವರ 'ಪೂರ್ವದ ಹಳಗನ್ನಡ ಮತ್ತು ತಮಿಳು: ಕನ್ನಡ ಮೊದಲೊ ತಮಿಳು ಮೊದಲೊ' ಲೇಖನ (೧೯೪೦) ಕೂಡ ಅನೇಕ ಒಳನೋಟದ ಪ್ರಶ್ನೆಗಳನ್ನು ಒಳಗೊಂಡಿದೆ. ಶ್ರೀಯವರು ಸಂಶೋಧಕರು ಎತ್ತಬಹುದಾದ ಪ್ರಶ್ನೆಗಳನ್ನು ಎತ್ತುವುದು ಸೋಜಿಗ ತರುತ್ತದೆ. ಬಹುಶಃ ಅವರಿಗೆ ಸಂಸ್ಕೃತ ಪರಂಪರೆಯ ಭಾರದಿಂದ ಕನ್ನಡವನ್ನು ಬಿಡುಗಡೆ ಮಾಡುವ ಭಾಷಿಕ ರಾಜಕಾರಣದ ಉದ್ದೇಶವಿದ್ದ ಕಾರಣ, ಕನ್ನಡ ಮತ್ತು ತಮಿಳುಗಳ ಸಂಬಂಧ ಶೋಧದ ಬಗ್ಗೆ ಅವರಿಗೆ ಆಸ್ಥೆಯಿತ್ತು ಎಂದು ಕಾಣುತ್ತದೆ. ಆದರೆ ಈ ವಿಷಯದಲ್ಲಿ ಅವರಿಗೆ ತೊಡಗಿಕೊಳ್ಳಲು ಸಾಧ್ಯವಾಗಲಿಲ್ಲ. ಪಶ್ಚಿಮದ ಆಧುನಿಕತೆ, ಮಾನವತಾವಾದ ಹಾಗೂ ಇಂಗ್ಲಿಷ್ ಸಾಹಿತ್ಯವನ್ನು ಪಡೆದುಕೊಂಡು ಕನ್ನಡಕ್ಕೆ ಕಸಿಗೊಳಿಸಿ ಹೊಸಬೆಳೆಯನ್ನು ಬೆಳೆಯುವ ತವಕದಲ್ಲಿದ್ದ ಅವರಿಗೆ ಈ ದಿಸೆಯ ಹುಡುಕಾಟಕ್ಕೆ ಪುರುಸೊತ್ತು ಕೂಡ ಇರಲಿಲ್ಲ. ಜತೆಗೆ ತಮಿಳು-ಕನ್ನಡದ ಅಂತರ್‌ಸಂಬಂಧದ ಎಳೆಗಳನ್ನು ಮುಂದುವರೆಸಲು ಶ್ರೀಯವರಿಗೆ ಚಾರಿತ್ರಿಕ ಸನ್ನಿವೇಶವೂ ಪೂರಕವಾಗಿರಲಿಲ್ಲ ಎನ್ನಬಹುದು. ಕಾರಣ, ಆ ಹೊತ್ತಿನಲ್ಲಿ ಮೈಸೂರು ರಾಜ್ಯದ ಅಧಿಕಾರಶಾಹಿಯಲ್ಲಿ ತಮಿಳುನಾಡಿನವರ ದಬಾವಣೆಯು ಒಂದು ಬಗೆಯ ತಮಿಳು ವಿರೋಧಿ ಪರಿಸರವನ್ನು ನಿರ್ಮಿಸಿತ್ತು. ಮಾಸ್ತಿ, ನವರತ್ನ ರಾಮರಾವ್ ಮತ್ತು ಡಿ.ವಿ.ಜಿ.ಯವರ ಬರೆಹಗಳಲ್ಲಿ ಇದರ ಸೂಚನೆಗಳಿವೆ.

ಇನ್ನು ಮನೆಮಾತು ತಮಿಳಾಗಿದ್ದ ಬಿ.ಜಿ.ಎಲ್. ಸ್ವಾಮಿಯವರು ತಮಿಳುನಾಡಲ್ಲಿ ತಮಿಳು ವಿದ್ವಾಂಸರ ನಡುವೆ ಮೂರು ದಶಕಗಳ ಕಾಲ ಇದ್ದವರು. ಮಾತ್ರವಲ್ಲ ಅವರ ಜತೆ ವಿದ್ವತ್ ವಾಗ್ವಾದ ಮಾಡಿದವರು. ಸ್ವಾಮಿಯವರು, ತಮ್ಮ ವಾದಕ್ಕೆ ಬೇಕಾದ ತಿಳಿವಳಿಕೆ ಪಡೆಯಲು ಫ್ರೆಂಚು ಇಂಗ್ಲಿಷು ತಮಿಳು ಭಾಷೆಗಳಲ್ಲಿರುವ ಗ್ರಂಥಗಳನ್ನು ಅಭ್ಯಾಸ ಮಾಡಿದ್ದರು. ಸಮುದಾಯ, ಭಾಷೆ, ನಾಡುಗಳಿಗೆ ಸಂಬಂಧಪಟ್ಟ ಸಂಶೋಧನೆಯ ಹೊಳಹುಗಳನ್ನು ರಸವತ್ತಾದ ಕತೆಯಂತೆ ಹೇಗೆ ಬರೆಯಲು ಸಾಧ್ಯ ಎಂಬುದಕ್ಕೆ ಅವರ 'ತಮಿಳು ತಲೆಗಳ ನಡುವೆ' ಒಂದು ಅದ್ಭುತ ಪ್ರಯೋಗವಾಗಿದೆ. ಆದರೆ ಅದರಲ್ಲಿರುವ ವಿಪರೀತವಾದ ವಿಡಂಬನಾ ಮನೋಧರ್ಮವೇ ಸಂಶೋಧನೆಯ ಅಂಶಗಳನ್ನು ಗಂಭೀರವಾಗಿ ತೆಗೆದುಕೊಳ್ಳದಂತೆ ಮೇಲುಗೈ ಸಾಧಿಸಿದೆ. 'ಚಂಗಪುರಾಣದ ಅಲೆಗಳಲ್ಲಿ' ಎಂಬ ಮೊದಲ ಭಾಗದಲ್ಲಿ 'ತಮಿಳಗಂ' ಕುರಿತು ಚರ್ಚಿಸುವ ಸ್ವಾಮಿ, ಈ ಕುರಿತು ತಮಿಳರಿಗೆ ಇರುವ ಹುಂಬ ಅಭಿಮಾನವನ್ನು ತಮಾಶೆ ಮಾಡುತ್ತಾರೆ. ಈ ತಮಾಶೆಯ ಒಳಗೆ ತಮಿಳರನ್ನು ಕುರಿತ ಅವರ ಪೂರ್ವಗ್ರಹಗಳು ಕಟುವಾದ ವಿಮರ್ಶೆ ಹಾಗೂ ಬ್ಲಾಕ್‌ಹ್ಯೂಮರಿನ ರೂಪದಲ್ಲಿ ಹೊಮ್ಮಿ ಬರುತ್ತವೆ. ಕುತೂಹಲವೆಂದರೆ, ಶೆಟ್ಟರ್ ಅವರು ತಮಿಳಗಂ ಕುರಿತು ಚಿಂತನೆ ನಡೆಸಿದ ಬಿ.ಎಂ.ಶ್ರೀ. ಹಾಗೂ ಬಿ.ಜಿ.ಎಲ್. ಸ್ವಾಮಿ ಎಂಬ ಪೂರ್ವಸೂರಿಗಳನ್ನು ಚರ್ಚಿಸದಿರುವುದು. ಈ ಕೃತಿಗಳು ಅವರಿಗೆ ಸಿಗಲಿಲ್ಲವೊ ಅಥವಾ ಅವು ಚರ್ಚೆಗೆ ಅಗತ್ಯವೆನಿಸಲಿಲ್ಲವೊ ಗೊತ್ತಾಗುವುದಿಲ್ಲ. ಇಲ್ಲೇ ಕೇಳಿಕೊಳ್ಳಬೇಕಾದ ಪ್ರಶ್ನೆಯೆಂದರೆ, ಕನ್ನಡ, ಕನ್ನಡಿಗರು ಹಾಗೂ ಕರ್ನಾಟಕದ ಚರಿತ್ರೆ ಬರೆಯಲು ಯತ್ನಿಸಿದ ಶಂಬಾ, ತಮಿಳಗಂ ಮೂಲಕ ಪ್ರವೇಶಿಸಲು ಯಾಕೆ ಹೆಚ್ಚು ಯತ್ನಿಸಲಿಲ್ಲ? ಇದರ ಕಾರಣವನ್ನು ತಿಳಿಯಬೇಕಿದೆ.

೬

ಯಾವುದೇ ಸಂಶೋಧನ ಕೃತಿಯ ಮಹತ್ವವು, ತನಗೆ ಪ್ರಿಯವಾದ ವಿಚಾರಗಳನ್ನು ಕನ್ವಿನ್ಸ್ ಮಾಡುವುದರಲ್ಲಿಲ್ಲ. ಬದಲಿಗೆ ಹೊಸ ಪ್ರಶ್ನೆಗಳನ್ನು ಹುಟ್ಟಿಸುವುದರಲ್ಲಿದೆ. ಶೆಟ್ಟರ್ ಅವರ 'ಶಂಗಂ ತಮಿಳಗಂ' ಅನೇಕ ಪ್ರಶ್ನೆಗಳನ್ನು ಕೇಳಿಕೊಳ್ಳಲು ಒತ್ತಾಯಿಸುತ್ತದೆ. ಈಚೆಗೆ ಕನ್ನಡದಲ್ಲಿ ಸಾಹಿತ್ಯ ರಚಿಸುವವರು ಅದರಲ್ಲೂ ಕವಿತೆ ಬರೆಯುವವರು ಹೆಚ್ಚಿದ್ದಾರೆ. ಆದರೆ ಶ್ರಮದಾಯಕವಾದ ವಿಮರ್ಶೆ ಮತ್ತು ಸಂಶೋಧನೆ ಕ್ಷೇತ್ರದಲ್ಲಿ ದುಡಿಯುವವರು ಹೊಸ ತಲೆಮಾರಿನಲ್ಲಿ ಹೆಚ್ಚಾಗಿಲ್ಲ. ಇಂತಹ ಸಂದರ್ಭದಲ್ಲಿ ಪಾಂಡಿತ್ಯ, ಗಾಂಭೀರ್ಯ, ಸಂಯಮ ಮತ್ತು ಶ್ರಮದಿಂದ ರೂಪುಗೊಂಡಿರುವ ಈ ಕೃತಿ ಆಶಾದಾಯಕವಾಗಿದೆ. ಭಿನ್ನಮತಗಳು ಏನೇ ಏಳಲಿ, ಈ ಕೃತಿ ಮಾತ್ರ, ತಮಿಳು ಮತ್ತು ಕನ್ನಡ ವಿದ್ವಾಂಸರ ಮುಂದೆ, ಕನ್ನಡ ಮತ್ತು ದ್ರಾವಿಡ ಸಂಸ್ಕೃತಿಗಳ ಅಧ್ಯಯನಕ್ಕೆಂದು ಸ್ಥಾಪನೆಯಾಗಿರುವ ವಿಶ್ವವಿದ್ಯಾಲಯಗಳ ಮುಂದೆ, ಅನೇಕ ಸವಾಲುಗಳನ್ನು ಇಟ್ಟಿದೆ. ಅವನ್ನು ಎತ್ತಿಕೊಳ್ಳುವವರು ಈಗ ಬೇಕಾಗಿದ್ದಾರೆ. ಈ ಕೃತಿ ಹೊಸತಲೆಮಾರಿನ ಪಾಲಿಗೆ ದೃಷ್ಟಿಕೋನಕ್ಕಿಂತ ಹೆಚ್ಚಾಗಿ ಸಂಶೋಧನೆಗೆ ಬೇಕಾದ ಶ್ರದ್ಧೆಯ ವಿಷಯದಲ್ಲಿ ಒಂದು ಮಾದರಿಯಂತಿದೆ. ಸಂಶೋಧನ ಕೃತಿಯೊಂದು ಒಂದೇ ವರ್ಷದಲ್ಲಿ ಎರಡನೇ ಮುದ್ರಣವನ್ನು ಕಂಡಿರುವುದು ಸಂಶೋಧನೆಯ ಜನಪ್ರಿಯತೆಯನ್ನು ಸೂಚಿಸುತ್ತದೆಯೊ, ಶೆಟ್ಟರ್ ಅವರ ಸಂಶೋಧನೆಯ ಮಹತ್ವವನ್ನು ತಿಳಿಸುತ್ತದೆಯೊ ತಿಳಿಯದು. ಆದರೆ ಅದಕ್ಕೆ ಸಿಗುತ್ತಿರುವ ಮನ್ನಣೆ ಮಾತ್ರ ಅದಕ್ಕೆ ಉಚಿತವಾಗಿದೆ.

## ಅಭ್ಯಾಸಸೂಚಿ


ಎಸ್. ಶೆಟ್ಟರ್, ಶಂಗಂ ತಮಿಳಗಂ ಮತ್ತು ಕನ್ನಡ ನಾಡು-ನುಡಿ, ಅಭಿನವ ಪ್ರಕಾಶನ, ಬೆಂಗಳೂರು, ೨೦೦೮

ಬಿ.ಜಿ.ಎಲ್. ಸ್ವಾಮಿ, ತಮಿಳು ತಲೆಗಳ ನಡುವೆ, ಐಬಿಎಚ್ ಪ್ರಕಾಶನ, ಬೆಂಗಳೂರು, ೧೯೭೯

ಬಿ.ಎಂ.ಶ್ರೀ., ತಮಿಳಿನ 'ಪುರನಾರೂರಿ'ನಲ್ಲಿ ಪೊಯ್ಸಳರು, ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ, ಶ್ರೀಸಾಹಿತ್ಯ, ಮೈಸೂರು ವಿಶ್ವವಿದ್ಯಾನಿಲಯ, ೧೯೮೩

ರಹಮತ್ ತರೀಕೆರೆ, ಎಸ್. ಶೆಟ್ಟರ್ ಅವರ ಸಂದರ್ಶನ, ಲೋಕವಿರೋಧಿಗಳ ಜತೆಯಲ್ಲಿ, ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು, ೨೦೦೬



ರಹಮತ್ ತರೀಕೆರೆ

ಎಂ. ಪಿ. ಪ್ರಕಾಶ ನಗರ, ಹೊಸಪೇಟೆ - ೫೮೩ ೨೦೧, ಬಳ್ಳಾರಿ ಜಿಲ್ಲೆ

**ಕ**ನ್ನಡ ಸಾರಸ್ವತ ಲೋಕದಲ್ಲಿ ೧೯೭೦ರ ದಶಕ ಅತ್ಯಂತ ಪ್ರಮುಖ ಘಟ್ಟ. ''ಕನ್ನಡ ಸಾಹಿತ್ಯದಲ್ಲಿ ಏನೂ ಇಲ್ಲ, ಎಲ್ಲವೂ ಬೂಸಾ'' ಎಂಬ ಬಸವಲಿಂಗಪ್ಪನವರ ಮಾತು, ಶತಶತಮಾನಗಳಿಂದ ಶೋಷಿತರಾಗಿದ್ದ ಮೂಕ ಜನರಿಗೆ ಮಾತು ಕೊಟ್ಟ ಸಿದ್ಧಲಿಂಗಯ್ಯ ಅವರ ಕಾವ್ಯ, ಇದುವರೆಗಿನ ಸಾಹಿತ್ಯಕ್ಕಿಂತ ಭಿನ್ನವಾಗಿ ನೆಲದ ವಾಸನೆಯುಳ್ಳ 'ದಲಿತ-ಬಂಡಾಯ' ಸಾಹಿತ್ಯ ಚಳವಳಿಯ ಸಂದರ್ಭ ಸಂಪೂರ್ಣ ಭಿನ್ನವಾದದ್ದು. ಪ್ರಶ್ನೆ ಮತ್ತು ಪ್ರತಿಭಟನೆಗಳು ಪ್ರತೀಕವಾಗಿ ಸಾಮಾಜಿಕ ಬದುಕು ಮತ್ತು ಸಾಹಿತ್ಯ ಮೌಲ್ಯಗಳನ್ನು ಬದಲಾವಣೆಯ ತೀವ್ರತೆಯಲ್ಲಿ ಶೋಧಿಸುವ ಮತ್ತು ತೆರೆದಿಡುವ 'ಮನುಷ್ಯ' ಚಳವಳಿಯ ಆದರ್ಶ. ಈತ (ಬಂಡಾಯ ಮನುಷ್ಯ) ಸಮಾನತೆಗಾಗಿ ತುಡಿಯುತ್ತ, ಮಣ್ಣಿನ ಕಣಕಣವನ್ನೂ ಕರುಳು-ಕಣ್ಣುಗಳಲ್ಲಿ ತುಂಬಿಕೊಂಡು ಸಿಡಿಯುತ್ತ, ನೋವಿನಿಂದ ನಲಗುತ್ತ, ಆಶಾವಾದದಲ್ಲಿ ಅರಳುತ್ತ, ನೊಂದವರ ದನಿಯಾಗಬಯಸುವ ಮಾನವತಾವಾದಿ.

ದಲಿತ-ಬಂಡಾಯ ಕಾವ್ಯಯುಗದಲ್ಲಿ ಅನೇಕ ಸಾಹಿತಿಗಳು ತಮ್ಮ ಕವಿತೆ, ಕಥೆ, ಕಾದಂಬರಿ, ಆತ್ಮಕಥೆ ಮೊದಲಾದ ಪ್ರಕಾರಗಳಲ್ಲಿ ತಮ್ಮ ನೋವನ್ನು, ಸಮಾಜದ ನೋವನ್ನು ಅತ್ಯಂತ ಸಹಜ ಭಾಷೆಯಲ್ಲಿ ಹೇಳಿರುವರು. ಸಿದ್ಧಲಿಂಗಯ್ಯ, ಅರವಿಂದ ಮಾಲಗತ್ತಿ, ಮನಜ, ದೇವನೂರ ಮಹಾದೇವ, ಬರಗೂರು ರಾಮಚಂದ್ರಪ್ಪ.. ಮೊದಲಾದವರ ಸಾಹಿತ್ಯದಲ್ಲಿ ಜನಸಾಮಾನ್ಯೋದ್ಧಾರದ ತುಡಿತವಿದೆ. ಅರವಿಂದ ಮಾಲಗತ್ತಿಯವರ 'ಬೆಳೆದಾವೋ ದಲಿತ ಮಕ್ಕಳ', 'ದಲಿತ ಮಕ್ಕಳ ಹಾಡು', 'ಭಾರತದ ಬೆಲ್ಚಿ', 'ಶಾರದೆ'; ಮನಜ ಅವರ 'ಕೇಳು ಜಗಮಾದಿಗ ಹೊಲೆಯ' ಈ ಕವನಗಳು ಅಸ್ಪೃಶ್ಯತೆಯ ನೋವಿನ ಜೊತೆಗೆ ಬಡತನದ ದುಃಖದ ಬದುಕನ್ನೂ ಅತ್ಯಂತ ಪರಿಣಾಮಕಾರಿಯಾಗಿ ಹೇಳುತ್ತವೆ. ದೇವನೂರರ 'ಒಡಲಾಳ' ಪ್ರಮುಖ ಕೃತಿ. 'ಒಡಲಾಳ' ಸಾಕವ್ವನ ಹಸಿದ ಹಟ್ಟಿಯ ಕಥೆ. ಸಾಕವ್ವ, ಕಾಳಣ್ಣ ಪುಟ್ಟಗೌರಿ, ಡೆಪ್ಟಿಕಮೀಷನರ್... ಮೊದಲಾದ ಪಾತ್ರಗಳು ದಲಿತ ಬದುಕಿನ ಜೀವಂತ ಘಟಕಗಳು... ''ಯಾವ ವ್ಯವಸ್ಥೆ ತನ್ನ ಮೂಲ ಬೇರು ಗಳಲ್ಲಿರುವ ವಂಚನೆಯ ಮೂಲಕ ಹಸಿವನ್ನು ಸೃಷ್ಟಿಸಿದೆಯೋ ಆ ವ್ಯವಸ್ಥೆಯನ್ನು ವಂಚಿಸಿಯೇ ಸಾಕವ್ವನ ಹಟ್ಟಿಯ ಹಸಿವು ಶಮನಗೊಳ್ಳುವುದರಿಂದ ಸಾಕವ್ವನ ಹಟ್ಟಿ ಪ್ರತೀಕಾರದ ಸಂಕೇತವಾಗುತ್ತದೆ.'' ದೇವನೂರರ ಕಥೆ, ಕಾದಂಬರಿಯಲ್ಲೂ ಬಡವರ, ದುರ್ಬಲರ, ದಲಿತರ, ದುರ್ಭರ ಬದುಕು ಪರಿಣಾಮಕಾರಿಯಾಗಿಯೇ ಪ್ರಕಟವಾಗಿದೆ.

ದಲಿತ ಬಂಡಾಯದ ಅನೇಕ ಕವಿಗಳಲ್ಲಿ ಇಂಥ ನೈಜ ಅನುಭವವಿದೆ. ಇಲ್ಲಿ ಸಿದ್ಧಲಿಂಗಯ್ಯ ಅವರ ಕಾವ್ಯವನ್ನು ಪ್ರಧಾನವಾಗಿ ನೋಡಲಾಗಿದೆ. ಸಿದ್ಧಲಿಂಗಯ್ಯ ಅವರ ಕಾವ್ಯದಲ್ಲಿ ಬಡವರ, ಹಸಿವಿನ, ಅಸ್ಪೃಶ್ಯತೆಯ ನೋವನ್ನು ಗುರುತಿಸಲಾಗಿದೆ. ''ಶತಶತಮಾನಗಳ ಕಾಲ ತುಳಿತಕ್ಕೊಳಗಾದ ದಲಿತವರ್ಗದ ರೋಷದ ಕಿಡಿ ಕವನವಾಗಿ ಮೂಡಿ ಕನ್ನಡ ಕಾವ್ಯಕ್ಕೆ ಹೊಸ ಆಯಾಮ ನೀಡಿ, ಇತಿಹಾಸ ಸೃಷ್ಟಿಸಿದ ಕವಿ ಡಾ|| ಸಿದ್ಧಲಿಂಗಯ್ಯ.'' ''ನನ್ನ ಜನದೊಡನೆ ನಾನಾಡಿದ ಮಾತು ನಾನು ಕೊಡುವ ಕವನ ನನ್ನ ಜನರ ನಾ ನೋಡಿದ ರೀತಿ ನನ್ನ ಒಡಲ ಕವನ'' – ಸಿದ್ಧಲಿಂಗಯ್ಯ ಜನಸಾಮಾನ್ಯರೊಳಗೆ ಬೆಳೆದು ಬಂದ ಕವಿ. ''೨೦ನೇ ಶತಮಾನದ ಕನ್ನಡ ಕಾವ್ಯದಲ್ಲಿ ಸಿದ್ಧಲಿಂಗಯ್ಯನವರಿಗೆ ಸ್ಥಾನವಿರುವುದು ಈ ಶತಮಾನದಲ್ಲಿ ಅವರು ದಲಿತರ ಆದಿಕವಿ ಎಂಬ ಕಾರಣಕ್ಕೆ ಮತ್ತು ಈ ಶತಮಾನದಲ್ಲಿ ದಲಿತರ ಆತ್ಮ-ಪ್ರತಿನಿಧೀಕರಣದ ಎಲ್ಲ ಸಮಸ್ಯೆಗಳೂ ಈ ಆದಿಕವಿಯಲ್ಲಿ ಎದ್ದು ಕಾಣುತ್ತವೆ.''

ಸಿದ್ಧಲಿಂಗಯ್ಯ ಅವರ 'ಹೊಲೆಮಾದಿಗರ ಹಾಡು' ಸಂಕಲನದ 'ನನ್ನ ಜನಗಳು' ಮುಖ್ಯ ಕವಿತೆ.

**ಎಚ್. ಕೆ. ವೆಂಕಟೇಶ**

# ಬಡತನದಲ್ಲಿ ಅರಳಿದ ಹೂವು ಸಿದ್ಧಲಿಂಗಯ್ಯ ಅವರ ಕಾವ್ಯ



ಹಸಿವಿನಿಂದ ಸತ್ತೋರು ಸೈಜುಗಲ್ಲು ಹೊತ್ತೋರು
ವದೆಸಿಕೊಂಡು ವರಗಿದೋರು ನನ್ನ ಜನಗಳು
(ನನ್ನ ಜನಗಳು ಮತ್ತು ಇತರ ಕವಿತೆಗಳು, ಪು.೧)

ಈ ''ಪದ್ಯ ಒಂದು ಕಡೆ ಆರ್ಥಿಕ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕವಾಗಿ ಶೋಷಣೆಗೆ ಒಳಗಾದವರನ್ನು ಚಿತ್ರಿಸುತ್ತಾ ಇನ್ನೊಂದು ಕಡೆ ಆ ಕರ್ಮದ ಹಿಂದಿರಬಹುದಾದ ಕರ್ತೃ ಶೋಷಕರನ್ನು ಓದುಗರಿಗೆ ಊಹಿಸಿಕೊಳ್ಳಲು ಬಿಡುತ್ತದೆ.'' ಸಾಮಾನ್ಯ ಜನರ ಅಸಹ್ಯ ಸ್ಥಿತಿ, ಸಿರಿವಂತರ ಆಡಂಬರದ ಸ್ಥಿತಿಗಳನ್ನು ಕಟ್ಟಿಕೊಡುತ್ತದೆ ಕವನ.

ಚಿನ್ನವನ್ನು ತೆಗೆಯೋರು ಅನ್ನವನ್ನು ಕಾಣದೋರು
ಬಟ್ಟೆಯನ್ನು ನೇಯೋರು ಬರಿಮೈಲೇ ಹೋಗೋರು
ಹೇಳಿದಂತೆ ಕೇಳುತಾರೆ ನನ್ನ ಜನಗಳು
ಗಾಳಿಯಲ್ಲೆ ಬಾಳುತಾರೆ ನನ್ನ ಜನಗಳು (ಅದೇ)

ಬಡತನದ ಬಗೆಗಿನ ಈ ಸಾಲು ಬಹುಮುಖ್ಯ. ಬಡತನದಲ್ಲಿ ಬೇಯುವಂಥವರಿಗೆ ಅಸ್ಪೃಶ್ಯತೆಯ ನೋವು ಬರೆ ಮೇಲೆ ಬರೆ ಎಳೆದಂತೆಯೇ ಆಗುತ್ತದೆ. ಜಮೀನ್ದಾರರು, ಬಂಡವಾಳಶಾಹಿಗಳು, ಸಾಲ ಕೊಡುವವರು, ಧರ್ಮದ ಹೆಸರೇಳಿ ಜೀವಿಸುವ ದೈತ್ಯರು ಹೇಗೆ ಬಡವರ, ದುರ್ಬಲರ ರಕ್ತ ಹೀರುತ್ತಾರೆ ಎಂಬುದು ಕವನದ ತುಂಬ ತುಂಬಿಬಂದಿದೆ.

ವ್ಯವಸ್ಥೆಯ ವಿರುದ್ಧ ಸಿದ್ಧಲಿಂಗಯ್ಯ ಅವರದು 'ಇಕ್ರಲಾ ವದೀರ್‍ಲಾ ಈ ನನ್ ಮಕ್ಳ ಚರ್ಮ ಎಬ್ಬಲಾ' (ಒಂದು ಪದ) ಎಂಬ ವಿರುದನಿ. ಆದುದರಿಂದ ಬಡವನ ಮೂಳೆ 'ನಾ ಮೂಳೆ, ನಾ ಇಂಗೇ ಇರಲ್ಲ ಕೂಗ್ತೀನಿ, ಸಿಡಿತಿನಿ, ಮನುಷ್ಯ ಆಯ್ತಿನಿ' (ಒಂದು ಮೂಳೆಯ ಹಾಡು) ಎಂದು ಸಿಡಿಯುತ್ತದೆ. ೭೦ರ ದಶಕದಲ್ಲಿ ಈ ಮಾತುಗಳು ಹೊಸಬಗೆಯದೇ ಆಗಿ ಕಾವ್ಯಕ್ಕೆ ಹೊಸತನವನ್ನು, ಜೀವಂತಿಕೆಯನ್ನು ತುಂಬಿದ್ದನ್ನು ಇಲ್ಲಿ ನೆನೆಯಬಹುದು.

''ಕ್ರಾಂತಿ ಎಂದರೆ ಸಾಮಾನ್ಯ ಜನ ಸಿಡಿದೇಳುವ ಕ್ರಿಯೆ. ಅದೊಂದು ದಂಗೆ. ಜನ

ಸಿಟ್ಟಿನಿಂದ ಒಮ್ಮೆಗೇ ಸ್ಫೋಟಿಸುವ ಜ್ವಾಲಾಮುಖೀ ಕ್ರಿಯೆ. ಕ್ರಾಂತಿಯ ಈ ಸರಳ ಕಲ್ಪನೆಗೆ ಅನುಗುಣವಾಗಿಯೇ ಕಾವ್ಯವೂ ಇರುತ್ತದೆ.''

ಗುಡಿಸಲುಗಳು ಗುಡುಗುತಿವೆ ಬಂಗಲೆಗಳು
ನಡುಗುತಿವೆ
ಎಲ್ಲೆಲ್ಲಿಯು ಮೊಳಗುತ್ತಿದೆ ನವಕ್ರಾಂತಿಯ ಗಾನ
(ಕ್ರಾಂತಿಪದ, ಪು. ೫)

ಅಸಮಾನತೆ ಹೆಚ್ಚಿದಾಗ ಅದು ಕ್ರಾಂತಿಗೆ ಕಾರಣವಾಗುತ್ತದೆ ಎಂಬುದು ಕಾರ್ಲ್ ಮಾರ್ಕ್ಸ್‌ನ ಸಿದ್ಧಾಂತ. 'ಅಸಮಾನತೆ ಆಗುತ್ತಿದೆ ಕ್ರಾಂತಿಗೆ ಸೋಪಾನ' ಎನ್ನುವ ಕವಿ ಈ ಕ್ರಾಂತಿಯ ಪರಿಣಾಮವಾಗಿ ಇಡೀ ವ್ಯವಸ್ಥೆ ಬದಲಾಗುತ್ತದೆ ಎಂಬ ಆಶಯ ಹೊಂದುತ್ತಾರೆ. 'ಸುಲಿದವರನು ಸುಲಿವ ದಿನ ಬಂದಿತೆಂದು ಹಿಗ್ಗುತ್ತಿದೆ' ಕ್ರಾಂತಿ ಎಂಬಲ್ಲಿ ಈ ನಿಲುವು ಸ್ಪಷ್ಟ.

'ನನ್ನವಳಿಗೆ' ಕ್ರಾಂತಿಯ ಸಂದೇಶವನ್ನು ಹೊತ್ತ ಮತ್ತೊಂದು ಕವನ.

ಬಡಜನಗಳ ಬಂಡಾಯದಿ
ನಿನಗೆ ಮುತ್ತನೊತ್ತುವೆ
ಕ್ರಾಂತಿಜಯವ ಪಡೆವವರೆಗು
ನಿನ್ನ ಹಿಂದೆ ಸುತ್ತುವೆ
(ನನ್ನವಳಿಗೆ, ಪು. ೧೬)

''ಅಸ್ಪೃಶ್ಯತೆಯ ಅನುಭವ ಹುಟ್ಟಿನ ಮೂಲವನ್ನು ನಿರ್ದಿಷ್ಟಗೊಳಿಸಿದಂತೆ ದಲಿತರನ್ನು ಕೆಲವರು ಗುರ್ತಿಸಿದರೆ, ಮತ್ತೆ ಕೆಲವರು ಹಸಿವು ಅವಮಾನಗಳ ಅನುಭವವನ್ನು ವಿಸ್ತರಿಸಿಕೊಂಡಂತೆ ಎಲ್ಲ ವರ್ಗದ ಶೋಷಿತರನ್ನು ಈ ತೆಕ್ಕೆಗೆ ತಬ್ಬಿಕೊಳ್ಳುವ ಪ್ರಯತ್ನ ಮಾಡಿದ್ದಾರೆ.''

ದಲಿತ ಭಾರತದ ಬಾವುಟದಲ್ಲಿ
ನಿಂತರು ರೈತರು ಕಾರ್ಮಿಕರು
ಬಿರಿವವು ಹೂವು ಬನಬನದಲ್ಲಿ
ಹಾರಿದೊ ಹಕ್ಕಿ ನೂರಾರು
ಕಂಡಿತು ಹಕ್ಕಿ ನೂರಾರು
ಕಂಡಿತು ಕೆಂಪು ಮೂಡಣದಲ್ಲಿ
ಬೆಳಗಾಯಿತು ಬಡವರಿಗೆ
ದಲಿತರು ಬರುವರು ದಾರಿಬಿಡಿ
ದಲಿತರು ಬಂದರು ರಾಜ್ಯಬಿಡಿ
(ದಲಿತರು ಬರುವರು, ಪು. ೩೪)

ದಲಿತ ಪರಿಕಲ್ಪನೆಯ ವಿಸ್ತಾರವಾದ, ಬಡವರ-ದಲಿತರ ಬಗೆಗೆ ಆಶಾವಾದಿ ನಿಲುವು ತಳೆಯುವ ಕವಿಯ ಕಾವ್ಯವಿಲ್ಲಿ ಮುಖ್ಯ. 'ನಾ ಬಡವನು ನನಗೇತಕೆ ಉದ್ಯಾನದ ಗೋಜು' (ಮಸಣದ ಚಲುವೆಗೆ), 'ಕೂಳಿಲ್ಲದೆ ಕೊರಗುವವರು ನಾವು ಹಸಿದ ಹುಲಿಗಳು' (ನಾವು) ಎನ್ನುವ ಸಿದ್ಧಲಿಂಗಯ್ಯ ಅವರ ಸ್ಪಷ್ಟ ದನಿ 'ಉಪದೇಶವು ನಮಗೆ ಬೇಡ, ಬೇಕು ನಮಗೆ ಅನ್ನವು.' ಇದು ಸಾವಿರಾರು ಬಡವರ ದನಿಯೂ ಆಗಿದೆ.

ಸಿದ್ಧಲಿಂಗಯ್ಯ ಅವರ ಮೊದಲ ಸಂಕಲನ 'ಹೊಲೆಮಾದಿಗರ ಹಾಡಿ'ನಿಂದ ಎರಡನೆ ಸಂಕಲನ 'ಸಾವಿರಾರು ನದಿಗಳು' ಬರುವ ಹೊತ್ತಿಗೆ ಕವಿಯ ಕ್ರಾಂತಿಯ ಧ್ವನಿ ಮಾಗಿದಂತೆ ಭಾಸವಾಗುತ್ತದೆ. ''... 'ಕಪ್ಪುಮುಖ ಬೆಳ್ಳಿಗಡ್ಡ, ಉರಿಯುತಿರುವ ಕಣ್ಣುಗಳು' ಇರುವ ಬಡವರ ಒಂದು ದೊಡ್ಡ ವರ್ಗವೇ

**ದಲಿತ ಬಂಡಾಯದ ಅನೇಕ ಕವಿಗಳಲ್ಲಿ ಒಂದು ನೈಜ ಅನುಭವವಿದೆ. ಇಲ್ಲಿ ಸಿದ್ಧಲಿಂಗಯ್ಯ ಅವರ ಕಾವ್ಯವನ್ನು ಪ್ರಧಾನವಾಗಿ ನೋಡಲಾಗಿದೆ. ಸಿದ್ಧಲಿಂಗಯ್ಯ ಅವರ ಕಾವ್ಯದಲ್ಲಿ ಬಡವರ, ಹಸಿವಿನ, ಅಸ್ಪೃಶ್ಯತೆಯ ನೋವನ್ನು ಗುರುತಿಸಲಾಗಿದೆ. ಶತಶತಮಾನಗಳ ಕಾಲ ತುಳಿತಕ್ಕೆ ಒಳಗಾದ ದಲಿತ ವರ್ಗದ ರೋಷದ ಕಿಡಿ ಕವನವಾಗಿ ಮೂಡಿ ಕನ್ನಡ ಕಾವ್ಯಕ್ಕೆ ಹೊಸ ಆಯಾಮ ನೀಡಿ, ಇತಿಹಾಸ ಸೃಷ್ಟಿಸಿದ ಕವಿ ಡಾ॥ ಸಿದ್ಧಲಿಂಗಯ್ಯ. ''ನನ್ನ ಜನದೊಡನೆ ನಾನಾಡಿದ ಮಾತು ನಾನು ಕೊಡುವ ಕವನ ನನ್ನ ಜನರ ನಾ ನೋಡಿದ ರೀತಿ ನನ್ನ ಒಡಲ ಕವನ'' – ಸಿದ್ಧಲಿಂಗಯ್ಯ ಜನಸಾಮಾನ್ಯರೊಳಗೆ ಬೆಳೆದುಬಂದ ಕವಿ.**

ಇದೆ... ಈ ಕವನದಲ್ಲಿ ಶ್ರೀಮಂತರ ಸೊಕ್ಕಿನ ವ್ಯವಸ್ಥೆಯ ವಿರುದ್ಧ ಬಡವರು ಹೋರಾಡುವ ಚಿತ್ರವಿದೆ... ಸಿದ್ಧಲಿಂಗಯ್ಯನವರ 'ನನ್ನ ಜನಗಳು' ಕವನದಲ್ಲಿ ಶೋಷಿತ ಜನರ ವ್ಯವಸ್ಥೆ ಮತ್ತು ಶೋಷಕರ ವ್ಯವಸ್ಥೆ ಅಭಿವ್ಯಕ್ತಗೊಳ್ಳುವುದು...'' 'ಹೊಲೆಮಾದಿಗರ ಹಾಡಿ'ನ 'ನನ್ನ ಜನಗಳ'ಲ್ಲಿ ಈ ರೀತಿಯ ಅಭಿವ್ಯಕ್ತಿ ಬಂದರೆ 'ಸಾವಿರಾರು ನದಿ'ಯಲ್ಲಿ ಹೊಸ ಪ್ರತಿಮೆಗಳ ಮೂಲಕ ಕವಿ ಮಾತನಾಡುತ್ತಾರೆ. 'ನೆನ್ನೆ ದಿನ ನನ್ನ ಜನ ಬೆಟ್ಟದಂತೆ ಬಂದರು' ಎನ್ನುವ ಕವಿ 'ಹೋರಾಟದ ಸಾಗರಕ್ಕೆ ಸಾವಿರಾರು ನದಿಗಳು' ಎನ್ನುತ್ತಾರೆ. ಸಾಮಾನ್ಯ ಜನರ ಧೀರ ನಡಿಗೆ ಇದು :

'ಕಪ್ಪು ಮುಖ ಬೆಳ್ಳಿಗಡ್ಡ ಉರಿಯುತಿರುವ
ಕಣ್ಣುಗಳು...

ಧಿಕ್ಕಾರ ಧಿಕ್ಕಾರ ಅಸಮಾನತೆಗೆ
ಎಂದೆಂದಿಗೂ ಧಿಕ್ಕಾರ ಶ್ರೀಮಂತರ ಸೊಕ್ಕಿಗೆ
ಲಕ್ಷಾಂತರ ನಾಗರುಗಳು ಹುತ್ತಬಿಟ್ಟು ಬಂದಂತೆ
ಊರತುಂಬ ಹರಿದರು
ಪಾತಾಳಕೆ ಇಳಿದರು
ಆಕಾಶಕೆ ನೆಗೆದರು
(ಸಾವಿರಾರು ನದಿಗಳು, ಪು. ೨೯)

ಕವಿ ಇಲ್ಲಿ ಸಮೂಹ ಪ್ರಜ್ಞೆಗೆ ಹೆಚ್ಚಿನ ಮಹತ್ವ ಕೊಡುತ್ತಾನೆ. ಈ ಸಮೂಹ ಪ್ರಜ್ಞೆಗೆ ಶೋಷಕರು ಬೆವರುತ್ತಾರೆ. ದಲಿತರು ಬಾಯಿ ಬಿಟ್ಟೊಡನೆಯೇ ಶೋಷಕರ ಬಾಯಿ ಕಟ್ಟುತ್ತದೆ. ದಲಿತರ ಕಂಠ ಕೇಳಿದೊಡನೆಯೇ ಅವರ ದನಿ ಇಂಗುತ್ತದೆಂದು ಸಿದ್ಧಲಿಂಗಯ್ಯ ಸಮೂಹತೆಯ ಮಹತ್ವವನ್ನು ಸಾರುತ್ತಾರೆ.

ಇಲ್ಲಿ ಸಿದ್ಧಲಿಂಗಯ್ಯ ಅವರ ಕಾವ್ಯದ ಶಕ್ತಿಯನ್ನು ಸ್ಪಷ್ಟವಾಗಿ ಗುರುತಿಸಬಹುದು.

'ಬಿದ್ದಾವು ಮನೆಗಳು' ಬಡತನದ ಪರಿಣಾಮವನ್ನು ಹೇಳುವ ಕವಿತೆ. ಶ್ರೀಮಂತರಿಂದ ಬಡವರ ಶೋಷಣೆ ಹೇಗೆ ನಿರಂತರ ಎಂಬುದಿಲ್ಲಿ ಸ್ಪಷ್ಟ.

ಬಡವರ ಹೆಸರೇಳಿ ಪಟ್ಟಕೆ ಬಂದೋರು
ಬಡವರ ಚಟ್ಟವ ಕಟ್ಟೇಸಿ ಮಣ್ಮಾಡಿ
ಗುಡಿಸಲುಗಳ ನುಂಗಿ ನಗುತ್ತಾರಲ್ಲೋ
(ಬಿದ್ದಾವು ಮನೆಗಳು, ಪು. ೩೫)

ಬಡದಲಿತನೊಬ್ಬನ ಸಂಸಾರದ ನೋವಿನ ಕಥೆಯ ಹಂದರವನ್ನುಳ್ಳ ಕವಿತೆ – 'ಚೋಮನ ಮಕ್ಕಳ ಹಾಡು'. ''ಈ ನಾಡಿನ ಹಸಿವು ಬಡತನ ದರಿದ್ರಗ್ರಸ್ತ ಸ್ಥಿತಿಗೆ ಮೂಲ ಕಾರಣ ಆರ್ಥಿಕ ಅಸಮಾನತೆ. ಭೂಮಿಯ ಒಡೆತನ ಮೇಲ್ವರ್ಗದವರಿಗೆ ಮಾತ್ರ ಇದ್ದು ಭೂಹೀನ ಜನತೆ ಕೂಲಿಕಾರರಾಗಿ ಜೀತದಾಳುಗಳಾಗಿ ಜೀವ ತೇಯುತ್ತಿದ್ದಾರೆ. ಆರ್ಥಿಕ ಸಮಾನತೆಯ ಮೊದಲ ಹೆಜ್ಜೆಯಾಗಿ ಆ ಜನತೆಯ ಅಂತರ್ಯದಿಂದ ಬರುವ ಕೂಗು ಹಾಗೂ ಸಹಜ ಆಕಾಂಕ್ಷೆಯೆಂದರೆ ಭೂಮಿಯ ಒಡೆತನಕ್ಕೆ ಸಂಬಂಧಿಸಿದ್ದು.''

ಉಕ್ಕಿನ ಮಯ್ಯಿ ಹೂವಿನ ಮನಸು
ಮೂಡುವ ಭೂಮಿಯ ಗೇಣಿಯ ಕನಸು
ಭೂತಾಯಿಯ ಮಲಮಕ್ಕಳು ನಾವು
ಚೋಮನ ಎಲುಬುಗಳು
(ಚೋಮನ ಮಕ್ಕಳ ಹಾಡು, ಪು. ೪೫)

ಕಾರಂತರ 'ಚೋಮನ ದುಡಿ'ಯ ಚೋಮನ ಭೂಮಿಗಾಗಿನ ಮೊರೆತ ಇಲ್ಲಿ ನೆನಪಾಗುತ್ತದೆ.

ಬಡವರ ಮನೆಗೆ ಬರಲಿಲ್ಲ
ಬೆಳಕಿನ ಕಿರಣ ತರಲಿಲ್ಲ
ಗೋಳಿನ ಕಡಲನ್ನು ಬತ್ತಿಸಲಿಲ್ಲ
ಸಮತೆಯ ಹೂವನು ಅರಳಿಸಲಿಲ್ಲ...
(ನಲವತ್ತೇಳರ ಸ್ವಾತಂತ್ರ್ಯ, ಪು. ೮೪)

'ನಲವತ್ತೇಳರ ಸ್ವಾತಂತ್ರ್ಯ' ಎಂಬುದು ಕವಿಯ ಆಕ್ಷೇಪ. ''ಯಾರಿಗೆ ಬಂತು, ಎಲ್ಲಿಗೆ ಬಂತು, ೪೭ರ ಸ್ವಾತಂತ್ರ್ಯ ?'' ಸ್ವತಂತ್ರ ಭಾರತ ಸಮಾಜದ ಪ್ರಗತಿಯನ್ನು ಬೆಚ್ಚಿಬೀಳಿಸುವಂತೆ ಕವನದ ಮೂಲಕ ಪ್ರಶ್ನಿಸಿದ ಡಾ॥ ಸಿದ್ಧಲಿಂಗಯ್ಯ. ಶತಶತಮಾನಗಳ ಕಾಲ ತುಳಿತಕ್ಕೊಳಗಾದ ದಲಿತರ ಸಂವೇದನೆಗಳಿಗೆ ಕಾವ್ಯರೂಪ ನೀಡುವ ಮೂಲಕ ಕನ್ನಡ ಸಾಹಿತ್ಯಕ್ಕೆ ಹೊಸ ಆಯಾಮ ನೀಡಿದ ಕವಿ. ಸಮಾಜದ ಸಿರಿವಂತ, ಬಡವ ವರ್ಗಗಳ ಅಂತರ ತಿಳಿಸುತ್ತಲೇ ಸ್ವಾತಂತ್ರ್ಯಾನಂತರದ ನಿರಾಶಾದಾಯಕ ಬೆಳವಣಿಗೆ ತಿಳಿಸುತ್ತದೆ, ಈ ಕವಿತೆ. 'ಯೋಜನೆಯೆಲ್ಲ ಯೋಜನ ದೂರ ಹಸಿವೆಯೆ ಬಡವನ ಬಾಳಾಯ್ತು' (ತಿಬರನ ಹಾಡು) ಈ ಸ್ವಾತಂತ್ರ್ಯದ ನಿಷ್ಫಲತೆಯನ್ನು ಹೇಳುತ್ತದೆ. 'ಬಡಜನರ ಗುಡಿಸಲಿಗೆ ಬೆಂಕಿಯನು ಇಟ್ಟವರು ರಾಜರಾದರು ದೆಹಲಿ ನಾಡಿನಲ್ಲಿ' (ಸಂಪಿಗೆಯ ಮರದಲ್ಲಿ) ವ್ಯವಸ್ಥೆಯ ಮೇಲೆ ತಮ್ಮ ಸಿಟ್ಟನ್ನು ಕಾರುತ್ತಾರೆ ಕವಿ ಸಿದ್ಧಲಿಂಗಯ್ಯ.

**ಎಚ್. ಕೆ. ವೆಂಕಟೇಶ**
ಸಂಶೋಧಕರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು -೬

# ಮಹಿಳಾ ಸಬಲೀಕರಣ

## ಪುನರ್‌ವ್ಯಾಖ್ಯೆಯ ಏಣಿಯಲ್ಲಿ ಒಂದು ಮೆಟ್ಟಿಲು

ಡಾ|| ರಾಜಲಕ್ಷ್ಮಿ ಎನ್. ಕೆ.

*ಸಮಸ್ಯೆ ಇದೆ ಎಂದಮಾತ್ರಕ್ಕೆ ಸಬಲೀಕರಣವನ್ನೇ ಸಾರಾಸಗಟಾಗಿ ತಿರಸ್ಕರಿಸುವಂತಿಲ್ಲ. ಮಹಿಳೆಗೆ ಸಬಲೀಕರಣವು ಮಾನವೀಯ ಮೌಲ್ಯಗಳ ನೆಲೆಯಲ್ಲಿ ಅತ್ಯಂತ ಅವಶ್ಯಕವಾಗಿದೆ. ದೇಶದ ಅವಿಭಾಜ್ಯ ಅಂಗವಾಗಿರುವ ಮಹಿಳೆಗೆ ದೇಶದ ಪ್ರಗತಿಯಲ್ಲಿ ಭಾಗಿಯಾಗುವುದು ಕೇವಲ ಹಕ್ಕು, ಕರ್ತವ್ಯಗಳ ಪ್ರಜ್ಞೆಯಷ್ಟೇ ಅಲ್ಲ, ಅದು ಅನಿವಾರ್ಯವೂ ಹೌದು. ಸಬಲೀಕರಣಕ್ಕೆ ಸಂಬಂಧಪಟ್ಟಂತೆ ನಾನು ಎರಡು ಮಾದರಿಗಳನ್ನು ಚರ್ಚಿಸಲು ಬಯಸುತ್ತೇನೆ. ಮೊದಲನೆಯ ಮಾದರಿಯು 'ಆಧುನಿಕ' ಜಗತ್ತಿಗೆ ಸೇರಿದ್ದು ಮತ್ತು ದಿನನಿತ್ಯ ನಮಗೆ ಮಾದರಿಯೆಂದು ಹೇಳಲ್ಪಡುತ್ತಿರುವಂತಹದು.*



'ಮಹಿಳೆ' 'ಮಹಿಳಾ ದಿನಾಚರಣೆ' ಎನ್ನುವುದು ರಾಜಕೀಯ ಹಿನ್ನೆಲೆ ಹಾಗೂ ಅರ್ಥಗಳನ್ನು ಹೊಂದಿದೆ. ಅಮೆರಿಕಾದಲ್ಲಿ ಮಹಿಳೆಯರು ತಮ್ಮ ಹಕ್ಕುಗಳಿಗಾಗಿ ಹೋರಾಟ ನಡೆಸುವಾಗ ಮಾರ್ಚ್ ೮ನೇ ತಾರೀಖನ್ನು ಸೂಚಿತವಾಗಿ ಆರಿಸಿಕೊಂಡರು. ಈ ಹೋರಾಟಕ್ಕೆ ಸಾರ್ವಜನಿಕ ಸಮ್ಮತಿ ದೊರೆಯುವುದಕ್ಕೆ, ಗೌರವ ದಕ್ಕುವುದಕ್ಕೆ ಇದು ಅಂತರರಾಷ್ಟ್ರೀಯ ಸುದ್ದಿ ಹಾಗೂ ಚಳುವಳಿಯಾಗುವ ಅವಶ್ಯಕತೆಯಿತ್ತು. ಇದರಲ್ಲಿ ಬಹುಶಃ ಪ್ರಪಂಚದಾದ್ಯಂತ ಮಹಿಳೆಯರ ಸಮಸ್ಯೆಗಳ ಬಗೆಗಿನ ಹೋರಾಟವನ್ನು ಗಮನಿಸುವ ಅಂಶವು ಇದ್ದಿರಬಹುದು. ವಿಶ್ವಸಂಸ್ಥೆಯು ಪ್ರಪಂಚದಾದ್ಯಂತ ನಡೆಯುತ್ತಿರುವ ಮಹಿಳೆಯರ ಸಮಸ್ಯೆ ಹಾಗೂ ಹೋರಾಟಗಳ ಬಗ್ಗೆ ವರದಿಯನ್ನು ಸಂಗ್ರಹಿಸಿ ೧೯೭೫ನೇ ವರ್ಷವನ್ನು ಮಹಿಳಾ ವರ್ಷವಾಗಿ ಆಚರಿಸಿತು. ತದನಂತರದಲ್ಲಿ ಆಡಳಿತಾತ್ಮಕವಾಗಿ ಮಾರ್ಚ್ ೮ ಅಂತರರಾಷ್ಟ್ರೀಯವಾಗಿ ಮಹಿಳಾ ದಿನವೆಂದು ಆಚರಿಸಲ್ಪಡುತ್ತಿದೆ. ತದನಂತರದಲ್ಲಿ ನಾವು ಕಂಡ ಹಾಗೆ ಬೇರೆ ಬೇರೆ ದೇಶಗಳಲ್ಲಿ ಮಹಿಳೆಯರ ಹಕ್ಕುಗಳನ್ನು ಮುಂದಿಟ್ಟುಕೊಂಡು ವಿವಿಧ ರೀತಿಯಲ್ಲಿ ಮಹಿಳಾ ದಿನವನ್ನು ಆಚರಿಸಲಾಗುತ್ತಿದೆ. ಇಲ್ಲಿ ಗಮನಿಸಬೇಕಾದ ಒಂದು ಸೂಕ್ಷ್ಮವಿದೆ. ಹಕ್ಕುಗಳಿಗಾಗಿ ನಡೆಸುವ ಹೋರಾಟ ಮತ್ತು ತನ್ಮೂಲಕ ಪಡೆಯುವ ಜಯವು ಅಧಿಕಾರದ ಕಥನದೊಳಗೆ ಬರುತ್ತದೆ. ನಮ್ಮ ಅಮ್ಮಂದಿರು, ಅಜ್ಜಿಯರು ತಮ್ಮದೇ ರೀತಿಯಲ್ಲಿ ತಮ್ಮ ಇಷ್ಟಾನಿಷ್ಟಗಳ ಪರಿಧಿಯೊಳಗೆ ಕರ್ತವ್ಯ ನಿಭಾಯಿಸುವಾಗ, ಆ ನಿಭಾವಣೆಯಿಂದಲೇ ಬಂದ ಪ್ರಭುತ್ವದಿಂದ ಹಕ್ಕುಗಳ ಚಲಾವಣೆ ಮಾಡುತ್ತಿದ್ದರು. ಆದರೆ ಇದು ವೈಯಕ್ತಿಕ ಕೌಟುಂಬಿಕ ಬದುಕಿನೊಳಗಿನ ಅಧಿಕಾರ. ಹಾಗಾಗಿ ಈ ಹೋರಾಟದ ಬದುಕು ಅಂತರರಾಷ್ಟ್ರೀಯ ಮನ್ನಣೆ ಪಡೆವ 'ಹಕ್ಕು'ಗಳ ಹೋರಾಟವಾಗುವುದಿಲ್ಲ. ನಾಗರಿಕ ಸಮಾಜದಲ್ಲಿ ಹಕ್ಕುಗಳನ್ನು ಕೇಳುವುದು, ಹೋರಾಟ ನಡೆಸುವುದು, ಅದಕ್ಕೆ ಸಂಬಂಧಿಸಿದ 'ಮಹಿಳಾ ದಿನ' ಎನ್ನುವುದು ರಾಜಕೀಯ ಪರಿಧಿಯೊಳಗೆ ಬರುತ್ತದೆ ಮತ್ತು ಈ ದಿಸೆಯಲ್ಲಿ ರಾಜಕೀಯ ಅರ್ಥವನ್ನು ಹೊಂದುತ್ತದೆ.

'ಮಹಿಳೆ' ಅಥವಾ 'ಪುರುಷ' ಎನ್ನುವ ಶಬ್ದಗಳು ದಿನನಿತ್ಯದ ನಮ್ಮ ಆಡುಮಾತಿನಲ್ಲಿ ಬರುವ 'ಹೆಣ್ಣು' 'ಗಂಡು' ಎನ್ನುವ ಪದಗಳಿಗೆ ಬರುವ ಪರ್ಯಾಯ ಪದಗಳೆ? ಅಂತೆಯೇ 'ಹೆಂಗಸು' 'ಗಂಡಸು' ಸಮಾನಾರ್ಥ ಪದಗಳೆ? 'ಮಹಿಳೆ' ಎನ್ನುವ ಪದ ಪ್ರಯೋಗವು ನಮ್ಮ ಕೌಟುಂಬಿಕ ಚೌಕಟ್ಟಿನ ಮಾತುಕತೆಗಳಲ್ಲಿ, ನೆರೆಹೊರೆಯವರೊಳಗಿನ ಅನುಭವ ಕುಶಲೋಪರಿಯಲ್ಲಿ ಸಾಮಾನ್ಯವಾಗಿ ಕಾಣಬರುವ ಶಬ್ದವಲ್ಲ. ಈ ಶಬ್ದವು ನಾಗರಿಕ ಸಮಾಜಕ್ಕೆ ಸೇರಿದ ಸುಸಂಸ್ಕೃತ ಭಾಷೆಯ ಪ್ರಯೋಗವಾಗಿದೆ. ಇದು ನಮ್ಮ ದೈನಂದಿನ ಜೀವನದ ವೈಯಕ್ತಿಕ ಬದುಕಿನಲ್ಲಿ ಹಾಸುಹೊಕ್ಕಾದ ಪದವಲ್ಲ. ನಮ್ಮ ನಾಗರಿಕ ಸಮಾಜದಲ್ಲಿ ಬರುವ ಸಾಮುದಾಯಿಕ ಜೀವನದಲ್ಲಿ ಬಳಕೆಯಲ್ಲಿರುವ ಶಬ್ದವಾಗಿದೆ ಅಷ್ಟೆ. ನಾಗರಿಕ ಸಮಾಜದ ಸದಸ್ಯರಾಗಿ ನಮ್ಮ ಬದುಕು ಸಾಮಾಜಿಕ ಬದ್ಧತೆಯನ್ನು ಹೊಂದಿರುತ್ತದೆ. ಸಮಾಜದ ಶಿಸ್ತಿಗೆ ಒಳಪಟ್ಟಿರುತ್ತದೆ. ಇಲ್ಲಿ ಪೂರ್ವ ನಿರ್ಧರಿತವಾದ ಅರ್ಥವನ್ನು ಹೊಂದಿದ ಮೌಲ್ಯಗಳೊಡನೆ ಜೀವನ ನಡೆಯುತ್ತದೆ. ಈ ಸಮಾಜದ ಚೌಕಟ್ಟಿನೊಳಗೆ ಪರಸ್ಪರ ಸಂಬಂಧವೆನ್ನುವುದು ಅಧಿಕಾರದ ಬುನಾದಿಯ ಮೇಲೆ ಕಟ್ಟಲ್ಪಟ್ಟಿರುತ್ತದೆ. ಪ್ರತಿಯೊಬ್ಬರೂ ಇಲ್ಲಿ ಅಧಿಕಾರ ಚಲಾಯಿಸುತ್ತಾರೆ ಹಾಗೂ ಅಧಿಕಾರದ ಚಲಾವಣೆಗೆ ಒಳಪಡುತ್ತಾರೆ. ಮಿಶೆಲ್ ಫುಕೊ ಹೇಳುವ 'ಪವರ್ ರಿಲೇಶನ್' ಎನ್ನುವ ಅರ್ಥದಲ್ಲಿ ಈ ಮಾತುಗಳನ್ನು ಹೇಳುತ್ತಿದ್ದೇನೆ. ಇಂಥ ನಾಗರಿಕ ಸಮಾಜದ, ಪೂರ್ವ ನಿರ್ಧರಿತ ಬದುಕಿನಲ್ಲಿ ರೂಪುಗೊಂಡಂತಹ ಭಾಷೆಯಲ್ಲಿ ಪಡಿಮೂಡಿದ ಶಬ್ದ 'ಮಹಿಳೆ'. ನಾಗರಿಕ ಸಮಾಜವು ತನ್ನದೇ ಆದ ಸಂಸ್ಕೃತಿಯನ್ನು ಹೊಂದಿದೆ. ಆ ಸಂಸ್ಕೃತಿಗೆ ರೂಪಕವಾಗಿ ಭಾಷೆಯು ರೂಪುಗೊಳ್ಳುತ್ತದೆ. ಈ ಹಿನ್ನೆಲೆಯಲ್ಲಿ 'ಮಹಿಳೆ' ಎನ್ನುವುದು ರಾಜಕೀಯ ಒಳಾರ್ಥವನ್ನು ಹೊಂದಿರುವಂತಹ ಶಬ್ದ ಎಂದು ಗ್ರಹೀತವಾಗುತ್ತದೆ.

ಈ ಗ್ರಹಿಕೆಯ ಹಿನ್ನೆಲೆಯಲ್ಲಿ ನಾವು ಮಹಿಳೆಯ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಸಬಲೀಕರಣವನ್ನು ಅರ್ಥೈಸಿಕೊಳ್ಳಬೇಕಾಗುತ್ತದೆ. 'ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ' ವಿಷಯಗಳು ನಾಗರಿಕ ಸಮಾಜಕ್ಕೆ ಸಂಬಂಧಪಟ್ಟ ವಿಷಯಗಳಾಗಿವೆ. ದೇಶ, ರಾಷ್ಟ್ರೀಯತೆ, ಪ್ರಗತಿ ಇತ್ಯಾದಿ ಆಧುನಿಕತೆ ಸಂಬಂಧಿ ವಿಷಯಗಳೊಡನೆ ನೇರ ಸಂಬಂಧವಿರುವ ಹಾಗೂ ತಳಕುಹಾಕಿಕೊಂಡಿರುವ ವಿಷಯಗಳೂ ಆಗಿವೆ. ಇದರೊಂದಿಗೇನೇ ಪುರುಷ ಕೇಂದ್ರಿತ ವ್ಯವಸ್ಥೆಯಲ್ಲಿ ಪುರುಷ ಈಗಾಗಲೇ ಸಬಲನಾಗಿರುವ ಹಾಗೂ ತನ್ನನ್ನು ಗಟ್ಟಿಯಾಗಿ ಪ್ರತಿಷ್ಠಾಪಿಸಿಕೊಂಡಿರುವ ನೆಲೆಗಳು. ಈ ಕಾರಣಕ್ಕಾಗಿಯೇ ಮಹಿಳೆಯ ಸಬಲೀಕರಣವು ಈ ನೆಲೆಗಳಲ್ಲಿ ಸಾಧ್ಯ ಎಂದು ನಂಬಲಾಗುತ್ತದೆ. ಈ ದಿಸೆಯಲ್ಲಿ ಸರಕಾರವು ಸಾಕಷ್ಟು ಯೋಜನೆಗಳನ್ನು, ಕಾನೂನುಗಳನ್ನು ಜಾರಿಗೆ ತಂದಿದೆ. ಇದರೊಂದಿಗೆ ಸಾಕಷ್ಟು ಸರಕಾರೇತರ ಸಂಸ್ಥೆಗಳು

ಅವಿರತವಾಗಿ ಮಹಿಳೆಯರ ಸಬಲೀಕರಣಕ್ಕಾಗಿ ದುಡಿಯುತ್ತಲೇ ಬಂದಿವೆ. ನಾವು ನೋಡುವ ಹಾಗೆ ಅಸಂಖ್ಯಾತ ಮಹಿಳೆಯರು ಇದರಿಂದ ಪ್ರಯೋಜನ ಪಡೆದಿದ್ದಾರೆ. 'ಸಬಲೀಕರಣ' ಎನ್ನುವ ಶಬ್ದವನ್ನು ಅರ್ಥಮಾಡಿಕೊಳ್ಳುವಲ್ಲಿ ನನಗೆ ಸಮಸ್ಯೆಯಿದೆ ಮತ್ತು ಅದು ಸಮಸ್ಯಾತ್ಮಕವಾಗಿರುವುದಕ್ಕೆ ಕಾರಣವೂ ಇದೆ. ಸಬಲೀಕರಣದ ಹಿಂದಿರುವ ಮೌಲ್ಯವೇನು ಮತ್ತು ಆ ಮೌಲ್ಯದ ಆಯಾಮವೇನು ಎನ್ನುವಲ್ಲಿ ಸಬಲೀಕರಣವು ಸಮಸ್ಯೆಯನ್ನು ಹುಟ್ಟುಹಾಕುತ್ತದೆ.

ಸಮಸ್ಯೆ ಇದೆ ಎಂದಮಾತ್ರಕ್ಕೆ ಸಬಲೀಕರಣವನ್ನೇ ಸಾರಾಸಗಟಾಗಿ ತಿರಸ್ಕರಿಸುವಂತಿಲ್ಲ. ಮಹಿಳೆಗೆ ಸಬಲೀಕರಣವು ಮಾನವೀಯ ಮೌಲ್ಯಗಳ ನೆಲೆಯಲ್ಲಿ ಅತ್ಯಂತ ಅವಶ್ಯಕವಾಗಿದೆ. ದೇಶದ ಅವಿಭಾಜ್ಯ ಅಂಗವಾಗಿರುವ ಮಹಿಳೆಗೆ ದೇಶದ ಪ್ರಗತಿಯಲ್ಲಿ ಭಾಗಿಯಾಗುವುದು ಕೇವಲ ಹಕ್ಕು, ಕರ್ತವ್ಯಗಳ ಪ್ರಜ್ಞೆಯಷ್ಟೇ ಅಲ್ಲ, ಅದು ಅನಿವಾರ್ಯವೂ ಕೂಡ. ಸಬಲೀಕರಣಕ್ಕೆ ಸಂಬಂಧಪಟ್ಟಂತೆ ನಾನು ಎರಡು ಮಾದರಿಗಳನ್ನು ಚರ್ಚಿಸಲು ಬಯಸುತ್ತೇನೆ. ಮೊದಲನೆಯ ಮಾದರಿಯು 'ಆಧುನಿಕ' ಜಗತ್ತಿಗೆ ಸೇರಿದ್ದು ಮತ್ತು ದಿನನಿತ್ಯ ನಮಗೆ ಮಾದರಿಯೆಂದು ಹೇಳಲ್ಪಡುತ್ತಿರುವಂತಹದು. ಇಲ್ಲಿ ಮಹಿಳೆಗೆ ಕೆಲವು ನಿರ್ದಿಷ್ಟ ಗುರಿ ಹಾಗೂ ದಾರಿಗಳನ್ನು ತೋರಿಸಲಾಗುತ್ತದೆ. ಕಷ್ಟಗಳು, ಸಮಸ್ಯೆಗಳು ಎದುರಾದಾಗ ಹೇಗೆ ಎದುರಿಸಬೇಕು, ಏನು ಮಾಡಬೇಕು ಎಂದು ನಿರ್ದಿಷ್ಟವಾಗಿ ಹೇಳಲಾಗುತ್ತದೆ. ಇದು ಹೇಗೆ ಸಾಧ್ಯವಾಗುತ್ತದೆ ಎಂದರೆ, ಈ ಮಾದರಿಯು ಈಗಾಗಲೇ ಪುರುಷ ಕೇಂದ್ರಿತ ವ್ಯವಸ್ಥೆಯಲ್ಲಿ, ಪುರುಷವರ್ಗದಲ್ಲಿ ಚಾಲ್ತಿಯಲ್ಲಿರುವ ಮಾದರಿಯಾಗಿದೆ. ಇಲ್ಲಿ ಮಹಿಳೆ ಈಗಾಗಲೇ ಪುರುಷ ಸಾಧಿತವಾಗಿರುವ ಅಭಿವೃದ್ಧಿಯ ಹೆಜ್ಜೆಯ ಹಾದಿಯಲ್ಲಿ ನಡೆಯುತ್ತಾಳೆ. ಈ ದಿಸೆಯಲ್ಲಿ, ಯಾವೆಲ್ಲ ರಂಗಗಳನ್ನು ಪುರುಷ ವರ್ಗಕ್ಕೇ ಮೀಸಲು ಎಂದು ತಿಳಿಯಲಾಗಿತ್ತೋ ಅವೆಲ್ಲವಕ್ಕೆ ಮಹಿಳೆ ಪ್ರವೇಶಿಸಲು ಅವಕಾಶ ಕಲ್ಪಿಸ ಲಾಗುತ್ತದೆ. ಕಂಪೆನಿಗಳನ್ನು ನಡೆಸುವುದು, ಆಡಳಿತಾತ್ಮಕ ಹುದ್ದೆಗಳನ್ನು ಅಲಂಕರಿಸುವುದು, ಮಿಲಿಟರಿ ಹುದ್ದೆಗಳಲ್ಲಿ ಪಾಲುದಾರರಾಗುವುದು, ಇತ್ಯಾದಿ ಇತ್ಯಾದಿ. ಈ ಅವಕಾಶಗಳೇ ಆಕೆಯನ್ನು ಆರ್ಥಿಕವಾಗಿ ಸಾಮಾಜಿಕವಾಗಿ ಹಾಗೂ ರಾಜಕೀಯವಾಗಿ ಸಬಲೀಕರಣಗೊಳಿಸುತ್ತದೆ, ಪುರುಷನೊಡನೆ ಸಮಾನವಾದ ಸ್ಥಾನವನ್ನು ಕಲ್ಪಿಸುತ್ತದೆ. ಈ ಮಾದರಿಯನ್ನು ಆರಿಸಿಕೊಳ್ಳುವ ಮಹಿಳೆ, ಈಗಾಗಲೇ ದೇಶದ ಪ್ರಗತಿಯ ಮಾದರಿಯಾಗಿ ಭದ್ರವಾಗಿ ತಳವೂರಿರುವ ವ್ಯವಸ್ಥೆಯೊಳಗೆ ಸೇರ್ಪಡೆಗೊಳ್ಳುತ್ತಾಳೆ ಮತ್ತು ಆ ವ್ಯವಸ್ಥೆಯು ಯಾವುದನ್ನು ದೇಶದ ಪ್ರಗತಿ ಎಂದು ಪರಿಗಣಿಸುತ್ತದೋ ಆ ಪ್ರಗತಿಯ ಪಾಲುದಾರಳೂ ಆಗುತ್ತಾಳೆ.

ಎರಡನೆಯ ಮಾದರಿಯ ಸಬಲೀಕರಣವನ್ನು ನಾನು 'ಅಪ್ಪಿಕೊ' ಚಳುವಳಿಯ ಮೂಲಕ ಹೇಳುತ್ತೇನೆ. ಈ ಚಳುವಳಿಯನ್ನು ಮಹಾತ್ಮಾ ಗಾಂಧೀಜಿಯವರ ಆಪ್ತ ಒಡನಾಡಿಯಾಗಿದ್ದ ಮೀರಾ ಬೆನ್ ಹುಟ್ಟು ಹಾಕಿದರು. ತದನಂತರದಲ್ಲಿ ಸುಂದರ್ ಲಾಲ್ ಬಹುಗುಣ ಅವರು ರೂಪಿಸಿದ ಕೈ ಜೋಡಿಸುವ ಚಳುವಳಿಯೊಂದಿಗೆ ಇದು ಒಂದು ಪ್ರಬಲ ಚಳುವಳಿಯಾಗಿ ಮಾರ್ಪಾಡಾಯಿತು. ಪ್ರಕೃತಿಯನ್ನು ಉಳಿಸಿಕೊಳ್ಳುವ ದಿಸೆಯಲ್ಲಿ ಸಾವಿರಾರು ಮಹಿಳೆಯರು ಈ ಚಳುವಳಿಯನ್ನು ಬಲಪಡಿಸಿದರು. ಈ ಚಳುವಳಿಯಲ್ಲಿ ಪ್ರಕೃತಿಯ ಸಮತೋಲನವನ್ನು ಕಾಯ್ದುಕೊಳ್ಳುವ ಪ್ರಕ್ರಿಯೆ ಪ್ರಮುಖ ಅಂಶವಾಗಿತ್ತು. ಇಲ್ಲಿ ಮರಗಳನ್ನು ಪ್ರಕೃತಿಯನ್ನು ಉಳಿಸಿಕೊಳ್ಳಲು ಸಾಮಾನ್ಯ, ಅತಿಸಾಮಾನ್ಯ, ಅನಕ್ಷರಸ್ಥ ಹೆಂಗಸರು ನಾಗರಿಕ ಸಮಾಜವನ್ನು ಪ್ರವೇಶಿಸುತ್ತಾರೆ, ಸಾಮುದಾಯಿಕವಾಗಿ ಹೋರಾಟ ನಡೆಸುತ್ತಾರೆ. ಅವರಿಗರಿವಿಲ್ಲದಂತೆಯೇ, ಯಾವುದೇ ಘೋಷಣೆಗಳಿಲ್ಲದೆ, ಯಾವುದೇ ಪೂರ್ವ ನಿಯೋಜಿತ ಯೋಜನೆಗಳಿಲ್ಲದೆ ಅವರು ಸಾಮಾಜಿಕವಾಗಿ ರಾಜಕೀಯವಾಗಿ ಸಬಲೀಕೃತರಾಗುತ್ತಾರೆ. ಪ್ರಕೃತಿಯನ್ನು ಉಳಿಸಿಕೊಳ್ಳುವ ಮೂಲಕ ಆರ್ಥಿಕ ನಷ್ಟವನ್ನು ತಡೆ ಹಿಡಿಯುತ್ತಾರೆ. ಅವರ ದಿನನಿತ್ಯದ ಜೀವನಕ್ಕೆ ಅವಶ್ಯಕವಿದ್ದ ಆರ್ಥಿಕ ಸ್ಥಿತಿ ಏನಿತ್ತೋ ಅದನ್ನು ಅವರು ಮುಂದಿನ ಪೀಳಿಗೆಯವರಿಗೆ ಬಿಟ್ಟು ನಡೆಯುತ್ತಾರೆ, ಹೊಸ ರೀತಿಯ ಸಬಲೀಕರಣಕ್ಕೆ ನಾಂದಿ ಹಾಡುತ್ತಾರೆ. ಮಾನವೀಯ ಮೌಲ್ಯಗಳ ನೆಲೆಯಲ್ಲಿ, ನಾವು ನಮ್ಮ ನಂತರದ ಪೀಳಿಗೆಯವರಿಗೆ ಈ ಭೂಮಿಯನ್ನು ಹೇಗೆ ಬಿಟ್ಟುಹೋಗುತ್ತೇವೆ ಎನ್ನುವ ವಿಶಾಲ ಅರ್ಥದಲ್ಲಿ ನೋಡುವಾಗ ಈ ಚಳುವಳಿಯ ಮೂಲಕ ಮೂಡಿಬಂದ ಮಹಿಳೆಯ ಸಬಲೀಕರಣವು ವಿಶೇಷ ಹೊಳಪು ಹಾಗೂ ಅರ್ಥವನ್ನು ಪಡೆದುಕೊಳ್ಳುತ್ತದೆ.

> **ನೂತನ ಕ್ಷೇತ್ರಗಳು**
>
> **ಹೊಸ ಹುತ್ತಗಳು**
> **ಹುಟ್ಟಿಕೊಂಡಿವೆ**
> **ಎಂಥ ಹಾವುಗಳು**
> **ಬಂದು ಸೇರುವವೋ**
> **ಭಯವಾಗುತ್ತಿದೆ !**
>
> **ಡಿ. ವಿ. ಬಡಿಗೇರ**
> ತೆಗ್ಗಿನ ಪೇಟೆ ಓಣಿ
> ಗದಗ - ಬೆಟಗೇರಿ - ೫೮೨ ೧೦೨

ಪುರುಷಪ್ರಧಾನ ವ್ಯವಸ್ಥೆಯಲ್ಲಿ ರೂಪುಗೊಂಡ ಮಹಿಳೆಗೆ ಕೆಲವು ಪೂರ್ವ ನಿರ್ಧಾರಿತ ಆಶಯಗಳನ್ನು, ಮೌಲ್ಯಗಳನ್ನು ನೀಡಲಾಗಿದೆ. ಇದನ್ನು ನಾವು 'ನೀಡಿತ ಸಂಸ್ಕೃತಿ' ಎಂದು ಹೇಳಬಹುದು. ಮಹಿಳೆಯರು ಇದನ್ನು ಅನೂಚಾನವಾಗಿ ಸ್ವೀಕರಿಸುವುದರಿಂದ ಇದು 'ಸ್ವೀಕೃತ ಸಂಸ್ಕೃತಿ'ಯೂ ಹೌದು. ಮೇಲ್ನೋಟಕ್ಕೆ ಈ ಸಂಸ್ಕೃತಿ ಯಲ್ಲಿ ಎಲ್ಲವೂ ಸರಿಯಾಗಿದೆ ಎಂದು ಅನಿಸುತ್ತದೆ. ಇದು ಅತಿ ಆಕರ್ಷಕವಾಗಿಯೂ, ಆಪ್ಯಾಯಮಾನವಾಗಿಯೂ ತೋರುತ್ತದೆ. ಏಕೆಂದರೆ ಇಲ್ಲಿ ಗುಮಾನಿಗಳಿರುವುದಿಲ್ಲ, ಪ್ರತಿಯೊಂದು ಪ್ರಶ್ನೆಗೂ, ಸಮಸ್ಯೆಗೂ ಉತ್ತರವಿರುತ್ತದೆ, ಪರಿಹಾರವಿರುತ್ತದೆ, ತಾತ್ವಿಕ ಚಿಂತನೆಯೂ ಇರುತ್ತದೆ. ಹಾಗಾಗಿ ಈ ವ್ಯವಸ್ಥೆಯು ಸುರಕ್ಷಿತ ಭಾವನೆಯನ್ನು ನೀಡುತ್ತದೆ. ಆದರೆ ಅದರೊಂದಿಗೆ, ಈ ವ್ಯವಸ್ಥೆಯೊಳಗೆ ಹುಟ್ಟಿಕೊಳ್ಳುವ ಗೊಂದಲ ಹಾಗೂ ತನ್ಮೂಲಕ ಹುಟ್ಟಿಕೊಳ್ಳುವ ಸಂಶಯವನ್ನು ಮಟ್ಟಹಾಕುವ ಶಕ್ತಿಯನ್ನು ಹೊಂದಿರುತ್ತದೆ. ಸಮಾಜದ ಶಿಸ್ತನ್ನು ಉಳಿಸಿಕೊಳ್ಳುವಲ್ಲಿ ಈ ವ್ಯವಸ್ಥೆಯು ಅತಿ ಅವಶ್ಯಕವಾಗಿರುತ್ತದೆ. ಕೆಲವೊಮ್ಮೆ ಈ ವ್ಯವಸ್ಥೆಯೊಳಗಿನ ಜೀವನವು ಉಸಿರುಗಟ್ಟಿಸುತ್ತದೆ. ಆದರೆ ನಮ್ಮೊಳಗೆ ಹಾಸುಹೊಕ್ಕಾಗಿರುವ ಪೂರ್ವನೀಡಿತ ಮೌಲ್ಯಗಳು ಹಾಗೂ ವ್ಯಾಖ್ಯಾನಗಳು ಎಷ್ಟು ಪ್ರಬಲವಾಗಿರುತ್ತವೆಯೆಂದರೆ, ಅವು ಈ ವ್ಯವಸ್ಥೆಯೊಳಗೆ ಎಲ್ಲವೂ ಸರಿಯಾಗಿಯೇ ಇದೆ ಎಂಬ ಭ್ರಮೆಯನ್ನು ಹುಟ್ಟಿಸುತ್ತವೆ. ಉಸಿರುಗಟ್ಟುವಿಕೆಯನ್ನು ಅನುಭವಿಸು ವಾಗಲೂ 'ನನ್ನದೇ ತಪ್ಪು ವ್ಯವಸ್ಥೆಯೊಳಗೆ ಎಲ್ಲವೂ ಸರಿಯಾಗಿಯೇ ಇದೆ' ಎಂಬ ಪ್ರಬಲ ಭಾವನೆಯೂ ಮೂಡುತ್ತದೆ. ಇಲ್ಲಿ ನಾನು ವ್ಯವಸ್ಥೆಗೆ ವಿರುದ್ಧ ನಡೆಯಬೇಕೆನ್ನುವ ಆಲೋಚನೆಗೆ ಪೀಠಿಕೆ ಹಾಕುತ್ತಿಲ್ಲ. ವ್ಯವಸ್ಥೆಯೊಳಗಿದ್ದುಕೊಂಡು ಅದರ ಪ್ರತಿಯೊಂದು ಮೌಲ್ಯವನ್ನು 'ಪುನರ್‌ವ್ಯಾಖ್ಯಾನಕ್ಕೆ' ಒಳಪಡಿಸುವ ಅವಶ್ಯಕತೆಯಿದೆ ಎಂದು ಪ್ರತಿಪಾದಿಸುವ ಪ್ರಯತ್ನ ಮಾಡುತ್ತಿದ್ದೇನೆ. ಇಲ್ಲಿ 'ಮಹಿಳೆ', 'ಮಹಿಳೆಯ ಸಬಲೀಕರಣ'ವೆನ್ನುವುದು ಪುನರ್‌ವ್ಯಾಖ್ಯಾನಕ್ಕೆ ಒಳಪಡ ಬೇಕಾಗುತ್ತದೆ, 'ಮೌಲ್ಯ'ಗಳ ಪುನರ್‌ವ್ಯಾಖ್ಯಾನವಾಗ ಬೇಕಾಗುತ್ತದೆ. ಮಹಿಳೆಯನ್ನು ಪುರುಷನಿಗೆ ಸಮಾನಳಾದವಳು ಎಂದು ನೋಡುವುದು ಅಥವಾ ವಿರೋಧ ಪದವಾಗಿ ನೋಡುವುದರಿಂದ 'ಮಹಿಳೆ' ನಮಗೆ ಅರ್ಥಪೂರ್ಣಳಾಗಿ ಕಾಣುವುದಿಲ್ಲ. ಮಹಿಳೆಯನ್ನು ಮಹಿಳೆಯ ನೆಲೆಯಲ್ಲಿಯೇ ಅರ್ಥೈಸುವ ಪ್ರಯತ್ನವಾಗಬೇಕು.

ಈ ದಿಸೆಯಲ್ಲಿ ನಾನು ೧೨ನೇ ಶತಮಾನದ ವಚನಕಾರರಲ್ಲಿ ಒಬ್ಬಳಾದ ಅಕ್ಕಮಹಾದೇವಿಯನ್ನು ಸಬಲ ಮಹಿಳೆಯೆಂದು ಗುರುತಿಸುತ್ತೇನೆ. ಆಕೆ ದೇಹಕ್ಕೆ, ನಗ್ನತೆಗೆ ಹೊಸ ಆಯಾಮವನ್ನು ನೀಡುತ್ತಾಳೆ. ನಾಗರಿಕ ಸಮಾಜದ ವ್ಯವಸ್ಥೆಯೊಳಗಿನ ಪ್ರಭುತ್ವ ಹಾಗೂ ಅಧಿಕಾರದ ಪರಿಧಿಯೊಳಗಿನ ಅಧಿಕಾರದಿಂದ ತನ್ನನ್ನು ಮುಕ್ತಗೊಳಿಸಿಕೊಳ್ಳುವ ಮೂಲಕ ಮಹಿಳೆಗೆ ತನ್ನ ಮೇಲೆ ಹೇಗೆ ತಾನು ಪ್ರಭುತ್ವವನ್ನು ಹೊಸ ಅರ್ಥದಲ್ಲಿ ಸಾಧಿಸ ಬಹುದು ಎಂದು ವಿದಿತಪಡಿಸುತ್ತಾಳೆ. ಆಕೆಯ ನಗ್ನತೆ ಆಕೆಯ ದೇಹದ ಮೇಲಿನ ಸಂಪೂರ್ಣ ಪ್ರಭುತ್ವವನ್ನು ತೋರಿಸುತ್ತದೆ. ಪುರುಷ ಕೇಂದ್ರಿತ ವ್ಯವಸ್ಥೆಯ ಮೌಲ್ಯ ಗಳಲ್ಲಿ ಕಾಣುವ ನಗ್ನತೆಯ ಹೀನಾಯವನ್ನು ತಾನು ನಗ್ನ ಳಾಗುವ ಮೂಲಕ ಹೊಸ ಅರ್ಥ ಹಾಗೂ ಪ್ರಭುತ್ವವನ್ನು ಸಾಧಿಸುತ್ತಾಳೆ. ಈ ರೀತಿಯ ಅರ್ಥಗಳು ಹುಟ್ಟಿಕೊಂಡಾಗ ಬಹುಶಃ ಮಾರ್ಚ್ ೮ ಮಹಿಳಾ ದಿನಾಚರಣೆ, ಸಬಲೀಕರಣ ಪದಗಳು ವಿಶಾಲ ಅರ್ಥವನ್ನು ಪಡೆಯುತ್ತವೆ. ಮಹಿಳೆ ನಿಂತ ನೀರಾಗದಿರಲಿ; ಸತತವಾಗಿ ಹರಿಯುವ, ರೂಪಾಂತರಗೊಳ್ಳುವ ಹರಿವ ನೀರಾಗಲಿ.

ಡಾ॥ ರಾಜಲಕ್ಷ್ಮಿ ಎನ್. ಕೆ.
ಮಂಗಳೂರು

# ಕರ್ನಾಟಕ ಏಕೀಕರಣದಲ್ಲಿ ರೋಣ ತಾಲ್ಲೂಕಿನ ಕೊಡುಗೆ

ಸುಮಾರು ಎರಡು ಸಾವಿರ ವರ್ಷಗಳ ಇತಿಹಾಸ ಹೊಂದಿದ ಕರ್ನಾಟಕ ಪ್ರದೇಶ ಪ್ರಾಕೃತಿಕವಾಗಿಯೂ, ಸಾಂಸ್ಕೃತಿಕವಾಗಿಯೂ ಮತ್ತು ರಾಜಕೀಯವಾಗಿಯೂ ಅಖಂಡವಾದದ್ದು. ಇತಿಹಾಸದ ಆದಿಕಾಲದಿಂದ ಈ ಕರ್ನಾಟಕವು ಅನೇಕ ರಾಜವಂಶಗಳ ಆಳ್ವಿಕೆಗೆ ಒಳಪಟ್ಟಿದ್ದರೂ ನಾಡಿನ ಸಾಂಸ್ಕೃತಿಕ ಐಕ್ಯತೆಯ ಭಾವನೆ ಸ್ಫುಟವಾಗಿತ್ತು. ಇಲ್ಲಿ ಅನೇಕ ರಾಜ್ಯಗಳು ಸ್ಥಾಪನೆಗೊಂಡಿದ್ದರೂ ಸ್ವಲ್ಪಮಟ್ಟಿಗೆ ಭಿನ್ನತೆ ಕಾಣಿಸಿಕೊಂಡು ಮುಂದೆ ಟಿಪ್ಪು ಸುಲ್ತಾನನ ಮರಣದ (೧೭೯೯) ನಂತರ ಬ್ರಿಟಿಷರ ಆಡಳಿತ ಸ್ಥಿರಗೊಂಡಾಗ ಕರ್ನಾಟಕವು ಬಹಳಷ್ಟು ಛಿದ್ರವಾಗಿ ೨೨ ಭಾಗಗಳಲ್ಲಿ ಅದು ಹಂಚಿ ಹೋದರೂ ಮುಂದೆ ೧೯೪೭ರಲ್ಲಿ ಕಾಸರಗೋಡಿನ ಏಕೀಕರಣ ಸಮ್ಮೇಳನದ ಸಂದರ್ಭದಲ್ಲಿ ೫ ಘಟಕಗಳಾಗಿ ಉಳಿಯಿತು. ಸ್ವಾತಂತ್ರ್ಯ ಸಿಕ್ಕರೂ ಭಾಷಾವಾರು ಪ್ರಾಂತಗಳ ರಚನೆಗೆ ೧೯೫೬ರವರೆಗೆ ಕಾಯಬೇಕಾಯಿತು. ಈ ಭಾಷಾವಾರು ಪ್ರಾಂತದ ಏಕೀಕರಣವಾಗಿಸುವಲ್ಲಿ ಅನೇಕರ ಛಲ-ಬಲಗಳು ಸವೆದವು. ಇಡೀ ಅಖಂಡ ಕರ್ನಾಟಕದಲ್ಲಿ ಕನ್ನಡ ಮಾತನಾಡುವ ಜನತೆಯನ್ನು ಒಂದೆಡೆಗೆ ತರಲು ಈ ನವಕರ್ನಾಟಕದ ನಿರ್ಮಾಪಕರಲ್ಲಿ ಗದಗ ಜಿಲ್ಲೆಯ ರೋಣ ತಾಲ್ಲೂಕಿನ ಕೊಡುಗೆ ಹಿರಿದಾಗಿದೆ. ಏಕೆಂದರೆ, ಕರ್ನಾಟಕದ ಏಕೀಕರಣದ ಮುಂಚೂಣಿಯಲ್ಲಿ ನಿಂತು ಭಾಷ್ಯ ಬರೆದವರೇ ರೋಣ ತಾಲ್ಲೂಕಿನವರಾಗಿದ್ದಾರೆ.

ಕರ್ನಾಟಕದ ಏಕೀಕರಣದ ಕಿಡಿ ಹೊತ್ತಿದ್ದು, ಅದು ಅಸ್ತಿತ್ವಕ್ಕೆ ಬಂದದ್ದು ಧಾರವಾಡದ ನೆಲದಿಂದ. ಅದರಲ್ಲಿ ಮೊದಲು ಧ್ವನಿ ತೆಗೆದು ಪಾಂಚಜನ್ಯ ಮೊಳಗಿಸಿದ ಕನ್ನಡ ಕುಲಪುರೋಹಿತರಾದ, ಕರ್ನಾಟಕದ ಗತ ವೈಭವದ ಕನಸು ಕಂಡ ಆಲೂರ ವೆಂಕಟರಾಯರು ರೋಣ ತಾಲ್ಲೂಕಿನ ಹೊಳೆ ಆಲೂರವರು. ಇವರು ಮೂಲತಃ ಬಳ್ಳಾರಿ ಜಿಲ್ಲೆಯವರಾದರೂ ಈ ಮನೆತನದ ಹಿರಿಯರೊಬ್ಬರು ಆಂಗ್ಲ ಅಧಿಕಾರಿಗೆ ತುಂಬ ಬೇಕಾದವರಾಗಿ ಅವರ ಮೂಲಕ ಧಾರವಾಡಕ್ಕೆ ಬಂದರು. ವೆಂಕಟರಾಯರ ಅಜ್ಜ ಹೊಳೆ ಆಲೂರಿನಲ್ಲಿ ಅವರ ಅಳಿಯನ ಜಹಗೀರನ್ನು ನೋಡಿಕೊಳ್ಳುತ್ತಿದ್ದರು. ಹೀಗಾಗಿ ಅವರ ಹೆಸರಿಗೆ 'ಆಲೂರ' ಎಂಬುದು ಅಂಟಿಕೊಂಡಿತು. ವೆಂಕಟರಾಯರು ತಮ್ಮ ವಿದ್ಯಾಭ್ಯಾಸವನ್ನು ಪುಣೆಯಲ್ಲಿ ಮುಗಿಸಿದ ನಂತರ ಹೊಳೆ ಆಲೂರಿನಲ್ಲಿ ಕೆಲವು ದಿನಗಳ ಕಾಲ ಇದ್ದರು. ಹೀಗಾಗಿ ವೆಂಕಟರಾಯರು ರೋಣ ತಾಲ್ಲೂಕಿನವರಾಗುತ್ತಾರೆ. ವಿದ್ವತ್ತಿನಲ್ಲಿ ಮೇರುಗಿರಿಯಂತಿದ್ದ ಆಲೂರ ವೆಂಕಟರಾಯರಿಗೆ ಇತಿಹಾಸದಲ್ಲಿ ಕರ್ನಾಟಕದ ಬೇರುಗಳನ್ನು ಹುಡುಕುವುದೇ ನಿತ್ಯದ ಕೆಲಸವಾಗಿತ್ತು. ೧೯೦೫ರಲ್ಲಿ ಒಮ್ಮೆ ಇವರು ಹಾಳು ಹಂಪೆಗೆ ಭೇಟಿ ನೀಡಿ ಅಲ್ಲಿನ ವಿರೂಪಾಕ್ಷ ಹಾಗೂ ಭುವನೇಶ್ವರಿಯ ಸಾನ್ನಿಧ್ಯದಲ್ಲಿ ಕರ್ನಾಟಕದ ಸ್ಥಿತಿ ಕಂಡು ನೊಂದು ಕರ್ನಾಟಕದ ಏಕೀಕರಣದ ಸಂಕಲ್ಪವನ್ನು ಕೈಗೊಳ್ಳುತ್ತಾರೆ. ಅಂದಿನ ಪ್ರೇರಣೆಯಿಂದ ೧೯೦೭ರಲ್ಲಿ ತಾವು ಹೊರತರುತ್ತಿದ್ದ 'ವಾಗ್ಭೂಷಣ' ಪತ್ರಿಕೆಯಲ್ಲಿ ಕರ್ನಾಟಕ ಏಕೀಕರಣವನ್ನು ಕುರಿತು ಸುದೀರ್ಘವಾದ ಲೇಖನವೊಂದನ್ನು ಬರೆದರು. ಇದು ಅಂದಿನ ಜನನಾಯಕರ ಗಮನ ಸೆಳೆಯಿತು. ಅವರ ಒಳಗಿನ ಏಕೀಕರಣದ ತುಡಿತ ೧೯೧೬ರಲ್ಲಿ ಧಾರವಾಡದಲ್ಲಿ ಗದಿಗೆಯ್ಯ ಹೊನ್ನಾಪೂರಮಠರ ಅಟ್ಟದ ಮೇಲೆ ಹೊನ್ನಾಪೂರಮಠರು, ಮುದುವೀಡು ಕೃಷ್ಣರಾಯರು ಸೇರಿ ಏಕೀಕರಣ ಕುರಿತಾದ ಮಹತ್ವದ ಸಭೆ ನಡೆಸುತ್ತಾರೆ. ಈ ಏಕೀಕರಣದ ಬಗ್ಗೆ ಅನೇಕ ಕಡೆ ಮಹತ್ವದ ಸಭೆಗಳು ನಡೆಯುತ್ತಿರುವಾಗ ಆಲೂರ ವೆಂಕಟರಾಯರು ೧೯೧೭ರಲ್ಲಿ "ಛೇ ಕರ್ನಾಟಕವೆಲ್ಲಿದೆ? ಕರ್ನಾಟಕ ಜಗತ್ತಿನ ನಾಟ್ಯರಂಗದಿಂದ ಎಂದೋ ನಾಮಾವಶೇಷವಾಗಿದೆ! ಇನ್ನೆಲ್ಲಿಯ ಕರ್ನಾಟಕ? ನಾಲ್ಕಾರು ಕಡೆ ಹರಿದು ಹಂಚಿಹೋದ ಕರ್ನಾಟಕವನ್ನು ಹೊಲಿದು ಅಖಂಡವಾಗಿ ಮಾಡುವವರಾರು? ಅಷ್ಟೊಂದು ಅಭಿಮಾನ ನಮ್ಮವರಲ್ಲಿ ಎಲ್ಲುಂಟು?" ಎಂದು ನೋವಿನ ಉದ್ಗಾರ ತೆಗೆಯುತ್ತಾರೆ. ಆದರೆ ಛಲಬಿಡದ ತ್ರಿವಿಕ್ರಮನಂತೆ ಕರ್ನಾಟಕತ್ವದ ಕಲ್ಪನೆಯನ್ನು ಕನಸು ಮನಸ್ಸಿನಲ್ಲಿ ತುಂಬಿಕೊಂಡು ಸ್ವದೇಶಿ ಹಾಗೂ ಅಪ್ಪಟ ರಾಷ್ಟ್ರೀಯತೆಗೆ ತಮ್ಮನ್ನು ಅರ್ಪಿಸಿಕೊಂಡು ಆದಾಯ ಮೂಲದ ವಕೀಲಿವೃತ್ತಿಯನ್ನು ಬಿಟ್ಟು, ರಾಷ್ಟ್ರೀಯ ಶಾಲೆ ತೆರೆದರು. ಇದು ಅವರ ಜೀವನದ ಉಸಿರಾಯಿತು. ಇದರಿಂದ ನಾಡು ನುಡಿ ಸೇವೆ ಎಂಬ ವಿಶಾಲವಾದ ಸಮುದ್ರಕ್ಕೆ ಧುಮುಕಿ ಸಾಕಷ್ಟು ಉಪ್ಪು ನೀರು ಕುಡಿದರು. ನಾಡಿಗಾಗಿ ತಮ್ಮನ್ನು ತಾವು ಸಮಗ್ರವಾಗಿ ಅರ್ಪಿಸಿಕೊಂಡವರು ಕ್ವಚಿತ್ತಾಗಿ ಸಿಗುತ್ತಾರೆ. ಅಂಥವರಲ್ಲಿ ಆಲೂರರು ಒಬ್ಬರು. ಅವರು ಕಂಡ ಏಕೀಕರಣದ ಕನಸು ೧೯೫೬ರಲ್ಲಿ ಅಸ್ತಿತ್ವಕ್ಕೆ ಬಂದಿತಾದರೂ, 'ಕರ್ನಾಟಕ'ವೆಂಬ ಹೆಸರು ಕಾಣದೆ ೧೯೬೪ರಲ್ಲಿ ಅವರು ದೈವಾಧೀನರಾದರು. ಅವರು ಕಂಡ ಕನಸನ್ನು ದಿ। ದೇವರಾಜ ಅರಸು ಅವರು ೧೯೭೩ರಲ್ಲಿ 'ಕರ್ನಾಟಕ'ವೆಂಬ ನಾಮಕರಣ ಮಾಡುವ ಮೂಲಕ ಸಾಕಾರಗೊಳಿಸಿದರು. ಅದನ್ನು ಕಾಣಲು ಅವರು ಈ ನಾಡಿನಲ್ಲಿ ಇರಲಿಲ್ಲ. ಇಂತಹ ಕನ್ನಡ ಕುಲಪುರೋಹಿತರು ಕನ್ನಡ ನಾಡಿಗಾಗಿ, ನುಡಿಗಾಗಿ, ಗಡಿಗಾಗಿ ಮುಂಚೂಣಿಯಲ್ಲಿದ್ದು ತಮ್ಮನ್ನು ತಾವೇ ಸುಟ್ಟುಕೊಂಡು ಕನ್ನಡದ ಜ್ಯೋತಿಯಾದರು. ಅವರು ರೋಣ ತಾಲ್ಲೂಕಿನವರೆಂದು ಹೇಳಲು ಅಭಿಮಾನವೆನ್ನಿಸುತ್ತದೆ. ರಾಷ್ಟ್ರಗೀತೆ ಜನ ಗಣ ಮನದಲ್ಲಿ 'ಕರ್ನಾಟಕ' ಸೇರಬೇಕಾಗಿತ್ತೆಂಬ ಅವರ ಅಂದಿನ ಕನಸು ಇಂದಿಗೂ ಕನಸಾಗಿಯೇ ಉಳಿದಿದೆ.

**ಡಾ॥ ಮಲ್ಲಿಕಾರ್ಜುನ ಕುಂಬಾರ**

ರೋಣ ತಾಲ್ಲೂಕಿನಲ್ಲಿರುವ ಕರ್ನಾಟಕ ಏಕೀಕರಣದ ಇನ್ನೊಬ್ಬ ಹರಿಕಾರ ಜಕ್ಕಲಿಯ ಅಂದಾನಪ್ಪನವರು, ದೊಡ್ಡಮೇಟಿಯವರು, ಅಲ್ಪ ಶಿಕ್ಷಣ ಪಡೆದರೂ ಜನಮನದ ಬೆಂಬಲದಿಂದ ಅಂದಿನ ಮುಂಬೈ ವಿಧಾನ ಸಭೆಯಲ್ಲಿ ಕನ್ನಡ ಮಾತನಾಡಿದ ಈ ಶತಮಾನದ ಆಂಡಯ್ಯ! ೧೯೩೪ರಲ್ಲಿ ಕರ್ನಾಟಕ ಏಕೀಕರಣ ಸಮಿತಿಯ ಅಧ್ಯಕ್ಷರಾಗಿ ಎಸ್. ನಿಜಲಿಂಗಪ್ಪನವರು ಇರುವ ಸಂದರ್ಭದಲ್ಲಿ ಮಂಗಳವೇಡೆ ಶ್ರೀನಿವಾಸ ರಾಯರು ಹಾಗೂ ದೊಡ್ಡಮೇಟಿ ಅಂದಾನಪ್ಪನವರು ಕಾರ್ಯದರ್ಶಿಗಳಾಗಿದ್ದರು. ಇದೇ ಮಂಗಳವೇಡೆ ಅವರು ಕೆ.ಪಿ.ಸಿ.ಸಿ. ಕಾರ್ಯದರ್ಶಿಗಳಾಗಿ ಹುಬ್ಬಳ್ಳಿಗೆ ಬಂದಾಗ ಕರ್ನಾಟಕ ಏಕೀಕರಣ ಚಟುವಟಿಕೆಗಳು ಚುರುಕಾಗಿ ನಡೆದವು. ಅಂದಿನ ಸಂದರ್ಭದಲ್ಲಿ ಬಸರಿಗಿಡದ ವೀರಪ್ಪನವರು, ಯಳಮಲಿ ಶಾಂತಪ್ಪನವರು ಕನ್ನಡ ಚಟುವಟಿಕೆಗಳಿಗೆ ಸಾಕಷ್ಟು ಧನಸಹಾಯ ನೀಡಿದರು. ಬಸರಿಗಿಡದ ವೀರಪ್ಪನವರು ಕೂಡ ರೋಣ ನಗರದ ಕೊಡುಗೈ ದಾನಿಗಳಾಗಿದ್ದರು ಎಂಬುದು ಇಲ್ಲಿ ಗಮನಾರ್ಹ.

೧೯೫೩ರ ಜನವರಿಯಲ್ಲಿ ಹೈದರಾಬಾದ್‌ನಲ್ಲಿ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನ ನಡೆದಾಗ ಇತ್ತ ರೋಣ ತಾಲ್ಲೂಕಿನ ಜಕ್ಕಲಿಯಲ್ಲಿ ಅಂದಾನಪ್ಪನವರು ೨೪-೧೧-೧೯೫೩ರಿಂದ ೨೧ ದಿನಗಳ ಕಾಲ ಕರ್ನಾಟಕ ಏಕೀಕರಣಕ್ಕಾಗಿ ಉಪವಾಸಕ್ಕೆ ಕುಳಿತರು. ಅದೇ ಸಂದರ್ಭದಲ್ಲಿ ಜಕ್ಕಲಿಯಲ್ಲಿ ಕರ್ನಾಟಕ ರಾಜ್ಯ ನಿರ್ಮಾಣದ ಶಿಬಿರ ನಡೆಸಿ ಅದರ ಮೂಲಕ ತಾಲ್ಲೂಕಿನ ಹಳ್ಳಿಹಳ್ಳಿಗಳಿಗೆ ತೆರಳಿ ಅನೇಕ ಹಾಡುಗಾರರನ್ನು, ಚಳುವಳಿಗಾರರನ್ನು ಕರೆಯಿಸಿ ಕಾರ್ಯಕ್ರಮ ನಡೆಸಿದರು. 'ಅರೆಬತ್ತಲೆ ಫಕೀರ' ಗಾಂಧೀಜಿಯವರನ್ನು ರೋಣ ತಾಲ್ಲೂಕಿನ ಜಕ್ಕಲಿಗೆ ಕರೆಯಿಸಿದ ಈ ಅಪ್ಪಟ ಕನ್ನಡದ ಕನಸುಗಾರ ಕರ್ನಾಟಕ ಏಕೀಕರಣವಾಗದಿದ್ದದ್ದಕ್ಕೆ ೧೯೫೪ರಲ್ಲಿ ಮುಂಬೈ ವಿಧಾನಸಭೆಗೆ ರಾಜೀನಾಮೆ ನೀಡಿದರು. ಒಂದು ನಾಡಿಗಾಗಿ, ಭಾಷೆಗಾಗಿ ಅಧಿಕಾರ ತ್ಯಾಗ ಮಾಡುವುದರ ಮೂಲಕ ಅಂದಾನಪ್ಪನವರು ಎತ್ತರಕ್ಕೇರಿದ ವ್ಯಕ್ತಿಗಳಾಗುತ್ತಾರೆ. ಅವರು ಕಂಡ ಕನಸು

೧೯೫೬ರಲ್ಲಿ ಈಡೇರಿತಾದರೂ ೧೯೬೨ರಲ್ಲಿ ನಿಧನರಾದ ಕಾರಣ ೧೯೭೩ರಲ್ಲಿ 'ಕರ್ನಾಟಕ' ನಾಮಕರಣವಾದ ರಾಜ್ಯವನ್ನು ಕಾಣಲಿಲ್ಲ! ಕರ್ನಾಟಕವಿಲ್ಲದ ಭಾರತ ನಮಗೆ ಬೇಕಾಗಿಲ್ಲವೆಂಬ ಪಟ್ಟುಹಿಡಿದ ಅಂದಾನಪ್ಪನವರು ಜಕ್ಕಲಿಯಲ್ಲಿ ನಡೆಸಿದ ಕರ್ನಾಟಕ ರಾಜ್ಯ ನಿರ್ಮಾಣ ಶಿಬಿರದ ಸಂದರ್ಭದಲ್ಲಿ ಅಖಂಡ ಕರ್ನಾಟಕದ ಕಲ್ಪನೆ ಬರುವ ರೀತಿಯಲ್ಲಿ ಗದಗಿನ ಕಲಾವಿದರಾದ ಸಿ. ಎನ್. ಪಾಟೀಲರಿಂದ ಭುವನೇಶ್ವರಿಯ ತೈಲ ವರ್ಣ ಚಿತ್ರವನ್ನು ಬರೆಯಿಸಿ, ಕನ್ನಡತನವನ್ನು ಮೆರೆದರು. ಇವರೇ ಮುಂದೆ ಕೆಲವು ದಿನಗಳ ಕಾಲ ಕರ್ನಾಟಕ ರಾಜ್ಯದ ಸಣ್ಣ ನೀರಾವರಿ ಸಚಿವರಾಗಿ ಉತ್ತಮ ಕಾರ್ಯವನ್ನು ಕೂಡ ಮಾಡಿದರು. ಇಂತಹವರು ರೋಣದವರೆಂದು ಹೇಳಲು ತುಂಬಾ ಅಭಿಮಾನವೆನ್ನಿಸುತ್ತದೆ.

ಇವರಲ್ಲದೆ ಈ ತಾಲ್ಲೂಕಿನ ಮಣ್ಣಿನ ಮಕ್ಕಳಾದ ರಂ. ಶ್ರೀ. ಮುಗಳಿ (ಹೊಳೆ ಆಲೂರು), ಡಾ॥ ಆರ್. ಸಿ. ಹಿರೇಮಠ (ಕುರಡಗಿ), ಭವ್ಯಮಾನವ ಕೃತಿಯ ಸಂ. ಶಿ. ಭೂಸನೂರಮಠ (ನಿಡಗುಂದಿ), ಡಾ॥ ಸೋಮಶೇಖರ ಇಮ್ರಾಪೂರ, ಡಾ॥ ಗಿರಡ್ಡಿ ಗೋವಿಂದ ರಾಜು (ಅಬ್ಬಿಗೇರಿ), ಎಂ. ಆರ್. ಗಜೇಂದ್ರಗಡ, ಡಾ॥ ಬಿ. ವ್ಹಿ. ಮಲ್ಲಾಪೂರ (ಇಟಗಿ), ಎಂ. ಡಿ. ಗೋಗೇರಿ (ಗೊಗೇರಿ), ಅಬ್ಬಿಗೇರಿ ವಿರೂಪಾಕ್ಷಪ್ಪ (ಸೂಡಿ), ಅಂದಾನಪ್ಪ ಕುಂದರಗಿ (ಗಜೇಂದ್ರಗಡ), ಶಿವಪ್ಪ ನೆಲ್ಲೂರ (ರೋಣ) ಹೀಗೆ ಹಲವರು ತಮ್ಮ ಸಾಹಿತ್ಯ ಕೃಷಿಯ ಮೂಲಕ, ಹೋರಾಟದ ಮೂಲಕ ಕರ್ನಾಟಕ ಏಕೀಕರಣವನ್ನು ಬೆಂಬಲಿಸಿದರು. ಹಲವರು ಹೋರಾಟದ ಹಾದಿಯಲ್ಲಿ ನಡೆದರು. ಅವರೂ ಕೂಡ ಏಕೀಕರಣದ ರೂವಾರಿಗಳಾದರು. ರೋಣ ತಾಲ್ಲೂಕಿನ ಬೆಳವಣಿಕಿ ಗ್ರಾಮದ ಯರಾಸಿ ಭರಮಪ್ಪನವರು, ಅಬ್ಬಿಗೇರಿಯ ಬಸವನಗೌಡರು ತಾವು ಕಟ್ಟಿದ ನಾಟಕ ಕಂಪನಿಗಳ ಮೂಲಕ ಸ್ವಾತಂತ್ರ್ಯದ ಮತ್ತು ಏಕೀಕರಣದ ಕಿಡಿ ಹೊತ್ತಿಸಿ ಜನಜಾಗೃತಿಯನ್ನುಂಟುಮಾಡಿದರು. (ರೋಣ ತಾಲ್ಲೂಕಿನ ಹಿನ್ನೆಲೆಯಲ್ಲಿ ಈ ಲೇಖನವನ್ನು ಬರೆಯಲಾಗಿದೆ). ಈ ಎಲ್ಲ ಮಹನೀಯರೊಂದಿಗೆ ನಾಡಿನ ಧೀಮಂತರಾದ ನಾ. ಸು. ಹರ್ಡೀಕರ, ರಂಗನಾಥ ದಿವಾಕರ, ಡೆಪ್ಯೂಟಿ ಚನ್ನಬಸಪ್ಪನವರು, ಹರ್ಡೇಕರ ಮಂಜಪ್ಪನವರು, ಬಿ.ಎಂ.ಶ್ರೀ., ಬೆನಗಲ್ಲ ರಾಮರಾಯರು, ಕಯ್ಯಾರ ಕಿಞ್ಞಣ್ಣ ರೈ, ಅ.ನ.ಕೃ., ಕುವೆಂಪು, ಕಡಪಾ ರಾಘವೇಂದ್ರರಾಯರು, ಹೊಸಮನಿ ಶಿದ್ದಪ್ಪನವರು, ಕಾರ್ನಾಡ ಸದಾಶಿವರಾಯರು, ಶಾಂತವೇರಿ ಗೋಪಾಲಗೌಡರಾದಿಯಾಗಿ ಹಲವರು ಪ್ರಾತಃಸ್ಮರಣೀಯರಿದ್ದರು. ಇವರೆಲ್ಲರನ್ನು ಮನತುಂಬಿ, ತನುತುಂಬಿ, ಭಾವತುಂಬಿ ನೆನಪಿಸೋಣ. ಇಂತಹ ಮಹಾನುಭಾವರಿಗೆ ನಾವೆಲ್ಲರೂ ಋಣಿಯಾಗಬೇಕು. ಅದೇ ಅವರಿಗೆ ನಾವು ನೀಡುವ ಗೌರವವಾಗುತ್ತದೆ.

**ಡಾ॥ ಮಲ್ಲಿಕಾರ್ಜುನ ಕುಂಬಾರ**
'ವಚನ', ರಾಜೂರ - ೫೮೨ ೨೩೦, ರೋಣ ತಾಲ್ಲೂಕು, ಗದಗ ಜಿಲ್ಲೆ

## ಅರ್ಥವಿಲ್ಲದ ಕವಿತೆ

**ಈ** ನದಿಗಳಿಗೆ ಒಂದಿಷ್ಟು
ಕನಸುಗಳಿವೆ
ಹರಿಯುವದರಲ್ಲಿಯೇ
ಅವಕ್ಕೆ ಸುಖ
ಸುಖದಲ್ಲಿ ಅವುಗಳ ಕನಸುಗಳ
ಸಾಕಾರ
ಆದರೆ ನಾವು ಅಣೆಕಟ್ಟು ಕಟ್ಟಿ
ಅವುಗಳನ್ನು ಗರ್ಭೀಕರಿಸಿದೆವು
ಈಗ ನೋಡಿ
ಎಲ್ಲಿ ನೋಡಿದರಲ್ಲಿ
ನರ್ಸಿಂಗ್ ಹೋಮ್‌ಗಳು
ದುರ್ದೈವಿ ಅವು
ಅಬಾರ್ಶನ್ ಸೆಂಟರ್‌ಗಳು

**ಬಸವರಾಜ ಹೂಗಾರ**
ಸಹಾಯಕ ನಿರ್ದೇಶಕ, ಕನ್ನಡ - ಸಂಸ್ಕೃತಿ ಇಲಾಖೆ
ನಾಲ್ವಡಿ ಕಲಾ ಮಂದಿರ, ವಿ. ವಿ. ರಸ್ತೆ, ಮಂಡ್ಯ - ೫೭೧೪೦೧



## ಸಾದರ ಸ್ವೀಕಾರ

**ಸಹಯಾನ** (ಡಾ॥ ಆರ್. ವಿ. ಭಂಡಾರಿಯವರ ಕೃತಿಗಳೊಂದಿಗೆ)
ಸಂ. ಎಂ. ಜಿ. ಹೆಗಡೆ
*ಪುಟ : ೧೩೨* *ಬೆಲೆ : ರೂ. ೫೦*
**ಚಿಂತನ ಪುಸ್ತಕ ಮಳಿಗೆ,** ಪಂಡಿತ್ ಸಾರ್ವಜನಿಕ ಲೈಬ್ರರಿ, ಸಿರಸಿ, ಉತ್ತರ ಕನ್ನಡ ಜಿಲ್ಲೆ - ೫೮೧೪೦೧.

**ವಾತಾಪಿ ಚಾಲುಕ್ಯ ಉತ್ಸವ ೨೦೦೯ ಆಕರ ಗ್ರಂಥ**
*ಪ್ರ. ಸಂ. ಡಾ॥ ವಿಜಯಕುಮಾರ ಕಟಗಿಹಳ್ಳಿಮಠ*
*ಪುಟ : ೪೪೨* *ಬೆಲೆ : ರೂ. ೨೫೦*
**ಚಾಲುಕ್ಯ ಉತ್ಸವ ಸಮಿತಿ - ೨೦೦೯,** ಜಿಲ್ಲಾ ಆಡಳಿತ ಭವನ, ನವನಗರ - ಬಾಗಲಕೋಟ.

**ಈ ಕ್ಷಣ** (ಪ್ರಬಂಧ ಸಂಕಲನ) ಡಾ॥ ಸಿಪಿಕೆ
*ಪುಟ : ೨೫೬* *ಬೆಲೆ : ರೂ. ೭೫*
**ಪ್ರಸಾರಾಂಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ,** ಮಾನಸ ಗಂಗೋತ್ರಿ, ಮೈಸೂರು - ೫೭೦೦೦೬

**ಮಣಿಮಾಲೆ** (ಚಿಂತನಗಳು) ಡಾ॥ ಸಿಪಿಕೆ
*ಪುಟ : ೭೨* *ಬೆಲೆ : ರೂ. ೩೦*
**ಅಖಿಲ ಏಜೆನ್ಸೀಸ್,** ರೇಣುಕಾಚಾರ್ಯ ದೇವಸ್ಥಾನದ ರಸ್ತೆ, ಲಕ್ಷ್ಮೀ ಟಾಕೀಸ್ ಹಿಂಭಾಗ, ಮೈಸೂರು-೫೭೦೦೨೪

**ಸಾಹಿತ್ಯ ಪ್ರವೇಶ** (ಸಾಹಿತ್ಯ ಅಧ್ಯಯನ) ವಿಲಿಯಂ ಹೆನ್ರಿ ಹಡ್ಸನ್
ಅನು : ಸಿಪಿಕೆ
*ಪುಟ : ೨೭೭* *ಬೆಲೆ : ರೂ. ೧೫೦*
**ಚೇತನ ಬುಕ್ ಹೌಸ್,** ರೇಣುಕಾಚಾರ್ಯ ದೇವಸ್ಥಾನದ ರಸ್ತೆ, ಲಕ್ಷ್ಮೀ ಟಾಕೀಸ್ ಹಿಂಭಾಗ, ಮೈಸೂರು - ೫೭೦೦೨೪

**ನೆನಪಿನ ಮೆಲುಕು** (ಪದ್ಯ ಸಂಕಲನ) ಎಂ. ಎಸ್. ಭಾಸ್ಕರ್
*ಪುಟ : ೭೨* *ಬೆಲೆ : ರೂ. ೫೦*
**ರಾಘವ ಪ್ರಕಾಶನ, 'ಅರ್ಚನ',** ೧ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ, ಹೊಸ ಕೆಂಪೇಗೌಡ ಬಡಾವಣೆ, ಕತ್ರಿಗುಪ್ಪೆ, ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦೦೮೫

**ಸಹಕಾರಿ ಪಿತಾಮಹ ಶಿದ್ದನಗೌಡ ಪಾಟೀಲ** (ಜೀವನ ಸಾಧನ)
ಎಂ. ಮಂಜುನಾಥ ಬಮ್ಮನಕಟ್ಟಿ
*ಪುಟ : ೧೨೬* *ಬೆಲೆ : ರೂ. ೮೦*
**ಧನ್ಯಾ ಪ್ರಕಾಶನ,** ಮೈಲಾರಪ್ಪ ಬಮ್ಮನಕಟ್ಟಿಯವರ ಮನೆ ಶಿಗ್ಲಿ - ೫೮೨೨೧೦, ಶಿರಹಟ್ಟಿ - ಗದಗ.

**ಹಣತೆಗಳ ಹಾಡು** (ಕವನ ಸಂಕಲನ) ಕೊಂಪಿ ಗುರುಬಸಪ್ಪ
*ಪುಟ : ೫೮* *ಬೆಲೆ : ರೂ. ೫೦*
**ಆಹ್ವಾನ ಪ್ರಕಾಶನ,** ಬಸರಕೋಡು - ೫೮೩೨೨೪, ಹಗರಿ ಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ

**ಮತಧರ್ಮ** - ಒಂದು ಪ್ರಬಂಧ ಜಾರ್ಜ್ ಥಾಮ್ಸನ್
ಅನು : ಎಚ್. ಕೆ. ರಾಮಚಂದ್ರಮೂರ್ತಿ
*ಪುಟ : ೪೮* *ಬೆಲೆ : ರೂ. ೩೫*
**ಮಾ-ಲೆ ಪ್ರಕಾಶನ,** ೨-ಎಫ್, ಪವನ್ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಅಡ್ಡರಸ್ತೆ, ಕಾವೇರಿ ನಗರ, ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫



# ಶಿಲ್ಪವೊಂದರ ಸಂದೇಶ

**ಒಂ**ದು ಕಾಲದ, ಒಂದು ಸಮಾಜದ ಜನಜೀವನ ರೀತಿ ನೀತಿಗಳಿಗೆ ಆಯಾ ಕಾಲದ ಕಲೆಯು ಒಂದು ನೇರ ಮತ್ತು ಪ್ರತ್ಯಕ್ಷ ಸಾಕ್ಷಿ. ಒಬ್ಬ ವ್ಯಕ್ತಿಯ ಪ್ರಕಾರ ಮನಸ್ಸಿಗೆ ಯಾವುದು ತೋಚುವುದಿಲ್ಲವೊ ಅದು ಕಣ್ಣಿಗೆ ಕಾಣಿಸುವುದಿಲ್ಲ. ಆದ್ದರಿಂದ ಆಯಾ ಕಾಲದ ಕಲಾಕೃತಿಯು ಕಣ್ಣಿಗೆ ಕಾಣಿಸುವುದಕ್ಕೆ ಬಹಳ ಹತ್ತಿರವಿರುತ್ತದೆ. ಇಂತಹುದೇ ಒಂದು ಉದಾಹರಣೆ ಇಲ್ಲಿರುವ ಶಿಲ್ಪ.

ಇದು ಚೋಳರ ಕಾಲದ ಒಂದು ದೇವಸ್ಥಾನದಲ್ಲಿ ಒಳಾಂಗಣದ ಕಲ್ಲುಕಂಬದ ಮೇಲೆ ಕಂಡುಬಂದ ಶಿಲ್ಪ. ಇದರ ಉದ್ದ ಅಗಲಗಳು ೧ ಚದರ ಅಡಿಗಿಂತ ಸ್ವಲ್ಪ ಕಡಿಮೆ. ಇದು ತಾಯಿ ಮಗುವಿಗೆ ಹಾಲೂಡಿಸುವ ದೃಶ್ಯವೆಂದು ಯಾರಾದರೂ ಹೇಳಬಹುದಾದಷ್ಟು ಸ್ಪಷ್ಟವಾಗಿದೆ. ತಾಯಿ ತನ್ನ ಮಗುವಿನ ಮೇಲೆ ಹಾಗೂ ಮಗುವು ತನ್ನ ಆಹಾರದ ಮೇಲೆ ನೆಟ್ಟಿರುವ ದೃಷ್ಟಿ ಕೂಡ ಸ್ಪಷ್ಟವಾಗಿದೆ. ಮಗುವಿನ ವಯಸ್ಸು ಎರಡು ವರ್ಷಗಳಿಗಿಂತ ಹೆಚ್ಚಿರಬಹುದೆಂದು ತೋರುತ್ತದೆ. ಆಕೆಯು ತನ್ನ ತೊಡೆಯ ಮೇಲೆ ಮಗುವನ್ನು ಕೂರಿಸಿಕೊಂಡು ಹಾಲೂಡಿಸುತ್ತಿದ್ದಾಳೆ. ಆಕೆಯ ಉದ್ದೇಶ ಮನುಕುಲದ ಮುಂದಿನ ಪೀಳಿಗೆಗೆ ಅತ್ಯಂತ ಉನ್ನತ ಆಹಾರವನ್ನೊದಗಿಸುವುದೆಂದಾಗಲಿ, ಪ್ರತಿ ಜೀವಿಯ ಬೆಳೆಯುವ ದಿನಗಳ ಮೊದಲ ಆಹಾರ ಪರಿಪೂರ್ಣ ಪೌಷ್ಟಿಕಾಂಶ ದಿಂದರಬೇಕೆಂದಾಗಲಿ ಆಗಿರಲಿಕ್ಕಿಲ್ಲ. ಆದಾಗ್ಯೂ ಈ ಉದ್ದೇಶಗಳು ಸಫಲವಾಗಿವೆ. ಈ ಶಿಲ್ಪಿಗೆ ಅಂದಿನ ಸಮಾಜದ ಬಹು ಸಾಮಾನ್ಯ ದೃಶ್ಯ ಇದಾಗಿದ್ದಿರಬಹುದು. ಇದರಲ್ಲಿ ಅಶ್ಲೀಲತೆಯ ಸೋಂಕು ಇರದಂತೆ ಚಿತ್ರಿಸಬೇಕೆಂದಾದಲ್ಲಿ ಅವನ ತಾಯಿಯನ್ನೇ ಕಲ್ಪಿಸಿಕೊಂಡು ಈ ಚಿತ್ರ ಮೈದಳೆದಿರಬಹುದು.



ಈಗ ಹಲವು ವರುಷಗಳಿಂದ ಈ ರೂಢಿಯು ತಪ್ಪಿಹೋಗಿತ್ತು. ಬಾಟಲಿಯಲ್ಲಿನ ಹಾಲು, ಡಬ್ಬದ ಹಾಲು, ತಾಯಿ ಹಾಲಿಗಿಂತ ಉತ್ಕೃಷ್ಟ ಎನ್ನುವ ನಾಗರಿಕತೆಯ ಸೋಗಿಗೆ ಮರುಳಾಗಿ ಈ ಅಮೃತವನ್ನು ಹಲವು ಪೀಳಿಗೆಗಳ ಹಸುಳೆಗಳಿಗೆ ತಪ್ಪಿಸಲಾಗಿತ್ತು. ಇದರಲ್ಲಿ ನಾಗರಿಕ ತಾಯಂದಿರು ಬಳ್ಳಿಯಂತೆ ಬಳುಕುವ ಉದ್ದೇಶ ಒಂದಾದರೆ, ಹಲವು ಕಂಪನಿಗಳಿಗೆ ಡಬ್ಬದ ಹಾಲು ಮನಸೆಳೆಯುವ ಜಾಹಿರಾತುಗಳ ಮೂಲಕ ಮಾರುವುದು ಇನ್ನೊಂದಾಗಿತ್ತು. ಇಂತಹ ಅನೇಕ ಕಂಪನಿಗಳು ತಮ್ಮ ಹೊಟ್ಟೆಪಾಡಿಗಾಗಿ ಹಲವು ಕಂದಮ್ಮಗಳನ್ನು ತಮ್ಮ ನಿಸರ್ಗದತ್ತ ಆಹಾರದಿಂದ ವಂಚಿತರನ್ನಾಗಿ ಮಾಡಿದ್ದು ವಿಪರ್ಯಾಸ. ತಾಯಿಯ ಹಾಲು ಮಗುವಿಗೆ ಅಗತ್ಯ ಪೌಷ್ಟಿಕಾಂಶಗಳನ್ನೊದಗಿಸುವುದಷ್ಟೇ ಅಲ್ಲದೆ, ಅದನ್ನು ಕಾಯಿಲೆಗಳಿಂದ ತಡೆಗಟ್ಟುವ ಶಕ್ತಿ ಹೊಂದಿದೆ. ಮನುಷ್ಯನ ಮೆದುಳಿನ ವಿಕಾಸಕ್ಕೆ ಬೇಕಾಗುವ ಕೊಬ್ಬಿನ ಅಂಶ ಇರುವ ಆಮ್ಲವು ತಾಯಿ ಹಾಲಿನಲ್ಲಿ ಮಾತ್ರ ಸಿಗುವಂತಹದು ಎಂದು ಹಲವಾರು ಪ್ರಯೋಗಗಳ ಮೂಲಕ ಸಾಬೀತಾಗಿದೆ. ಇದರಿಂದ ಮಗುವು ಪ್ರಯೋಜನ ಪಡೆಯುವುದಷ್ಟೇ ಅಲ್ಲದೆ, ತಾಯಿಗೂ ಪ್ರಯೋಜನಗಳಿವೆ. ತಾಯಿ ಹಾಲು ಕುಡಿಸುವುದರಿಂದ ತನ್ನ ಕೊಬ್ಬು ಕರಗಿಸಿ ಮಗುವಿಗೆ ಹಾಲಿನ ಮೂಲಕ ನೀಡುವುದರಿಂದ ತಾಯಿಯು ತನ್ನ ಮೊದಲಿನ ರೂಪವನ್ನು ಪಡೆದುಕೊಳ್ಳಬಹುದು ಮತ್ತು ಕ್ಯಾನ್ಸರ್‌ನಂತಹ ಕಾಯಿಲೆಗಳಿಂದ ತನ್ನನ್ನು ರಕ್ಷಿಸಿಕೊಳ್ಳಬಹುದು. ತಾಯಿಯ ಹಾಲು ಬೇರೆ ಹಾಲಿನ ಉತ್ಪನ್ನಗಳಿಗಿಂತ ಹಿಂದೆ ಬಿದ್ದಿಲ್ಲ. ಇದು ಕಣ್ಣಿಗೆ ಕಾಣಿಸದಿರುವುದರಿಂದ ಹೆಚ್ಚಿನ ದೇಶಗಳು ಇದನ್ನು ಒಂದು ಆಹಾರ ಉತ್ಪನ್ನವೆಂದು ಪರಿಗಣಿಸಿಯೇ ಇಲ್ಲ. ಹುಟ್ಟಿದ ನಂತರ ೪ ತಿಂಗಳವರೆಗೆ ಮಗುವು ತಾಯಿಯನ್ನೇ ಅವಲಂಬಿಸಿ ಇರುವುದರಿಂದ ಇದು ಪ್ರಾಥಮಿಕ ಆಹಾರವಷ್ಟೇ ಅಲ್ಲ, ಸೂಕ್ಷ್ಮ ಮತ್ತು ಸಮತೋಲನ ಆಹಾರ.

ಈ ನಿಟ್ಟಿನಲ್ಲಿ ಈ ಶಿಲ್ಪವು ಅಂದಿನ ಸಮಾಜಕ್ಕೆ ಹಿಡಿದ ಕನ್ನಡಿಯಾದರೆ, ಇಂದಿನ ಸಮಾಜಕ್ಕೆ ಹಿಡಿಯಬೇಕಾಗಿರುವ ಭೂತಗನ್ನಡಿ ಅಲ್ಲವೆ ?

**ಡಾ|| ಲಲಿತ ಎಚ್. ಎಸ್.**

ನಂ.೪, ಎನ್.ಇ.ಪಿ.ಎಸ್. ಎದುರು, ಶಂಕರಪುರ, ೨ನೇ ಮುಖ್ಯರಸ್ತೆ, ತುಮಕೂರು - ೫೭೨೧೦೨

ತಾಯಿಯ ಹಾಲು ಮಗುವಿಗೆ ಅಗತ್ಯ ಪೌಷ್ಟಿಕಾಂಶಗಳನ್ನೊದಗಿಸುವುದಷ್ಟೇ ಅಲ್ಲದೆ, ಅದನ್ನು ಕಾಯಿಲೆಗಳಿಂದ ತಡೆಗಟ್ಟುವ ಶಕ್ತಿ ಹೊಂದಿದೆ. ಮನುಷ್ಯನ ಮೆದುಳಿನ ವಿಕಾಸಕ್ಕೆ ಬೇಕಾಗುವ ಕೊಬ್ಬಿನ ಅಂಶ ಇರುವ ಆಮ್ಲವು ತಾಯಿ ಹಾಲಿನಲ್ಲಿ ಮಾತ್ರ ಸಿಗುವಂತಹದು ಎಂದು ಹಲವಾರು ಪ್ರಯೋಗಗಳ ಮೂಲಕ ಸಾಬೀತಾಗಿದೆ. ಇದರಿಂದ ಮಗುವು ಪ್ರಯೋಜನ ಪಡೆಯುವುದಷ್ಟೇ ಅಲ್ಲದೆ ತಾಯಿಗೂ ಪ್ರಯೋಜನಗಳಿವೆ. ತಾಯಿ ಹಾಲು ಕುಡಿಸುವುದರಿಂದ ತನ್ನ ಕೊಬ್ಬು ಕರಗಿಸಿ ಮಗುವಿಗೆ ಹಾಲಿನ ಮೂಲಕ ನೀಡುವುದರಿಂದ ತಾಯಿಯು ತನ್ನ ಮೊದಲಿನ ರೂಪವನ್ನು ಪಡೆದುಕೊಳ್ಳಬಹುದು ಮತ್ತು ಕ್ಯಾನ್ಸರ್‌ನಂತಹ ಕಾಯಿಲೆಗಳಿಂದ ತನ್ನನ್ನು ರಕ್ಷಿಸಿಕೊಳ್ಳ ಬಹುದು.
ತಾಯಿಯ ಹಾಲು ಬೇರೆ ಹಾಲಿನ ಉತ್ಪನ್ನಗಳಿಗಿಂತ ಹಿಂದೆ ಬಿದ್ದಿಲ್ಲ.

# ಕಕ್ಕಿಲ್ಲಾಯ – ೯೦

# ನಿರಂತರ

## ಸಂಭಾವನಾ ಗ್ರಂಥ ಸಮರ್ಪಣೆ



**ಎಂ.** ಎಸ್. ಕೃಷ್ಣನ್ ಸ್ಮರಣ ಸಂಸ್ಥೆಯು ತಾ॥ ೨೨-೩-೨೦೦೯ ರಂದು ಬೆಂಗಳೂರಿನ ಸೆಂಟ್ರಲ್ ಕಾಲೇಜ್ ಆವರಣದಲ್ಲಿರುವ ಸೆನೆಟ್ ಸಭಾಂಗಣದಲ್ಲಿ ಏರ್ಪಾಡು ಮಾಡಿದ್ದ ಸಮಾರಂಭದಲ್ಲಿ ೯೦ ತುಂಬಿದ ಸಂಗಾತಿ ಬಿ. ವಿ. ಕಕ್ಕಿಲ್ಲಾಯ ಅವರಿಗೆ 'ನಿರಂತರ' ಸಂಭಾವನಾ ಗ್ರಂಥ ಅರ್ಪಿಸಲಾಯಿತು. ಶ್ರೀ ಕೋ. ಚೆನ್ನಬಸಪ್ಪ ಅಧ್ಯಕ್ಷತೆ ವಹಿಸಿದ್ದರು. ಮುಖ್ಯ ಅತಿಥಿಯಾಗಿ ಸಂಗಾತಿ ಎಂ. ಸಿ. ನರಸಿಂಹನ್ ಭಾಗವಹಿಸಿದ್ದರು. ಡಾ॥ ಎನ್. ಗಾಯತ್ರಿ ಅವರು ಕೃತಿ ಪರಿಚಯ ಮಾಡಿಕೊಟ್ಟರು. ಶ್ರೀಯುತರಾದ ಬಿ. ಎ. ಮೊಹಿದೀನ್, ಸುಬ್ಬಯ್ಯ ಶೆಟ್ಟಿ, ಡಾ॥ ಜಿ. ರಾಮಕೃಷ್ಣ ಅಭಿನಂದನ ಭಾಷಣ ಮಾಡಿದರು. ಡಾ॥ ಸಿದ್ದನಗೌಡ ಪಾಟೀಲ, ಸ್ಮರಣ ಸಂಸ್ಥೆಯ ಕಾರ್ಯದರ್ಶಿ ಶ್ರೀ ಕೆ. ಎಸ್. ಪಾರ್ಥಸಾರಥಿ ಹಾಗೂ ಭಾರಿ ಸಂಖ್ಯೆಯ ಅಭಿಮಾನಿಗಳು ಉಪಸ್ಥಿತರಿದ್ದರು. ಸನ್ಮಾನ ಸ್ವೀಕರಿಸಿದ ಬಿ. ವಿ. ಕಕ್ಕಿಲ್ಲಾಯರು ಸ್ಫೂರ್ತಿದಾಯಕವಾದ ಭಾಷಣ ಮಾಡಿದರು. ಅದೇ ಸಂದರ್ಭದಲ್ಲಿ ಮಂಗಳೂರು ವಿಶ್ವವಿದ್ಯಾಲಯದ ಸಮೂಹ ಸಂವಹನ ಮತ್ತು ಪತ್ರಿಕೋದ್ಯಮ ವಿಭಾಗದ ವಿದ್ಯಾರ್ಥಿನಿ ಹಲೀಮತ್ ಸ-ಅ-ದಿಯ ಅವರು ಇಂಗ್ಲಿಷಿನಿಂದ ಕನ್ನಡಕ್ಕೆ ಅನುವಾದಿಸಿರುವ ಎ. ಬಿ. ಬರ್ಧನ್ ಅವರ 'ಹುತಾತ್ಮ ಭಗತ್ ಸಿಂಗ್' ಕೃತಿಯನ್ನು ಬಿ. ವಿ. ಕಕ್ಕಿಲ್ಲಾಯರು ಅನಾವರಣಗೊಳಿಸಿದರು. ಬೆಂಗಳೂರಿನ ಹಲವು ಕಾರ್ಮಿಕ ಸಂಘಗಳ ಸದಸ್ಯರು ಕಕ್ಕಿಲ್ಲಾಯರನ್ನು ಅಭಿನಂದಿಸಿ ಹಾರಗಳನ್ನು ಅರ್ಪಿಸಿದರು.

– ಕೆ. ಪಿ. ಸ್ವಾಮಿ





Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Chief Editor : Dr. G. Ramakrishna

